# ತತ್ವಾರ್ಥಸೂತ್ರ

ಪಂ. ವರ್ಧಮಾನ ಶಾಸ್ತ್ರಿ



ಪ್ರಕಾಶಕ
ವಿವೇಕೋದಯ ಗ್ರಂಥಮಾಲೆ
ಗುಡಿಬಂಡೆ : ಕೋಲಾರ ಜಿಲ್ಲೆ

# ತತ್ವಾರ್ಥಸೂತ್ರ

ಪಂ. ವರ್ಧಮಾನ ಶಾಸ್ತ್ರಿ

ಪ್ರಕಾಶನ
ವಿವೇಕೋದಯ ಗ್ರಂಥಮಾಲೆ
ಗುಂಡಿಬಂಡೆ : ಕೋಲಾರ ಜಿಲ್ಲೆ




ಸ್ಯಾದ್ವಾದ ಚಾರಿತ್ರರತ್ನ : ಶ್ರೀ ವರ್ಧಮಾನ ಶಾಸ್ತ್ರಿಯವರು
ಸೋಲಾಪುರ

# ಪ್ರಸ್ತಾವನೆ

ಹಿಂದು ಸಂಪ್ರದಾಯದಲ್ಲಿ ಶಾಂಕರಸೂತ್ರ ಹಾಗು ಭಗವನ್‌ಗೀತೆ ಇದ್ದಂತೆ ಜೈನಧರ್ಮದಲ್ಲಿ ತತ್ವಾರ್ಥಸೂತ್ರದ ಸ್ಥಾನವಿದೆ. ಎಂದು ಹೇಳಿದರೆ ತಪ್ಪಾಗಲಾರದು. ತತ್ವಾರ್ಥಸೂತ್ರದ 1 ನೇಯ ಅಧ್ಯಾಯದಿಂದ 4ನೇ ಅಧ್ಯಾಯದವರೆಗೆ ಜೀವ ತತ್ವದ ವರ್ಣನೆ, 5ನೇ ಅಧ್ಯಾಯದಲ್ಲಿ ಅಜೀವತತ್ವ, 6 ನೇ ಹಾಗು 7 ನೇ ಅಧ್ಯಾಯಗಳಲ್ಲಿ ಆಸ್ರವತತ್ವದ, 8 ನೇ ಅಧ್ಯಾಯದಲ್ಲಿ ಬಂಧತತ್ವ 9 ನೇ ಅಧ್ಯಾಯದಲ್ಲಿ ಸಂವರ ಮತ್ತು ನಿರ್ಜರೆ ಹಾಗು 10 ನೇ ಅಧ್ಯಾಯದಲ್ಲಿ ಮೋಕ್ಷತತ್ವದ ವಿವೇಚನೆಯನ್ನು ಮಾಡಲಾಗಿದೆ. ಆದುದರಿಂದ ಇದಕ್ಕೆ ತತ್ವಾರ್ಥಸೂತ್ರವೆಂದು ನಾವು !

ಮೊದಲಿನಸೂತ್ರ "ಸಮ್ಯಗ್‌ದರ್ಶನ ಜ್ಞಾನಚಾರಿತ್ರಾಣಿ ಮೋಕ್ಷಮಾರ್ಗಃ" ಇರುವುದರಿಂದ ಇದಕ್ಕೆ 'ಮೋಕ್ಷಶಾಸ್ತ್ರ' ವೆಂದೂ ಕರೆಯುತ್ತಾರೆ.

ಶ್ವೇತಾಂಬರ- ದಿಗಂಬರ ಈ ಸಂಪ್ರದಾಯದಲ್ಲಿಯೂ ಇದು ಮಾನ್ಯ ವಾಗಿದೆ. ಇದರ ರಚಯಿತ ಉಮಾಸ್ವಾಮಿಗಳು. ಶ್ವೇತಾಂಬರರು ಇವರಿಗೆ ಉಮಾಸ್ವಾತಿಗಳೆಂದು ಕರೆಯುತ್ತಾರೆ.

ಕೆಳಗಿನ ಶ್ಲೋಕಗಳು ಉಮಾಸ್ವಾಮಿಗಳ ವಿಷಯವಾಗಿ ಇವೆ.

ತತ್ವಾರ್ಥಸೂತ್ರಕರ್ತಾರಂ ಗೃದ್ಧ ಪಿಚ್ಛೋಪಲಕ್ಷಿತಂ।
ವಂದೆ ಗಣೇಂದ್ರ ಸಂಜಾತಮುಮಾಸ್ವಾಮಿ ಮುನೀಶ್ವರಂ ॥
ತತ್ವಾರ್ಥಸೂತ್ರಕರ್ತಾರಮುಮಾಸ್ವಾತಿ ಮುನೀಶ್ವರಂ ।
ಶೃತಕೇವಲಿ ದೇಶೀಯಂ ವಂದೇ ಹಂ ಗುಣಮಂದಿರಂ ॥

ಇದರಲ್ಲಿ ಉಮಾಸ್ವಾಮಿಗಳನ್ನು ಶೃತಕೇವಲಿಯ ವಂಶಜರೆಂದು ಹೇಳಿದ್ದಾರೆ.

ಶ್ರವಣಬೆಳ್ಗೊಳದ ಶಿಲಾಲೇಖದಲ್ಲಿ ಈ ಕೆಳಗಿನ ಶ್ಲೋಕವು ಪ್ರಾಪ್ತ ವಾಗದೆ.

ಅಭೂದುಮಾಸ್ವಾತಿಮುನೀಶ್ವರೋಸಾ-
ವಾಚಾರ್ಯಶಬ್ದೋತ್ತರಗೃದ್ಧಪಿಚ್ಛ ।
ತದನ್ವಯೇ ತತ್ಸದೃಶೋಸ್ತಿ ನಾನ್ಯ
ಸ್ತಾತ್ಕಾಲಿಕಾಶೇಷ ಪದಾರ್ಥವೇದೀ ॥

ಅಭೂದುಮಾಸ್ವಾತಿ ಮುನಿಃ ಪವಿತ್ರ
ವಂಶೆತದೀಯ ಸಕಲಾರ್ಥವೇದಿ ।
ಸೂತ್ರೀಕೃತಂ ಯೇನ ಜಿನಪ್ರಣೀತಂ
ಶಾಸ್ತ್ರಾರ್ಥಜಾತಂ ಮುನಿಪುಂಗವೇನ ॥

ಈ ಉಮಾಸ್ವಾಮಿಗಳನ್ನು ಕುಂದ ಕುಂದಾಚಾರ್ಯರ ವಂಶಜರೆಂದು ಹೇಳಿದ್ದಾರೆ. ಇದರಿಂದ ಮೂಲಗ್ರಂಥವು ಉಮಾಸ್ವಾಮಿಗಳಿಂದ ರಚಿತ ವೆಂದು ಸ್ಪಷ್ಟವಾಗಿದೆ. ಶ್ವೇತಾಂಬರರು ಸೂತ್ರಗಳನ್ನು ತನ್ನ ಸಿದ್ಧಾಂತಕ್ಕನು ಸಾರವಾಗಿ ಮಾರ್ಪಡಿಸಿರುತ್ತಾರೆ,

## ಪ್ರಕೃತಟೀಕೆ

ಪ್ರಕೃತ ಟೀಕೆ ವಿದ್ಯಾರ್ಥಿಗಳಿಗೆ ಓದಲು ಸುಲಭವಾಗುವಂತೆ ಬರೆಯ ಲಾಗಿದೆ. 'ಆದುದರಿಂದ ನಾತಿವಿಸ್ತಾರ ಮತ್ತು ನಾತಿಸಂಕ್ಷೇಪದ ಮಾರ್ಗವನ್ನು ಕೈಗೊಂಡಲಾಗಿದೆ. ಮಧ್ಯಮ ಮಾರ್ಗ ಕೈಗೊಂಡಲಾಗಿದೆ. ವಿದ್ಯಾರ್ಥಿಗಳಿಗೆ ಲಾಭವಾಗಬಹುದು. ಇತ್ಯಲಂ.

ವಿದ್ಯಾವಾಚಸ್ಪತಿ–ವರ್ಧಮಾನ ಪಾರ್ಶ್ವನಾಥ ಶಾಸ್ತ್ರಿ.

# ವಿವೇಕೋದಯ ಗ್ರಂಥಮಾಲೆ ಗುಡಿಬಂಡೆ
## ಪ್ರಾರಂಭ 1971

ಸಂಚಾಲಕರು :

ಸುರೇಶ್ ಜೈನ್
ಎಸ್. ಪಿ. ಪದ್ಮಪ್ರಸಾದ್ ಎಂ ಎ.ಬಿ.ಎಡ್.

### ಸ ಲ ಹಾ ಮಂ ಡ ಳಿ

| | |
|---|---|
| ಶ್ರೀ ಕೆ. ಭುಜಬಲಿಶಾಸ್ತ್ರಿ | ಮೂಡುಬಿದರೆ |
| ಶ್ರೀ ಶ್ರೀಕಾಂತಭುಜಬಲಿಶಾಸ್ತ್ರಿ | ವೈನಾಡು |
| ಶ್ರೀ ಜಿನರಾಜಶಾಸ್ತ್ರಿ | ಧರ್ಮಸ್ಥಳ, |
| ಶ್ರೀ ಹಂಪನಾಗರಾಜಯ್ಯ M.A. | ಬೆಂಗಳೂರು |
| ಶ್ರೀ ಬಿ. ಬಿ. ಮಹೀಶವಾಡಿ, M.A. | ಧಾರವಾಡ |
| ಶ್ರೀ ಎಸ್. ಪಿ. ವಸಂತರಾಜಯ್ಯ, B.A. | ಬೆಂಗಳೂರು |
| ಶ್ರೀ ಎ. ಎಸ್. ಚಂದ್ರಕೀರ್ತಿ, B.SC., B.E. | ದಾವಣಗೆರೆ |
| ಶ್ರೀ ಅಜಿತಮಿರ್ಜಿ, B.A. | ಸೇಡಬಾಳ |
| ಶ್ರೀಮತಿ ಸಿ. ಆರ್. ಕಮಲಮ್ಮ M.A. | ಬೆಂಗಳೂರು |
| ಶ್ರೀಮತಿ ಎಸ್. ಪಿ. ಪೂರ್ಣಿಮ. M.A. | ಗುಡಿಬಂಡೆ |
| ಶ್ರೀಮತಿ ಚಂದ್ರಪ್ರಸಾದ್, M.A. | ಶಿವಮೊಗ್ಗ |

ವರ್ಷಕ್ಕೆ 350 ಪುಟಗಳ ಧಾರ್ಮಿಕ ಸಾಹಿತ್ಯ ಕೊಡಲಾಗುವುದು. ಮಾಲೆಯ ವಾರ್ಷಿಕ ಚಂದಾ 10-00 ಆಜೀವ ಸದಸ್ಯರು 151-00 ಪೋಷಕರು 251-00 ಸಂರಕ್ಷಕರು 501-00

1978—79 ರಲ್ಲಿ ಮಾಲೆಯ ಬಳಗಕ್ಕೆ ಸೇರಿದವರು

ಪೋಷಕರು :- ಶ್ರೀ ಭುಜಬಲಿ ಅಪ್ಪಾರಾವ ಎಲಗುದ್ರಿ—ಮಹಿಶವಾಡಿಗೆ
ಶ್ರೀ ಸಿ. ಎ. ಪದ್ಮೇಗೌಡ. ಪಟೇಲ್. ಒಳಗೆರೆ—
ಸಾಗರ—ತಾ. (ಶಿವಮೊಗ್ಗ)

ಆಜೀವ ಸದಸ್ಯರು :—

| | |
|---|---|
| ಶ್ರೀ ಸುಬಲಸ್ವಾಧ್ಯಾಯ ಮಂಡಳ, | ಮಾಳವಾಡ |
| ಶ್ರೀ ರಾಮಗೌಡ ಭರಮಗೌಡ ಪಾಟೀಲ. | ಹೆಬ್ಬಾಳ |
| ಶ್ರೀ ಜಿ. ಕೆ. ದುರ್ಗಣ್ಣವರ್, ಅಡ್ವೋಕೇಟ್ | ಮಹಿಶವಾಡಿಗೆ |
| ಶ್ರೀ ಬಿ. ಟಿ. ಘಡೋತಿ | ಇಟಗಿ |
| ಶ್ರೀ ಗುಂಡೂ ಶಿವರಾಮ ಕರವ | ಕಾಗವಾಡ |
| ಶ್ರೀ ಆ. ಸಿದ್ದಪ್ಪ ದೇಸಾಯಿ | ಹಳಿಂಗಳಿ |
| ಶ್ರೀ ಧರಣೇಂದ್ರ-ಧ-ಮುತ್ತಗಿ | ಕಲಘಟಗಿ |
| ಶ್ರೀ ಭೂಪಾಲ ರಾಯಪ್ಪ ಅಳಗವಾಡಿ | ಕಲಘಟಗಿ |
| ಶ್ರೀ ಎಸ್, ಎಂ. ಜಟ್ಟಯ್ಯ | ಬಾನಕೋಡು |



# ಮಾ ಲೆ ಯ ಮಾ ತು.,

"ತತ್ತ್ವಾರ್ಥಸೂತ್ರ" ಪವಿತ್ರವಾದ ಗ್ರಂಥ. ಆತ್ಮಕಲ್ಯಾಣಕ್ಕೆ ಅನುಸರಿಸಬೇಕಾದ ಮಾರ್ಗಗಳನ್ನು ಅರ್ಥವತ್ತಾಗಿ ವಿವರಿಸುವ ಗ್ರಂಥ ಇದೊಂಬೇ ಹಿಂದುಗಳಿಗೆ, ವೇದಗಳು ಮುಸಲ್ಮಾನರಿಗೆ, "ಕುರಾನ್" ಕ್ರಿಶ್ಚಿಯನ್ನರಿಗೆ "ಬೈಬಲ್" ಸಿಕ್ಕರಿಗೆ 'ಗ್ರಂಥಸಾಹೇಬ್' ಇದ್ದಂತೆ ಜೈನರಿಗೆ 'ತತ್ತ್ವಾರ್ಥಸೂತ್ರ', ಉಮಾಸ್ವಾಮಿಗಳೆಂಬ ಪ್ರಾತಃಸ್ಮರಣೀಯ ಮಹಾನ್ ಆಚಾರ್ಯರು ಈ ಸೂತ್ರ ರೂಪದ ಗ್ರಂಥವನ್ನು ಸಂಸ್ಕೃತದಲ್ಲಿ ರಚಿಸಿ ಜಗತ್ತಿಗೇ ಮಹೋಪಕಾರ ಮಾಡಿದರು.

ಜಗತ್ತಿನ ಯಾವ ದೇಶದಲ್ಲಾದರು ಈ ಗ್ರಂಥ ಒಂದಿದ್ದು ಜೈನ ಧರ್ಮದ ಬೇರೆಯಾವ ಕೃತಿಗಳೂ ಅಲ್ಲಿಲ್ಲದಿದ್ದರೂ ಜೈನ ಧರ್ಮದ ಮಹತ್ವ ಅರಿಯಲು ಬೆಳೆಯಲು ಸಹಕಾರಿಯಾಗುತ್ತದೆ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುವರು.

ಇಂಥಹ ಮಹಾನ್ ಗ್ರಂಥ ಸಂಸ್ಕೃತದಲ್ಲಿದ್ದು, ಅಲ್ಲಲ್ಲಿ ಕೆಲವರು ಕನ್ನಡ ಅರ್ಥ ಬರೆದಿದ್ದರೂ, ಜನಸಾಮಾನ್ಯರಿಗೆ ಇರಲಿ, ವಿದ್ವಾಂಸರೆನಿಸಿಕೊಂಡವರಿಗೂ ಅರ್ಥವಾಗುತ್ತಿರಲಿಲ್ಲ. ಜೈನ ಶಾಸ್ತ್ರಪಾರಂಗತರಾಗಲು ಈ ಗ್ರಂಥದ ಅಧ್ಯಯನ ಮಾಡಲೇಬೇಕೆಂಬ ನಿಯಮವಿದ್ದರೂ, ಕಂಠಪಾಠ ಮಾಡಿ ಉತ್ತರ ಬರೆದು ಉತ್ತೀರ್ಣರಾಗಲು ಯತ್ನಿಸುವರೇ ಹೊರತು ಮತ್ತೊಬ್ಬರಿಗೆ ತಿಳಿಸಲು ಸಮರ್ಥರಾಗುತ್ತಿರುವುದು ವಿರಳ.

ಈ ಪರಿಸ್ಥಿತಿಯನ್ನು ಅರಿತು, ಎಲ್ಲರಿಗೂ ಅರ್ಥವಾಗುವಂತೆ ಸರಳವಾಗಿ ವ್ಯಾಖ್ಯಾನ ಬರೆಸಿ ಅಚ್ಚುಮಾಡಿಸಬಾರದೇ, ಆ ದಿಸೆಯಲ್ಲಿ ಯಾರೂ ಪ್ರಯತ್ನಿಸಿಲ್ಲ ಏಕೆ ಎಂದು ಅನೇಕ ಕಡೆ ವಿಚಾರಿಸಿದಾಗ ದೊರೆತ ಉತ್ತರ ಆಶ್ಚರ್ಯ ಉಂಟು ಮಾಡಿತು.

"ತತ್ತ್ವಾರ್ಥಸೂತ್ರ ಗ್ರಂಥಕ್ಕೆ ಖಚಿತವಾಗಿ ಅರ್ಥ ಬರೆಯಬಲ್ಲ ವಿದ್ವಾಂಸರು ವಿರಳರಾಗಿದ್ದಾರೆ! ಬರೆದು ಕೊಟ್ಟರೆ ಅಚ್ಚು ಮಾಡಿಸುವ ದಾನಿಗಳು ದೊರೆಯಲಾರರು! ಅಷ್ಟೆಲ್ಲಾ ಆದಗೂ ಕೊಂಡು ಓದುವವರಿಲ್ಲದೆ ಬರೆದವರಲ್ಲಿಯೇ ಉಳಿಯಬೇಕಾಗುತ್ತದೆ.!!!

ಸಾವಿರಾರು ರೂಪಾಯಿ ಖರ್ಚುಮಾಡಿ ಗ್ರಂಥ ಇದ್ದಲ್ಲೇ ಇದ್ದ
ಫಲವೇನು ?" ಎಂದು ಕರ್ನಾಟಕದ ಎಲ್ಲೆಡೆ ಉತ್ತರ ದೊರೆಯಿತು.

25 ವರ್ಷಗಳ ಹಿಂದೆ ಶ್ರೀ ವರ್ಧಮಾನಶಾಸ್ತ್ರಿಗಳು ಒಂದು ಗ್ರಂಥವ
ಪ್ರಕಟಿಸಿದ್ದರೂ ಪ್ರತಿಗಳು ದೊರೆಯುತ್ತಿರಲಿಲ್ಲ. ಈ ಕೊರತೆಯುನಿವಾರಣ
ಗ್ರಂಥಮಾಲೆಯಂಥಹ ಸದೃಢ ಸಂಸ್ಥೆಗಳೇ ಮುಂದಾಗಬೇಕು ಎಂದು ಸಂಕಲ್ಪ
ಮರು ಮುದ್ರಣಕ್ಕೆ ಅವಕಾಶಕೊಡಿ ಎಂದು ಶ್ರೀ ಶಾಸ್ತ್ರಿಗಳಲ್ಲಿ ಬಿನ್ನವಿಸಿದ
ಅವರು ಒಪ್ಪಲಿಲ್ಲ, ! ಆ ಗ್ರಂಥ ಅದು ಇರುವಂತೆಯೇ ಈಗಿನವರಿಗೆ ಅರ್ಥ
ವಾಗುವುದು ಕಠಿಣ. ಅದಕ್ಕೆ ಸರಳ ಅರ್ಥ ಬರೆಯಲು ನನಗೆ ಕಾಲಾ
ಕಾಶವಿಲ್ಲ. ಬಹಳ ಕಾಲ ಹಿಡಿಯುತ್ತದೆ! ಎಂದರು. ಆದರೂ ಪ್ರಯತ್ನ
ಬಿಡದೆ ತಡವಾದರೂ ಚಿಂತೆಯಿಲ್ಲ ನೀವೇ ಬರೆದುಕೊಡಬೇಕು ಎಂದು
ಒತ್ತಾಯಿಸಿ ಅವರನ್ನು ಒಪ್ಪಿಸಿದ್ದಾಯಿತು. 1975ರಲ್ಲಿ ಪ್ರಾರಂಭವಾದ
ಕಾರ್ಯ 1979ರಲ್ಲಿ ಮುಕ್ತಾಯವಾಗಿದೆ,

ಸೋಲಾಪುರದಲ್ಲಿ (ಲೇಖಕರಿರುವ ಸ್ಥಳ) ಮೊದಲು ಮುದ್ರಣಕಾರ್ಯ
ಆರಂಭವಾಯಿತು. ತಜ್ಞಕಂಪೋಸಿಟರುಗಳಿಲ್ಲದೆ ಹಾಗೇ ನಿಂತಿತು. ಮುಂದೆ
ಶಿವಮೊಗ್ಗದಲ್ಲಿಯ ಶ್ರೀ ಮಹಾವೀರ ಪ್ರಿಂಟಿಂಗ್ ಪ್ರೆಸ್‌ನಲ್ಲಿ ಮುಂದು
ವರಿಸಲಾಯಿತು. ಹಸ್ತ ಪ್ರತಿಯನ್ನು ಶ್ರೀ ಶಾಸ್ತ್ರಿಗಳು ಸಿದ್ಧಪಡಿಸಿ ಕಳ
ಹಿಸುತ್ತಿದ್ದಂತೆಯೇ ಮುದ್ರಣಮಾಡಿ ಅದರ ಪ್ರೂಫ್‌ನೋಡಲು ಅವರಿಗೆ
ಕಳುಹಿಸುವ ವ್ಯವಸ್ಥೆ ಮಾಡಲಾಯಿತು. ಅವರು ಸರಿಯಾಗಿದೆ ಎಂ
ಮೇಲೆ ಒಂದು ಫಾರು ಮುದ್ರಿಸುವುದು. ಆದರೆ ಭಾರತಾದ್ಯಂತ ಪ್ರಮುಖ
ಜವಾಬ್ದಾರಿ ಕೆಲಸಗಳ ಹೊಣೆಹೊತ್ತಿದ್ದ ಶ್ರೀ ಶಾಸ್ತ್ರಿಗಳವರಿಗೆ ಅ
ಯಲ್ಲಿ ಪ್ರೂಫ್ ತಲುಪದೆಲೇ ತಿಂಗಳುಗಟ್ಟಲೆ ಹಿಡಿಯುತ್ತಿತ್ತು, ಹೀ
ಮುದ್ರಣ ತಡವಾಗುತ್ತಾ ಬಂದಿತು.

ಒಂದು ಮತಕ್ಕೆ ಸಂಬಂಧಿಸಿದ ಗ್ರಂಥವನ್ನು ಆ ಮತೀಯರಲ್ಲ
ಚೇರಯವರು ಕೊಳ್ಳುವುದು ಕಡಿಮೆ. ಆದ್ದರಿಂದ ಕೆಲವು ಪ್ರತಿಗಳನ್ನು

ತಾವೇ ಪಡೆದು ಕುಂಥುಸಾಗರ ಪ್ರಕಾಶನ ಸಂಸ್ಥೆಯ ಸದಸ್ಯರಿಗೆ ಹಂಚಲು ಶ್ರೀ ಶಾಸ್ತ್ರೀಜಿ ಅವರು ತಿಳಿಸಿದರು.

ಮಾಲೆಯ ಆಜೀವಸದಸ್ಯರಾದ ಶ್ರೀ ಬಿ. ವಿ. ದೊಡ್ಡಮನಿ ಅವರು, ಶಿರಹಟ್ಟಿಯ ಶ್ರೀ ಆರ್. ಎಮ್. ಪಾಟೀಲರ ಗ್ರಂಥ ಪ್ರಕಟಣೆಯ ಅಭಿಲಾಶೆ ಅರಿತು, ತತ್ವಾರ್ಥ ಸೂತ್ರದಂಥಹ ಶಾಸ್ತ್ರಗ್ರಂಥಕ್ಕೆ ನೆರವುನೀಡಿ ಎಂದು ಅವರನ್ನು ಒಪ್ಪಿಸಿ. ಒಂದು ಸಾವಿರದೈನೂರು, ರೂಗಳ ಆರ್ಥಿಕನೆರವು ಅವರಿಂದ ಲಭಿಸುವಂತೆ ಮಾಡಿದರು. ಈ ಗ್ರಂಥಪ್ರಕಾಶನಕ್ಕೆ ಕೈಹಾಕುವ ಧೈರ್ಯಕ್ಕೆ ಈ - ಸಹಕಾರವೇ ಕಾರಣ.

## —: ಪರಿಚಯ :—

ಶ್ರೀ ಆರ್. ಎಮ್. ಪಾಟೀಲರು ಬಿ. ಎಸ್ಸಿ (ಎಜಿ.) ಪದವೀಧರ ತರುಣರು ಬೆಳಗಾಂ ಜಿಲ್ಲೆ ಅಥಣಿ ತಾಲ್ಲೂಕು ಶಿರಹಟ್ಟಿಯವರು. ಇಲ್ಲಿಯ ಮಹಾವೀರ ತರುಣ ಸ್ವಾಧ್ಯಾಯ ಮಂಡಳದ ಅಧ್ಯಕ್ಷರಾಗಿ,ಧಾರ್ಮಿಕ ಪ್ರವೃತ್ತಿಯನ್ನು ಹೆಚ್ಚು ಮಾಡುತ್ತಿರುವರು. ಪ್ರಕಟವಾಗುವ ಒಂದು ಶಾಸ್ತ್ರಗ್ರಂಥಕ್ಕೆನೆರವುನೀಡುವ ಅಭಿಲಾಷೆ ವ್ಯಕ್ತಪಡಿಸಿದ್ದರು. ಇವರಿಗೆ ಮಾಲೆಯ ನೇರ ಪರಿಚಯ ಇಲ್ಲದಿದ್ದರೂ ಮಾಲೆಯ ಪ್ರಕಟಣೆಗಳನ್ನು ನೋಡಿದ್ದರಿಂದ, ವಿಶ್ವಾಸ ವಿಟ್ಟು ಧನ ಸಹಾಯ ನೀಡಿದರು.

ಇವರ ತಂದೆಯವರಾದ ಶ್ರೀ ಮಲ್ಲಪ್ಪ ಗೆಂಡರನ್ನು ಸ್ವಂತಮಗನಂತೆಯೇ ಸಾಕಿ-ಸಲಹಿ, ಬೆಳೆಸಿ, ಧಾರ್ಮಿಕತೆಯನ್ನು ತುಂಬಿದ ಶ್ರೀಮತಿ ಪದ್ಮಾವತಿ ಅವರ ಹೆಸರು ಮತ್ತು ಫೋಟೋ ಮಾತ್ರ ಹಾಕಿದರೆ ಸಾಕು, ನನ್ನ ಹೆಸರೇ ಬೇಡ ಎಂದು ತಿಳಿಸಿದರು.

ಶ್ರೀಮತಿ ಪದ್ಮಾವತಿ ಅವರು 85 ವರ್ಷಗಳ ತುಂಬು ಜೀವನವನ್ನು ಸಾರ್ಥಕವಾಗಿ ಕಳೆದು 1975 ರಲ್ಲಿ ನಿಧನರಾದರು.

ಶ್ರೀಮತಿ ಅವರು ಅಥಣಿ ತಾಲ್ಲೂಕು ಸವದಿಯಲ್ಲಿ ಜನಿಸಿ, ಬೆಳೆದು. ಶಿರಹಟ್ಟಿಯ ಎಲೆಗೆಂಡರ ನಿಂಗಪ್ಪ ಅವರ ಪತ್ನಿಯಾದರು. ಇವರಿಗೆ ಮಕ್ಕಳಾಗಲಿಲ್ಲ

ಆದರೂ ವ್ಯಥಿತರಾಗದೆ ಭಾವಂದಿರಾವ ಧರ್ಮ ಗೆಂಡರ ಮಕ್ಕಳನ್ನು ತ
ಮಕ್ಕಳೇ ಎಂದು ತಿಳಿದು. ಜೋಪಾನಮಾಡಿ ಬೆಳಸಿದರು. ಶ್ರೀ ಮಲ್ಲಪ್ಪ ಗೆ
ಜಿನ್ನಪ್ಪ ಗೆಂಡ. ಅಪ್ಪೂರಾಯ ಮತ್ತು ಹೆಣ್ಣುಮಕ್ಕಳಾದ ಶ್ರೀಮತಿ ದ್ರಾಪ
ಮತ್ತು ಗಂಗೂಬಾಯಿ ಅವರು ಧರ್ಮ ಗೆಂಡರ ಮಕ್ಕಳು, ಶ್ರೀಮತಿ ಪ
ವತಿ ಅವರು ಇವರೆಲ್ಲರಿಗೆ ಧರ್ಮ ಸಂಸ್ಕಾರ ಮಾಡಿಸಿದರು. ಜೈನ ಧರ್ಮ ಹಾ
ಮಾನಪಾದರ್ಶಗಳ ಬಗೆಗೆ ಸೂಕ್ತತಿಳುವಳಿಕೆ ನೀಡಿದರು. ತಮ್ಮ ವ್ರತ, ನಿಯ
ದಾನ, ಧರ್ಮಗಳನ್ನುಯಥಾವತ್ತಾಗಿ ನಡೆಸಿಕೊಂಡು ಶಾಂತಮಯ ಬಾಳು
ಅನುಭವಿಸಿದರು.

ಅವರ ಅಂದಿನ ಧರ್ಮ ವಿವೇಚನೆಯ ಫಲವೇ, ಶ್ರೀ ಮಲ್ಲಪ್ಪ ಗೆ
ಪುತ್ರ ಶ್ರೀ ರಾವಸಾಹೇಬ ಎಲೆಗೆಂಡ ಪಾಟೀಲರು ಗ್ರಂಥ ಪ್ರಕಟ
ನೆರವಾಗಲು ನಾಂದಿಯಾಯಿತು,

ಬಸದಿಗಳನ್ನು ಕಟ್ಟುವ, ಪಂಚಕಲ್ಯಾಣಗಳನ್ನು ನಡೆಸುವ, ಆ
ದಾನ ಮಾಡುವಕಾರ್ಯಗಳೇ ಪುಣ್ಯದಾಯಕ. ಉಳಿದವಲ್ಲ, ಎಂದು ಜ
ಸಾಮಾನ್ಯರು ತಿಳಿಯಲು ಅವಕಾಶವಿರುವ ಕಾಲದಲ್ಲಿ ಶಿರಿಹಟ್ಟಿ ಯಂಥ
ಹಳ್ಳಿಯಲ್ಲಿದ್ದರೂ. ಶಾಸ್ತ್ರ ಪ್ರಕಟಣೆ, ಮೇಲಿನವೆಲ್ಲಕ್ಕಿಂತ ಕಡಮೆಯ
ಎಂದು ತಿಳಿದರು. ಒಬ್ಬ ಮಹಿಳೆ ನಿಸ್ವಾರ್ಥವಾಗಿ, ನಿಷ್ಕಲ್ಮಶವಾಗಿ, ಮಾ
ಪತ್ನಿ ಹಾಗೂ ಧರ್ಮ ಪಾಲನೆಯನ್ನು ಮಾಡಿದ್ದರ ಫಲ ಆಕೆಯ ಆ
ಕಲ್ಯಾಣವೂ ಆಯಿತು, ಒಂದು ಕುಟುಂಬವೂ ನೆರವಾಯಿತು, ಸಮಾಜ
ದಾರಿ ದೀಪವಾಗಿ ಒಂದು ಗ್ರಂಥ ಲಭಿಸಿತು,

ಇಂಥಹ ತ್ಯಾಗಮಯ ವ್ಯಕ್ತಿಗಳು ಹೆಚ್ಚಲು ಈ ಕೃತಿ ಮಾರ್ಗದರ್ಶ
ವಾಗಲೆಂದು ಆಶಿಸುತ್ತೇವೆ.

## ಬಿಡುಗಡೆ

"ತತ್ವಾರ್ಥಸೂತ್ರ" ಗ್ರಂಥ ಪ್ರಕಟಿಸುವ ತೀರ್ಮಾನವಾದದ್ದು ಪುಣ
ಕ್ಷೇತ್ರವಾದ ಧರ್ಮಸ್ಥಳದಲ್ಲಿ. ಮಾಲೆಯ ಪ್ರಕಟಣೆಯಾದ 'ಧರ್ಮಸ್ಥಳ

ಕಿ–ಬಾಹುಬಲಿ' ಕೃತಿಯನ್ನು ಉಪರಾಷ್ಟ್ರಪತಿ ಶ್ರೀ ಬಿ. ಡಿ. ಜತ್ತಿ ಅವರು ಅಲ್ಲಿ ಬಿಡುಗಡೆಮಾಡಿ, ಶ್ರೀ ವರ್ಧಮಾನ ಶಾಸ್ತ್ರಿಗಳನ್ನು ಸನ್ಮಾನಿಸಿದ ದಿವ್ಯ-ಹುಂಚದಲ್ಲಿ ಶ್ರೀ ಸ್ವಾಮೀಜಿ ಅವರ ಅಮೃತ ಹಸ್ತದಿಂದ, ಮೂಲಾನಕ್ಷತ್ರದ ಮಹೋತ್ಸವದಂದು ಬಿಡುಗಡೆಮಾಡಿ, ಧರ್ಮ ಬಾಂಧವರಿಗೆ ಈ ಕೃತಿಯ ಪರಿಚಯವಾಗುವಂತೆ ಮಾಡಬೇಕೆಂಬ ಬಯಕೆ ಇತ್ತು.

1979 ರ ಮಾರ್ಚಿ ಮೂರನೆಯ ವಾರದಲ್ಲಿ, ಹುಂಚದಲ್ಲಿ ಸ್ವಸ್ತಿಶ್ರೀ ದೇವೇಂದ್ರಕೀರ್ತಿಸ್ವಾಮೀಜಿ ಅವರ ಅಮೃತಹಸ್ತದಿಂದ ಕೃತಿ ಬಿಡುಗಡೆಯಾಗಿದೆ.

## ಕೃತಜ್ಞತೆ

ಹಸ್ತಪ್ರತಿ ಸಿದ್ಧಪಡಿಸಿ ಮುದ್ರಣಕ್ಕೆ ಅನುಮತಿ ನೀಡಿದ ಶ್ರೀ ವರ್ಧಮಾನ ಶಾಸ್ತ್ರೀಜಿ ಅವರಿಗೆ ಬಿಡುಗಡೆ ಮಾಡಿದ ಸ್ವಸ್ತಿಶ್ರೀ ದೇವೇಂದ್ರ ಕೀರ್ತಿ ಸ್ವಾಮೀಜಿ ಅವರಿಗೆ, ನಾಲ್ಕು ಅಧ್ಯಾಯಗಳನ್ನು ಪರಿಶೀಲಿಸಿ ನೀಡಿದ ಮೂಡಬಿದರೆಯ ಶ್ರೀ ಬಿ. ದೇವಕುಮಾರ್ ಜೈನ್ ಅವರಿಗೆ, ಧನ ಸಹಾಯ ನೀಡಿದ ಶ್ರೀ ಆರ್. ಎಮ್. ಪಾಟೀಲ್ ಅವರಿಗೆ ಪ್ರೇರಕರಾದ ಶ್ರೀ ಬಿ. ಎ. ದೊಡ್ಡಮನಿ ಅವರಿಗೆ ಮುದ್ರಣದ ವ್ಯವಸ್ಥೆ ನಿರ್ವಹಿಸಿದ ಶ್ರೀ ಎಸ್. ಪಿ. ಪದ್ಮಣ್ಣ ಅವರಿಗೆ, ಕೃತಿಯನ್ನು ಆದರಿಸಿ. ಸತ್ಕರಿಸಿ, ಓದುವ ಕನ್ನಡಿಗರಿಗೆ, ಅನಂತ ಕೃತಜ್ಞತೆಗಳನ್ನರ್ಪಿಸುತ್ತೇವೆ.

ಜ್ವಾಲಾಮಾಲಿನಿಯ ಮಹಾತ್ಮೆ ಮತ್ತು ಚರಿತ್ರೆ ಮಾಲೆಯ ಮುಂದಿನ ಗ್ರಂಥವಾಗಿ, "ಶಕ್ತಿ ಸಂಪನ್ನೆ" ಎಂಬ ಹೆಸರಿನಲ್ಲಿ ಬರಲಿದೆ.

20–3–1979

ಸುರೇಶ್ ಜೈನ್.
ಎಸ್. ಪಿ. ಪದ್ಮಪ್ರಸಾದ್
ಸಂಚಾಲಕರು.

# ಪ್ರಶಸ್ತಿ ನೀಡಿಕೆ.

ಕರ್ನಾಟಕದ ಏಕೈಕ ಧಾರ್ಮಿಕ ಕಾದಂಬರಿ ಪ್ರಕಾಶನ ಸಂಸ್ಥೆಯಾದ "ಜ್ಞಾನೋದಯ ಗ್ರಂಥಮಾಲೆ" ಯ ವತಿಯಿಂದ ಜೈನಸಾಹಿತಿಗಳನ್ನು ಸನ್ಮಾನಿಸಲಾಗಿದೆ.

ಡಾ। ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ ಅಧ್ಯಕ್ಷತೆಯಲ್ಲಿ ಶ್ರೀ ಟಿ. ಕೆ. ತುಕೋಳರ ಅಮೃತ ಹಸ್ತದಿಂದ. ಬೆಂಗಳೂರು ಸಾಹಿತ್ಯ ಪರಿಷತ್ತಿನಲ್ಲಿ ಸಿದ್ಧಾಂತಾಚಾರ್ಯ ಶ್ರೀ ಕೆ. ಭುಜಬಲಿ ಶಾಸ್ತ್ರಿಗಳು, ಶ್ರೀ ಜಿ. ಬ್ರಹ್ಮಪ್ಪ, ಹಂಪ, ನಾಗರಾಜಯ್ಯ ಮತ್ತು ಶ್ರೀಮತಿ ಕಮಲಮ್ಮ ಅವರನ್ನು ಶಾಲು ಹೊದಿಸಿ, ಸನ್ಮಾನಿಸಲಾಯಿತು, 1974 ರಲ್ಲಿ.

ರಾಷ್ಟ್ರಪ್ರಶಸ್ತಿವಿಜೇತ ಶ್ರೀ ಮಿರ್ಜಿಅಣ್ಣಾರಾಯರನ್ನು ಶ್ರವಣಬೆಳಗೊಳದಲ್ಲಿ ಶ್ರೀ ಚಾರುಕೀರ್ತಿ ಸ್ವಾಮೀಜಿ ಅವರ ಅಧ್ಯಕ್ಷತೆಯಲ್ಲಿ ಡಾ॥ ಜ. ಚ. ನಿ. ಅವರ ಅಮೃತ ಹಸ್ತದಿಂದ ಸನ್ಮಾನಿಸಲಾಯಿತು, 1975ರಲ್ಲಿ.

ಬೆಂಗಳೂರು ಮಹಾವೀರ ಭವನದಲ್ಲಿ ಮಣಿಯಂಗೂಡು ಶ್ರೀ ಎಂ. ಕೆ. ಅನಂತಯ್ಯಗೌಡರ ಅಧ್ಯಕ್ಷತೆಯಲ್ಲಿ ಶ್ರೀಮತಿ ಚಂದ್ರಮತಿಯವರ ಅವರ ಅಮೃತ ಹಸ್ತದಿಂದ 'ಧಾರಿಣಿ' ಎಂದು ಖ್ಯಾತರಾದ ಶ್ರೀಮತಿ ಶಾಂತಾಶಶಿಕಿರಣ ಅವರನ್ನು ಸನ್ಮಾನಿಸಲಾಯಿತು. 1975ರಲ್ಲಿ.

ಮಾಲೆಯಿಂದ ಪ್ರಾರಂಭವಾದ ಈ ಸತ್ಪರಂಪರೆ, ಇತರ ಸಂಸ್ಥೆಗಳಿಂದ ಮುಂದುವರಿಯುತ್ತಿದೆ.

"ತತ್ವಾರ್ಥ ಸೂತ್ರ" ದಂಥಹ ಮಹತ್ ಗ್ರಂಥಬಿಡುಗಡೆ ಸಮಾರಂಭದಲ್ಲಿ, ಪಾಶ್ಚಾತ್ಯರಾಷ್ಟ್ರಗಳಲ್ಲಿ ಅಹಿಂಸಾ ತತ್ವ ಮೊಳಗುವಂತೆ ಮಾಡಿದ ಪಟ್ಟಾಚಾರ್ಯವರ್ಯ ಸ್ವಾಮಿಗಳವರ ಅಮೃತ ಹಸ್ತದಿಂದ ಭಾರತಾದ್ಯಂತ ಧರ್ಮಪ್ರಭಾವನೆ ಉಂಟುಮಾಡುತ್ತಿರುವ ಶಾಸ್ತ್ರೀಜಿ ಅವರನ್ನು 'ಪ್ರಶಸ್ತಿ ನೀಡಿಕೆ' ಯ ಮೂಲಕ ಸನ್ಮಾನಿಸುವರು.

ಜೈನ ಭಟ್ಟಾರಕರು ಪ್ರಪ್ರಥಮವಾಗಿ ವಿದೇಶದಲ್ಲಿ ಜೈನ ಸಿದ್ಧಾಂತವನ್ನು ಅಸ್ಖಲಿತವಾಣಿಯಿಂದ ಮೊಳಗುವಂತೆ ಮಾಡಿದರು

ಚಿಕ್ಕವಯಸ್ಸಿನಲ್ಲಿಯೇ ಭಾರತಾದ್ಯಂತ ಪ್ರವಾಸ ಮಾಡಿ 'ಅನೇಕಾಂತ, ಅಹಿಂಸೆ ಮತ್ತು ಅಪರಿಗ್ರಹ' ಗಳ ಬಗೆಗೆ ಮನಮುಟ್ಟುವಂತೆ ಪ್ರೌಢ ಉಪನ್ಯಾಸಗಳನ್ನು ನೀಡಿ, ಮನಃಪರಿವರ್ತನೆ ಮಾಡಿದರು. ಪ್ರಜೆಗಳನ್ನು ಶಾಕಾಹಾರಿಗಳನ್ನಾಗಿಯೂ ಸಾತ್ವಿಕರನ್ನಾಗಿಯೂ, ಪರಿವರ್ತನೆ ಮಾಡಿದರು.

ಶ್ರೀ ಹುಂಚ ಕ್ಷೇತ್ರದಲ್ಲಿ ಪ್ರಗತಿಪರ ಕಾರ್ಯಗಳನ್ನು ಜಾರಿಗೆ ತಂದು, ಪ್ರವಾಸಿಗರಿಗೆ ಸೌಲಭ್ಯಗಳು ಹೆಚ್ಚುವಂತೆ ಮಾಡಿ ಕ್ಷೇತ್ರದ ಕೀರ್ತಿ ಎಲ್ಲೆಡೆ ಪಸರುವಂತೆ ಮಾಡಿದರು.

ಹುಂಚ, ವರಂಗ, ಮಳಖೇಡಗಳ ಮಠಾಧಿಪತ್ಯವನ್ನು ಭಟ್ಟಾರಕರ ಸಂಘದ ಅಧ್ಯಕ್ಷಸ್ಥಾನವನ್ನು, ಗುರುದೇವ ಮತ್ತು ಸಿದ್ಧಾಂತ ಕೀರ್ತಿ ಗ್ರಂಥಮಾಲೆಯ ಪ್ರಧಾನ ಸಂಪಾದಕ ಸ್ಥಾನವನ್ನು ಅಲಂಕರಿಸಿ ಉಜ್ವಲ ಕಾರ್ಯಗಳನ್ನು ಆಗು ಮಾಡುತ್ತಿರುವರು. ಕುಂದ-ಕುಂದ ವಿದ್ಯಾಪೀಠದ ಅಧ್ಯಕ್ಷರಾಗಿ, ಶಿವಮೊಗ್ಗ ವರ್ಧಮಾನ ವಿದ್ಯಾರ್ಥಿನಿಲಯ ಮತ್ತು ಸಾಗರದ ಸನ್ಮತಿ ದಿಗಂಬರ ಜೈನ ಬೋರ್ಡಿಂಗ್ ಹೋಂನ ಸಂರಕ್ಷಕರಾಗಿ ವಿದ್ಯಾರ್ಥಿಗಳ ಸಮಸ್ಯೆಗಳನ್ನು ನಿವಾರಣೆ ಮಾಡುತ್ತಿರುವರು, ಸ್ವಾಮೀಜಿ ಅವರು ಮಾಲೆಯ ಸಂರಕ್ಷಕರು ಸಹ.

ಸ್ವಸ್ತಿಶ್ರೀ ದೇವೇಂದ್ರ ಕೀರ್ತಿ ಭಟ್ಟಾರಕ ಪಟ್ಟಾಚಾರ್ಯವರ್ಯ ಮಹಾಸ್ವಾಮಿಗಳು ಮಹಾನ್ ಚೇತನರಾಗಿ, ಭಟ್ಟಾರಕ ಸ್ಥಾನದ ಮುಂಚೂಣಿಯಲ್ಲಿದ್ದು ಧರ್ಮ ಪ್ರಭಾವನೆ ಮಾಡುತ್ತಿರುವುದು ನಾಡಿನ ಸೌಭಾಗ್ಯ. ಅವರ ವಿದ್ವತ್ತು ಮತ್ತು ಧರ್ಮ ಶಕ್ತಿ ಸದಾ ನೆನಪಿನಲ್ಲುಳಿದು ಎಲ್ಲರಿಗೆ ಮಾರ್ಗದರ್ಶಕವಾಗಲಿ.

ಜೈನಕಾಶಿ ಎಂದು ಪ್ರಖ್ಯಾತಿ ಪಡೆದಿರುವ, 1008 ಕಂಬಗಳ ಬಸದಿ ಜೈನ ಸಿದ್ಧಾಂತ ದರ್ಶನದ ವ್ಯವಸ್ಥೆಯನ್ನು ಹೊಂದಿ, ಮಹಾಕವಿ ರತ್ನಾಕರನ ಹುಟ್ಟೂರೂ ಆದ ಮೂಡುಬಿದರೆಯಲ್ಲಿ ಜನಿಸಿದವರು ಶ್ರೀ ವರ್ಧಮಾನ ಶಾಸ್ತ್ರಿಗಳು.

ತಮ್ಮ ಸಚ್ಚಾರಿತ್ರ್ಯ, ಪಾಂಡಿತ್ಯ, ವಿದ್ಯಾನೈಪುಣ್ಯತೆ, ಹಾಗೂ ವಿಚಕ್ಷಣೆಯಿಂದ ಇಡೀ ಭಾರತದಲ್ಲಿಯೇ ಖ್ಯಾತರಾದರು, ಭಾರತದ ಎಲ್ಲಾಕಡೆಯ

ಶ್ರೀಮಂತರಿಗೆ, ವಿದ್ವಾಂಸರಿಗೆ. ತ್ಯಾಗಿಗಳಿಗೆ ಇವರೆಂದರೆ ಅಚ್ಚುಮೆಚ್ಚು. ಮಹಾರಾಷ್ಟ್ರದ ಸೋಲಾಪುರದಲ್ಲಿ ನೆಲಸಿ, ಅನೇಕ ಧಾರ್ಮಿಕ ಹಾಗೂ ಸಾಂಸ್ಕೃತಿಕ ಕಾರ್ಯಗಳಲ್ಲಿ ತಮ್ಮ ಶಕ್ತಿಯನ್ನು ಸಮಾಜಕ್ಕೆ ವ್ಯಕ್ತಪಡಿ... ಪ್ರತಿಷ್ಠಿತ ವ್ಯಕ್ತಿಗಳಾಗಿರುವರು,

ನೆಹರೂ. ಇಂದಿರಾಗಾಂಧಿ, ಮೊರಾರ್ಜಿ ದೇಸಾಯಿ. ಬಿ. ಡಿ. ಜ... ಮುಂತಾದ ರಾಷ್ಟ್ರನಾಯಕರ ನಿಕಟ ಸಂಪರ್ಕ ಹೊಂದಿರುವರು, 70... ವಯಸ್ಸಿನಲ್ಲಿಯೂ ಸ್ಫೂರ್ತಿಯ ಚಿಲುಮೆಯಂತಿರುವ ಶ್ರೀಯುತರು, ವಿದ್ಯಾ... ವಾಚಸ್ಪತಿ, ವಿದ್ಯಾಲಂಕಾರ, ಸಿದ್ಧಾಂತಾಚಾರ್ಯ, ಧರ್ಮಾಲಂಕಾರ... ವ್ಯಾಖ್ಯಾನ ಕೇಸರಿ, ನ್ಯಾಯಕಾವ್ಯತೀರ್ಥ ಬಿರುದಾಂಕಿತರು. ಕನ್ನಡ. ತು... ಕೊಂಕಿಣಿ ಮರಾಠಿ, ಹಿಂದಿ, ಇಂಗ್ಲೀಷು, ಸಂಸ್ಕೃತ ಭಾಷೆಗಳಲ್ಲಿ ಸ... ಪಾಂಡಿತ್ಯದ ಬಲದಿಂದ ನಿರರ್ಗಳವಾಗಿ ಆಯಾಭಾಷೆಗಳಲ್ಲಿ ಉಪನ್ಯಾ... ಮಾಡಬಲ್ಲವರು. ಕರ್ನಾಟಕದ ಎಲ್ಲ ಜೈನ ಪ್ರಮುಖ ಕಾರ್ಯಗಳ... ಭಾಗಿಗಳಾಗುತ್ತಿರುವರು. ಅನೇಕ ಗ್ರಂಥಗಳನ್ನು ವಿವಿಧ ಭಾಷೆಗಳಲ್ಲಿ ರ... ಸಿರುವರು. ಇವರ ಪಾಂಡಿತ್ಯದ ಪರಿಚಯು 'ಧರ್ಮಸ್ಥಳದ–ಬಾಹುಬಲಿ... 'ಭರತೇಶ' ಕೃತಿಗಳ ಮೂಲಕ ಮಾಲೆಯು ಬಳಗಕ್ಕೆ ಆಗಿದೆ. ವೈಜ್ಞಾನಿ... ವಾಗಿ ಅತ್ಯಂತ ಸರಳ ಹಾಗು ಯಥಾವತ್ತಾಗಿ ಕನ್ನಡ ಅರ್ಥವನ್ನು 'ತತ್ವಾರ್ಥ ಸೂತ್ರ'ಕ್ಕೆ ಬರೆದು ಕೊಟ್ಟಿರುವರು. ಇವರ ಚೈತನ್ಯ ಮತ್ತು ನಿಸ್ಪೃಹ ಸೇವೆಯ ಋಣ ತೀರಿಸುವುದು ಕಷ್ಟಸಾಧ್ಯ. ಆದರೂ ತನ್ನ ಸಂತೋ... ವನ್ನು ವ್ಯಕ್ತಪಡಿಸಲು ಮಾರ್ಗವಾಗಲೆಂದು 'ಸ್ಯಾದ್ವಾದ ಚಾರಿತ್ರ್ಯರತ್ನ' ಎಂಬ ಪ್ರಶಸ್ತಿಯನ್ನು ನೀಡಲು ಸಂಕಲ್ಪ ಮಾಡಿತು.

ಈ ಸತ್‌ಪರಂಪರೆ ನಾಂದಿಯಾಗಿ, ಸಮಾಜದಲ್ಲಿ ಮುಂದುವರಿ... ಲೆಂದು ಆಶಿಸುತ್ತೇವೆ.

ಸಂಚಾಲಕರು.

ಶ್ರೀ ಭಗವದುಮಾಸ್ವಾಮಿ ವಿರಚಿತ

# ತತ್ವಾರ್ಥ ಸೂತ್ರ

ಮೋಕ್ಷ ಮಾರ್ಗಸ್ಯ ನೇತಾರಂ ।
ಭೇತ್ತಾರಂ ಕರ್ಮಭೂಭೃತಾಂ ॥
ಜ್ಞಾತಾರಂ ವಿಶ್ವತತ್ವಾನಾಂ ।
ವಂದೇತದ್ಗುಣ ಲಬ್ಧಯೇ ॥

ಅರ್ಥ:– ಗ್ರಂಥಾರಂಭದಲ್ಲಿ ಶ್ರೀಮಹರ್ಷಿಗಳು ಮಂಗಲಾಚರಣೆಯನ್ನು ಮಾಡುತ್ತ ಮೋಕ್ಷಮಾರ್ಗದ ಉಪದೇಶಕರಾದ, ಕರ್ಮಪರ್ವತಗಳನ್ನು ಭೇದಿಸುವ, ವಿಶ್ವದ ಸಮಸ್ತ ಚರಾಚರ ತತ್ವಗಳನ್ನರಿಯುವ ಶ್ರೀ ಆಪ್ತರನ್ನು ಅವರ ಗುಣಗಳ ಪ್ರಾಪ್ತಿಗೋಸ್ಕರ ನಮಸ್ಕರಿಸುತ್ತೇನೆಂದು ಹೇಳುತ್ತಾರೆ.

ವಿಶೇಷಾರ್ಥ:– ಈ ಶ್ಲೋಕದಲ್ಲಿ ವಿಶಿಷ್ಟನಾದ ಭಗವಂತನ ನಾಮೋಲ್ಲೇಖನವಿಲ್ಲದಿದ್ದರೂ ಮೋಕ್ಷಮಾರ್ಗದ ನೇತೃತ್ವ ಕರ್ಮಭೂಭೃತದ ಭೇತೃತ್ವ ವಿಶ್ವತತ್ವ ಜ್ಞಾತೃತ್ವ ಎಂಬ ವಿಶೇಷಣ ಪದಗಳಿಂದ, ಈ ವಿಶೇಷಣಗಳು ಯಾವ ಪರಮಾತ್ಮನಲ್ಲಿದೆಯೋ ಅವನೇ ಪೂಜ್ಯನು ಎಂಬುದಾಗಿ ಉಮಾಸ್ವಾಮಿಯ ಅಭಿಪ್ರಾಯವಾಗಿದೆ. ಅಂದರೆ ಮೋಕ್ಷಮಾರ್ಗದ ನೇತನಿಗೆ ಹಿತೋಪದೇಶಿಯೆಂದೂ, ಕರ್ಮರೂಪಿ ಬೆಟ್ಟಗಳ ಭೇದಕನಿಗೆ ವೀತರಾಗನೆಂದೂ, ವಿಶ್ವತತ್ವದ ಜ್ಞಾತನಿಗೆ ಸರ್ವಜ್ಞನೆಂದೂ, ಅರ್ಥಮಾಡಿಕೊಂಡು ಈ ಗುಣಗಳು ಅರಹಂತನಲ್ಲಿಯೇ ಇರುತ್ತವೆಂದು ತಿಳಿಯಬೇಕು. ಇಂತಹ ಅರಹಂತ ದೇವನನ್ನು ನಮಸ್ಕರಿಸುವುದರಿಂದ ಅವನ ಆ ಗುಣಗಳು ಭಕ್ತನಿಗೆ ಲಭಿಸುತ್ತವೆಂದು ಭಾವವು.

ತನ್ನ ಆತ್ಮಹಿತವನ್ನು ಹೀರಲಿಚ್ಛಿಸುವ ಒಬ್ಬ ಭವ್ಯನು ದ್ವೈಪಾಯನನೆಂಬುವನು ಇದ್ದನು. ಇವನು ತನ್ನ ಕಲ್ಯಾಣವನ್ನು ಮಾಡಿಕೊಳ್ಳಲು ಏಕಾಂತ ರಮಣೀಯವಾದ ಒಂದು ಆಶ್ರಮದಲ್ಲಿ ಅನೇಕ ಮುನಿಗಳ ಮಧ್ಯ ಕುಳಿತಿರುವ ನಿರ್ಗ್ರಂಥ ಮಹಾಮುನಿಗಳನ್ನು ಕಂಡು ಮುನಿಶ್ರೀಗಳಿಗೆ ವಂದಿಸಿ "ಭಗವನ್! ಆತ್ಮನಿಗೆ ಹಿತ ಯಾವುದು" ಎಂಬುದಾಗಿ ಪ್ರಶ್ನಿಸಿದನು. ಮುನಿಗಳು ಉತ್ತರವಾಗಿ "ಆತ್ಮನಿಗೆ ಮೋಕ್ಷವು ಹಿತವಾಗಿದೆ" ಎಂದರು. ಮೋಕ್ಷವೆಂದರೇನು ?

ಎಂದು ಶಿಷ್ಯ ಪ್ರಶ್ನೆಮಾಡಲು ಸಕಲ ಕರ್ಮಗಳಿಂದ ಬಿಡುಗಡೆಯನ್ನು ಹೊ
ದುವುದು, ಮತ್ತು ಅವ್ಯಾಬಾಧತ್ವವನ್ನು ಹೊಂದಿ ಅಂತಿಮ ಅವಸ್ಥೆಯನ್ನು
ಪ್ರಾಪ್ತಮಾಡುವುದು ಮೋಕ್ಷ. "ಇದನ್ನು ಪಡೆಯುವ ಉಪಾಯ ಯಾವುದು"
ಎಂಬ ಪ್ರಶ್ನೆಯನ್ನು ಕೇಳಲಾಗಿ ಹೀಗೆಂದರು.

## ಸಮ್ಯಗ್ದರ್ಶನಜ್ಞಾನಚಾರಿತ್ರಾಣಿ ಮೋಕ್ಷಮಾರ್ಗಃ||೧

ಅರ್ಥ:- ಸಮ್ಯದ್ಗರ್ಶನ,ಸಮ್ಯಗ್‌ಜ್ಞಾನ ಮತ್ತು ಸಮ್ಯಕ್‌ಚಾರಿತ್ರ ಈ ಮೂರು ಕೂಡಿಯೇ ಮೋಕ್ಷಪ್ರಾಪ್ತಿಯ ಉಪಾಯವು. ಯಥಾರ್ಥ ದೇವ ಗುರು ಶಾಸ್ತ್ರಗಳಿಂದ ಪ್ರತಿಪಾದಿತವಾದ ತತ್ವದ ಮೇಲೆ ಶ್ರದ್ಧೆ ಇಡುವುದಕ್ಕೆ ಸಮ್ಯಗ್ದರ್ಶನವೆಂದೂ, ಸಂಶಯ ವಿಪರ್ಯಯ ಮತ್ತು ಅನಧ್ಯವಸಾಯ ರಹಿತವಾದ ಜ್ಞಾನಕ್ಕೆ ಸಮ್ಯಗ್‌ಜ್ಞಾನವೇದೂ, ಸಂಸಾರಕ್ಕೆ ಕಾರಣವಾದ ಕಾಮ ಕ್ರೋಧಾದಿಗಳಿಂದ ದೂರವಾಗಿರುವುದಕ್ಕೆ ಸಮ್ಯಕ್ ಚಾರಿತ್ರವೆಂದೂ ಹೆಸರು.

ವಿಶೇಷಾರ್ಥ:- ಮೋಕ್ಷಮಾರ್ಗ ಎಂಬ ಪದವು ವ್ಯಾಕರಣದ ನಿಯಮಾನುಸಾರ ಬಹುವಚನವಾಗಬೇಕಿತ್ತು. ಸಮ್ಯಗ್‌ದರ್ಶನಾದಿ ಮೂರು ಒಟ್ಟಾಗಿ ಒಂದಾಗಿ ಸೇರುವುದೇ ಮೋಕ್ಷದ ಒಂದೇ ಮಾರ್ಗ ಎಂಬುದನ್ನು ಸೂಚಿಸಲು ಏಕವಚನವನ್ನಿತ್ತರು. ಜ್ಞಾನಚಾರಿತ್ರಗಳು ಶುದ್ಧವಾಗಬೇಕಾದರೆ ಮೊದಲು ದರ್ಶನವು ಶುದ್ಧವಾಗಿರಬೇಕು. ಈ ಕಾರಣದಿಂದ ದರ್ಶನವು ಪೂಜ್ಯವಾಗಿದೆ ಈ ಪೂಜ್ಯತೆಯ ನಿಮಿತ್ತದಿಂದ ಸೂತ್ರದಲ್ಲಿ ದರ್ಶನಕ್ಕೆ ಅಗ್ರಸ್ಥಾನ ದೊರೆತಿದೆ

### ಸಮ್ಯಗ್ದರ್ಶನ

## ತತ್ವಾರ್ಥಶ್ರದ್ಧಾನಂ ಸಮ್ಯಗ್ದರ್ಶನಂ ||೨||

ಅರ್ಥ;- (ತತ್ವ) ವಸ್ತು ಸ್ವರೂಪದಿಂದ ಯುಕ್ತನಾದ ಜೀವಾದಿ ಪದಾರ್ಥಗಳ ಮೇಲೆ ಶ್ರದ್ಧೆಯನ್ನಿಡುವುದಕ್ಕೆ ಸಮ್ಯಗ್ದರ್ಶನವೆಂದು ಹೇಳುತ್ತಾರೆ ಜೀವಾದಿ ಪದಾರ್ಥಗಳೇ ಸಪ್ತ ತತ್ವಗಳ ರೂಪದಿಂದ ವರ್ಣಿಸಲ್ಪಟ್ಟಿವೆ. ಅವುಗಳ ಸ್ವರೂಪಗಳಲ್ಲಿ ಶಾಸ್ತ್ರಕಾರರು ಹೇಳಿದಂತೆ ಶ್ರದ್ಧೆಯನ್ನಿಡುವದಕ್ಕೆ ಸಮ್ಯಗ್ದರ್ಶನವೆಂದು ಹೇಳುತ್ತಾರೆ.

ವಿಶೇಷಾರ್ಥ:– ಸಮ್ಯಗ್ದರ್ಶನವು ಸರಾಗ ವೀತರಾಗ ಭೇದದಿಂದ ಎರಡು ವಿಧ. ಪ್ರಶಮ ಸಂವೇಗ ಅನುಕಂಪಾ ಆಸ್ತಿಕ್ಯ ಮೊದಲಾದ ಗುಣಗಳು ಕಾಣುತ್ತಿರುವ ಸರಾಗಿ ಜೀವಿಗಳ ಸಮ್ಯಕ್ತ್ವ, ಸರಾಗಸಮ್ಯಕ್ತ್ವವು. ಆತ್ಮವಿಶುದ್ಧಿ ಮಾತ್ರ ಲಕ್ಷಣವುಳ್ಳದ್ದು ವೀತರಾಗ ಜೀವರ ಸಮ್ಯಕ್ತ್ವವು. ರಾಗ ದ್ವೇಷಾದಿಗಳು ತೀವ್ರಗೊಳ್ಳದಂತೆ ಮಂದವಾಗಿರಿಸುವುದು ಪ್ರಶಮವು. ಸಂಸಾರ ಶರೀರೇಂದ್ರಿಯ ಭೋಗಗಳ ಬಗ್ಗೆ ಭಯಭೀತನಾಗಿರುವ ಪರಿಣಾಮವು ಸಂವೇಗವು. ಜೀವಮಾತ್ರದಲ್ಲಿ ದಯಾಪರನಾಗಿರುವುದು, ಅನುಕಂಪವು. ಜೀವಾದಿ ಪದಾರ್ಥಗಳಿವೆ, ಸ್ವರ್ಗ ನರಕ ಲೋಕ ಪುಣ್ಯ ಪಾಪಗಳಿವೆ, ಇತ್ಯಾದಿಗಳನ್ನು ಇವೆಯೆಂದು ಒಪ್ಪಿಕೊಳ್ಳುವ ಭಾವವು ಆಸ್ತಿಕ್ಯವು.

### ಸಮ್ಯಗ್ದರ್ಶನದ ಭೇದ

## ತನ್ನಿಸರ್ಗಾದಧಿಗಮಾದ್ವಾ ॥೩॥

ಅರ್ಥ:– ಸಮ್ಯಗ್ದರ್ಶನವು ನಿಸರ್ಗ ಅಂದರೆ ಸ್ವಭಾವದಿಂದ ಮತ್ತು ಅಧಿಗಮ ಅಂದರೆ ಪರೋಪದೇಶದಿಂದ ಉತ್ಪನ್ನವಾಗುತ್ತದೆ. ಹೀಗೆ ಉತ್ಪತ್ತಿಯ ಅಪೇಕ್ಷೆಯಿಂದ ಸಮ್ಯಗ್ದರ್ಶನವು ಎರಡು ಭೇದದಿಂದ ಯುಕ್ತವಾಗಿದೆ. ತನ್ನ ಸ್ವಭಾವದಿಂದ ಅಂದರೆ ಪರೋಪದೇಶವಿಲ್ಲದೇನೆಯೇ ಪೂರ್ವಭವದ ಸಂಸ್ಕಾರದಿಂದ ಉತ್ಪನ್ನವಾಗುವ ಸಮ್ಯಗ್ದರ್ಶನಕ್ಕೆ ನಿಸರ್ಗಜವೆಂದೂ, ಪರೋಪದೇಶಾದಿಕಾರಣಗಳಿಂದ ಉತ್ಪನ್ನವಾಗುವ ಸಮ್ಯಗ್ದರ್ಶನಕ್ಕೆ ಅಧಿಗಮಜ ಸಮ್ಯಗ್ದರ್ಶನವೆಂದೂ ಹೇಳುವರು.

ವಿಶೇಷಾರ್ಥ:– ಈ ಮೇಲೆ ಹೇಳಿದ ಎರಡು ವಿಧವಾದ ಸಮ್ಯಕ್ತ್ವಗಳಿಗೆ ಮಿಥ್ಯಾತ್ವ ಸಮ್ಯಗ್ಮಿಥ್ಯಾತ್ವ ಸಮ್ಯಕ್ತ್ವಪ್ರಕೃತಿ ಮತ್ತು ಅನಂತಾನು ಬಂಧಿ ಕ್ರೋಧ, ಮಾನ, ಮಾಯಾ. ಲೋಭ, ಈ ಏಳು ಕರ್ಮ ಪ್ರಕೃತಿಗಳ ಉಪಶಮ ಕ್ಷಯ ಅಥವಾ ಕ್ಷಯೋಪಶಮವನ್ನು ಹೊಂದಲೇ ಬೇಕು. ಇದು ಅನಿವಾರ್ಯ. ಐದು ಲಬ್ಧಿಗಳಲ್ಲಿ ಶಾಸ್ತ್ರದಲ್ಲಿ ಒಂದು ದೇಶನಾಲಬ್ಧಿಯನ್ನು ಹೇಳಲಾಗಿದೆ. ಯಾವ ಜೀವನಿಗೆ ಈ ದೇಶನಾಲಬ್ಧಿಯು ವರ್ತಮಾನ ಪರ್ಯಾಯದಲ್ಲಿ ಅಥವಾ ಪೂರ್ವ ಪರ್ಯಾಯದಲ್ಲಿ ಲಭಿಸಿಲ್ಲವೋ ಜೀವನಿಗೆ ನಿಸರ್ಗಜ ಸಮ್ಯಕ್ತ್ವವು ಹುಟ್ಟುವದಿಲ್ಲ. ಎಂದಾದರೂ ಉಪದೇಶ ಪಡೆದ ಜೀವನಿಗೆ ತತ್ಕಾಲ

ಕಾಲಾಂತರದಲ್ಲಿ ಸಮ್ಯಕ್ತ್ವವು ಪ್ರಾಪ್ತಿಯಾಗಬಹುದು. ಈ ಕಾರಣ ಸಮ್ಯಕ್ತ್ವವು ಎರಡು ವಿಧ.

### ತತ್ವಗಳ ಭೇದ

## ಜೀವಾಜೀವಾಸ್ರವಬಂಧಸಂವರನಿರ್ಜರಾ ಮೋಕ್ಷಾಸ್ತತ್ವಂ ||೪||

ಅರ್ಥ:– ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ, ಮೋ ಇವು ಏಳು ತತ್ವಗಳು. ಈ ಏಳು ತತ್ವಗಳ ವಿಸ್ತಾರವಾದ ಸ್ವರೂಪವು ಮು ಅಧ್ಯಾಯಗಳಲ್ಲಿ ವರ್ಣಿಸಲಾಗಿದೆ. ಆದರೂ ಇಲ್ಲಿ ಸಂಕ್ಷೇಪವಾಗಿ ಹೇಳು

ಜೀವ:– ಜ್ಞಾನದರ್ಶನ ಸ್ವರೂಪ ಚೈತನ್ಯದಿಂದ ಯುಕ್ತವಾದ ದ್ರವ್ಯ ಜೀವನೆಂದು ಹೆಸರು.

ಅಜೀವ:– ಚೈತನ್ಯ ರಹಿತವಾಗ ದ್ರವ್ಯಕ್ಕೆ ಅಜೀವವೆಂದು ಹೇಳುತ್ತಾ

ಆಸ್ರವ:– ಕರ್ಮಗಳ ಆಗಮನಕ್ಕೆ ಆಸ್ರವವೆಂದು ಹೆಸರು,

ಬಂಧ:– ಆತ್ಮ ಪ್ರದೇಶದೊಡನೆ ಕರ್ಮಪ್ರದೇಶಗಳ ಸಂಬಂಧವಾಗು ದಕ್ಕೆ ಬಂಧವೆನ್ನುತ್ತಾರೆ.

ಸಂವರ:– ಆಸ್ರವದ ನಿರೋಧಕ್ಕೆ (ತಡೆಯುವಿಕೆಗೆ) ಸಂವರವೆನ್ನುವ

ನಿರ್ಜರಾ:– ಆತ್ಮ ಪ್ರದೇಶದಿಂದ ಪೂರ್ವಸಂಚಿತ ಕರ್ಮಗಳು ಏಕದೇ ವಾಗಿ ಹೊರಗೆ ಹೋಗುವುದಕ್ಕೆ ನಿರ್ಜರೆಯೆಂದು ಹೆಸರು.

ಮೋಕ್ಷ:– ಸಮಸ್ತ ಕರ್ಮಗಳು ಆತ್ಮ ಪ್ರದೇಶದಿಂದ ಬಿಡುಗಡೆಯಾ ವುದಕ್ಕೆ ಅಥವಾ ಆತ್ಮನು ತನ್ನ ಕರ್ಮಗಳಿಂದ ಪೂರ್ಣರೂಪವಾಗಿ ಬಿಡುಗ ಯನ್ನು ಹೊಂದುವುದಕ್ಕೆ ಮೋಕ್ಷವೆಂದು ಹೆಸರು.

ವಿಶೇಷಾರ್ಥ:– ಈ ಏಳು ತತ್ವಗಳಿಗೆ ಪಾಪ ಪುಣ್ಯಗಳನ್ನು ಸೇರಿಸಿದ ನವ ಪದಾರ್ಥಗಳಾಗುತ್ತವೆ. ಈ ಪಾಪ ಪುಣ್ಯಗಳು ಆಸ್ರವ ಬಂಧಗಳಲ್ಲಿ ಸೇ ರುವುದರಿಂದ ಬೇರೆಯಾಗಿ ಹೇಳಲಿಲ್ಲ. ಹಾಗೆ ಆಸ್ರವಾದಿಗಳು ಜೀವಾ-ಜೀ ಗಳಲ್ಲಿ ಸೇರಿವೆಯಾದರೂ ಸಂಸಾರಕ್ಕೆ ಆಸ್ರವ ಬಂಧ ಕಾರಣ, ಮೋಕ್ಷ ಸಂವರ ನಿರ್ಜರೆ ಕಾರಣ, ಈ ಕಾರ್ಯ ಕಾರಣ ಪರಂಪರೆಗಳನ್ನು ಮತ್ತು ಆ

ಗಳ ಫಲವನ್ನು ಬೇರೆ ಬೇರೆ ತೋರಿಸುವ ಉದ್ದೇಶದಿಂದ ಆಸ್ರವಾದಿಗಳನ್ನು ಸೂತ್ರದಲ್ಲಿ ಬೇರೆ ಬೇರೆಯಾಗಿ ಕೊಟ್ಟಿರುತ್ತಾರೆ.

### ಸಪ್ತ ತತ್ವ ಮತ್ತು ಸಮ್ಯಗ್ದರ್ಶನಾದಿಗಳನ್ನು ತಿಳಿಯುವ ಉಪಾಯ

## ನಾಮಸ್ಥಾಪನಾದ್ರವ್ಯಭಾವತಸ್ತನ್ನ್ಯಾಸಃ ||೫||

ಅರ್ಥ:– ನಾಮ, ಸ್ಥಾಪನಾ, ದ್ರವ್ಯ, ಮತ್ತು ಭಾವಗಳಿಂದ ಆ ಸಪ್ತ ತತ್ವಗಳ ಮತ್ತು ಸಮ್ಯಗ್ದರ್ಶನಾದಿಗಳ ಜ್ಞಾನವು ಆಗುತ್ತದೆ. ಇವುಗಳಿಗೆ ನಿಕ್ಷೇಪಗಳೆಂದು ಹೇಳುತ್ತಾರೆ.

ನಾಮ:– ಗುಣ, ಜಾತಿ, ದ್ರವ್ಯ ಆದಿಗಳ ಅಪೇಕ್ಷೆ ಇಲ್ಲದೇನೆಯೇ ಲೋಕ ವ್ಯವಹಾರವನ್ನು ನಡೆಸುವುದಕ್ಕೋಸ್ಕರ ಹೆಸರನ್ನಿಡುವುದಕ್ಕೆ ನಾಮ ನಿಕ್ಷೇಪ ವೆಂದು ಹೆಸರು,

ಉದಾಹರಣೆ:– ಚಂದ್ರಪ್ರಭನೆಂದು ಒಬ್ಬ ಪುರುಷನ ಹೆಸರಿಟ್ಟರೆ ಚಂದ್ರನ ಹಾಗೆ ಅವನ ಪ್ರಭೆ, ಪ್ರಕಾಶಾದಿಗಳಿಲ್ಲದಿದ್ದರೂ ಕೇವಲ ಲೋಕವ್ಯವಹಾರದ ನಿಮಿತ್ತದಿಂದ ಚಂದ್ರಪ್ರಭನೆಂದು ಕರೆಯುತ್ತೇವೆ.

ಸ್ಥಾಪನಾ:– ಗುಣವಿಲ್ಲದಿದ್ದರೂ ವಿಧಿಪೂರ್ವಕವಾಗಿ ಗುಣವಿದೆಯೆಂದು ಸ್ಥಾಪಿಸುವುದು ಮತ್ತು "ಇದೇ ಅದಿದೆ" ಎಂದುಕಲ್ಪಿಸುವುದಕ್ಕೆ ಸ್ಥಾಪನಾನಿಕ್ಷೇಪ ವೆನ್ನುತ್ತಾರೆ. ಸ್ಥಾಪನಾ ನಿಕ್ಷೇಪವು ಎರಡು ಪ್ರಕಾರವಾಗಿದೆ (೧) ತದಾಕಾರ ಸ್ಥಾಪನಾ. (೨) ಅತದಾಕಾರ ಸ್ಥಾಪನಾ. ಧಾತು ಪಾಷಾಣಾದಿಗಳಿಂದ ನಿರ್ಮಿತ ಪಾರ್ಶ್ವನಾಥ ಭಗವಂತನ ಮೂರ್ತಿಯಲ್ಲಿ ಪಾರ್ಶ್ವನಾಥ ಭಗವಂತನ ಸ್ಥಾಪನೆ ಯು ತದಾಕಾರ ಸ್ಥಾಪನೆಯು. ಆಕಾರವಿಲ್ಲದ ಪದಾರ್ಥಗಳಲ್ಲಿ ಭಿನ್ನ ಆಕಾರಗಳ ಸ್ಥಾಪನೆಯನ್ನು ಮಾಡುವುದು ಅತದಾಕಾರ ಸ್ಥಾಪನೆಯು.

ಉದಾ :– ಚತುರಂಗದ ಆಟದಲ್ಲಿರುವ ಮರದ ತುಂಡುಗಳಲ್ಲಿ ರಾಜಾ, ಮಂತ್ರಿ, ಸೇನಾಪತಿ, ಆನೆ ಕುದುರೆ ಮೊದಲಾದವರ ಕಲ್ಪನೆ.

ದ್ರವ್ಯ :– ಭೂತ ಮತ್ತು ಭವಿಷ್ಯತ್ ಪರ್ಯಾಯಗಳ ಅಪೇಕ್ಷೆಯಿಂದ ವರ್ತಮಾನ ಕಾಲದಲ್ಲಿ ಹೇಳುವುದಕ್ಕೆ ದ್ರವ್ಯ ನಿಕ್ಷೇಪವೆಂದು ಹೆಸರು. ಮುಂದೆ ಆಗುವ ರಾಜನಿಗೆ ಈಗಲೇ ರಾಜನೆನ್ನುವುದು. ಅಥವಾ ಹಿಂದೆ ಅಧ್ಯಾಪಕ ವೃತ್ತಿ

ಯಲ್ಲಿದ್ದ ವನಿಗೆ ಈಗಲೂ ಅಧ್ಯಾಪಕನೆನ್ನುವುದು, ಇದು ದ್ರವ್ಯ ನಿಕ್ಷೇಪವು

ಭಾವ :– ವರ್ತಮಾನ ಕಾಲದ ಪರ್ಯಾಯವನ್ನೇ ಅವಲಂಬಿಸಿ ಕಥ ಮಾಡುವುದಕ್ಕೆ ಭಾವನಿಕ್ಷೇಪವೆಂದು ಹೆಸರು, ಉದಾ : ರಾಜಪುತ್ರನಿಗೆ ಯು ರಾಜ, ಓದಿಸುತ್ತಿರುವಾಗ ಅಧ್ಯಾಪಕ, ದಾನ ಕೊಡುತ್ತಿರುವಾಗ ದಾತಾ ಇತ್ಯಾ ವ್ಯವಹಾರಗಳು.

### ತತ್ವಗಳನ್ನು ತಿಳಿಯುವ ಇತರ ಉಪಾಯ

## ಪ್ರಮಾಣನಯೈರಧಿಗಮಃ ॥೬॥

ಅರ್ಥ :– ಪ್ರಮಾಣ ಮತ್ತು ನಯಗಳಿಂದ ತತ್ವಗಳ ಪರಿಜ್ಞಾನವಾಗು ತ್ತದೆ. ಪದಾರ್ಥಗಳ ಸರ್ವದೇಶವನ್ನು ತಿಳಿಯುವ ಜ್ಞಾನಕ್ಕೆ ಪ್ರಮಾಣವೆ ಏಕದೇಶವನ್ನು ತಿಳಿಯುವ ಜ್ಞಾನಕ್ಕೆ ನಯವೆಂದೂ ಹೆಸರು. ಪ್ರಮಾಣ ಪ್ರತ್ಯಕ್ಷ ಪ್ರಮಾಣವೆಂದೂ ಪರೋಕ್ಷ ಪ್ರಮಾಣವೆಂದೂ ಎರಡು ಭೇದವಾ ವಿಭಾಗಿಸಲ್ಪಟ್ಟಿದೆ. ನಯವು ದ್ರವ್ಯಾರ್ಥಿಕ ನಯವೆಂದೂ ಪರ್ಯಾಯಾರ್ಥಿ ನಯವೆಂದೂ ಎರಡು ಪ್ರಕಾರವಾಗಿ ವಿಭಾಗಿಸಲ್ಪಟ್ಟಿದೆ.

ವಿಶೇಷಾರ್ಥ :– ಇಂದ್ರಿಯಾದಿ ಇತರ ಕಾರಣಗಳ ಸಹಾಯವಿಲ್ಲ ಆತ್ಮನಿಂದಲೇ ವಸ್ತುವನ್ನು ಸ್ಪಷ್ಟವಾಗಿ ತಿಳಿಯುವ ಜ್ಞಾನವು ಪ್ರತ್ಯಕ್ಷ ಪ್ರಮಾ ಣವು. ಇಂದ್ರಿಯ ಪ್ರಕಾಶ ಮೊದಲಾದ ಇತರಕಾರಣಗಳ ಸಹಾಯದಿಂದ ವಸ್ತು ವಿನ ಕೆಲವಂಶವನ್ನು ತಿಳಿಯುವ ಜ್ಞಾನವು ಪರೋಕ್ಷ ಪ್ರಮಾಣವಾಗಿದೆ. ದ್ರ ವನ್ನೇ ಮುಖ್ಯಮಾಡಿಕೊಂಡು ತಿಳಿಯುವುದು ದ್ರವ್ಯಾರ್ಥಿಕನಯವು. ಪರ್ಯಾ ಯವನ್ನೇ ಮುಖ್ಯಮಾಡಿಕೊಂಡು ತಿಳಿಯುವ ಜ್ಞಾನವು ಪರ್ಯಾಯಾರ್ಥಿ ನಯವಾಗಿದೆ. ಅವಾಂತರ ಭೇದಗಳನ್ನು ತಿಳಿಸುವ ಅಪೇಕ್ಷೆಯಿಂದ ಇನು ಕೆಲವು ಉಪಾಯಗಳಿಗೆ ಸೂತ್ರದಲ್ಲಿ ಬಹುವಚನವನ್ನು ಉಪಯೋಗಿಸಿದ್ದಾರೆ

## ನಿರ್ದೇಶಸ್ವಾಮಿತ್ವಸಾಧನಾಧಿಕರಣಸ್ಥಿತಿವಿಧಾನತಃ ॥

ಅರ್ಥ:– ನಿರ್ದೇಶ, ಸ್ವಾಮಿತ್ವ, ಸಾಧನ, ಅಧಿಕರಣ, ಸ್ಥಿತಿವಿಧಾ ಗಳಿಂದ ತತ್ವಗಳ ಪರಿಜ್ಞಾನವಾಗುತ್ತದೆ.

ನಿರ್ದೇಶ:– ವಸ್ತುವಿನ ಹೆಸರನ್ನು ಹೇಳುವುದಕ್ಕೆ ನಿರ್ದೇಶವೆನ್ನುವರು.

ಸ್ವಾಮಿತ್ವ:– ವಸ್ತುವಿನ ಆಧಿಪತ್ಯಕ್ಕೆ ಸ್ವಾಮಿತ್ವವೆಂದು ಹೆಸರು.

ಸಾಧನ:– ವಸ್ತುವಿನ ಉತ್ಪತ್ತಿಯ ಕಾರಣಕ್ಕೆ ಸಾಧನವೆನ್ನುವರು.

ಅಧಿಕರಣ:– ವಸ್ತುವಿನ ಆಧಾರಕ್ಕೆ ಅಧಿಕರಣವೆಂದು ಹೆಸರು.

ಸ್ಥಿತಿ:– ವಸ್ತುವಿನ ಸಮಯದ ಅವಧಿಗೆ ಸ್ಥಿತಿ ಎಂದು ಹೆಸರು.

ವಿಧಾನ:– ವಸ್ತುವಿನ ಭೇದಕ್ಕೆ ವಿಧಾನವೆಂದು ಹೆಸರು. ಇವುಗಳಿಂದ ಪದಾರ್ಥಗಳ ಅಥವಾ ಇನ್ನೂ ಕೆಲವು ಉಪಾಯಗಳ ಜೀವನ ಜ್ಞಾನವಾಗುತ್ತದೆ.

## ಸತ್ಸಂಖ್ಯಾಕ್ಷೇತ್ರಸ್ಪರ್ಶನಕಾಲಾಂತರಭಾವಾಲ್ಪ ಬಹುತ್ವೈಶ್ಚ ||೮||

ಅರ್ಥ:– ಸತ್, ಸಂಖ್ಯಾ, ಕ್ಷೇತ್ರ, ಸ್ಪರ್ಶನ, ಕಾಲ, ಅಂತರ, ಭಾವ, ಅಲ್ಪಬಹುತ್ವ ಇವುಗಳಿಂದಲೂ ಪದಾರ್ಥಗಳ ಪರಿಜ್ಞಾನವಾಗುತ್ತದೆ.

ಸತ್:– ಪದಾರ್ಥದ ಅಸ್ತಿತ್ವಕ್ಕೆ ಸತ್ ಎಂದು ಹೆಸರು.

ಸಂಖ್ಯಾ:– ಪದಾರ್ಥದ ಸಂಖ್ಯೆಗೆ ಸಂಖ್ಯೆ ಎನ್ನುವರು.

ಕ್ಷೇತ್ರ:– ಪದಾರ್ಥವಿರುವ ವರ್ತಮಾನ ಸ್ಥಾನಕ್ಕೆ ಕ್ಷೇತ್ರವೆನ್ನುವರು

ಸ್ಪರ್ಶನ;– ಪದಾರ್ಥದ ತ್ರಿಕಾಲದ ನಿವಾಸಕ್ಕೆ ಸ್ಪರ್ಶನವೆಂದು ಹೆಸರು.

ಕಾಲ :- ಪದಾರ್ಥವಿರುವ ಸಮಯದ ಅವಧಿಗೆ ಕಾಲವೆಂದು ಹೆಸರು.

ಅಂತರ :–ಪದಾರ್ಥದ ವಿರಹಕಾಲಕ್ಕೆ ಅಂತರವೆನ್ನುವರು.

ಭಾವ :- ಔಪಶಮಿಕಾದಿ ಪರಿಣಾಮಗಳಿಗೆ ಭಾವವೆಂದು ಹೆಸರು.

ಅಲ್ಪಬಹುತ್ವ :- ಕೆಲವು ಅಪೇಕ್ಷೆಗಳಿಂದ ಪದಾರ್ಥಗಳ ಹೀನಾಧಿಕತೆಗೆ ಅಲ್ಪಬಹುತ್ವವೆಂದು ಹೆಸರು. ಇದರಿಂದಲೇ ದ್ರವ್ಯಕ್ಷೇತ್ರ, ಕಾಲಭಾವಗಳು ಪದಾರ್ಥಗಳನ್ನು ನ್ಯಾಯ ಸಾಧನವೆಂದು ಹೇಳಿದಹಾಗಾಯ್ತು.

## ಸಮ್ಯಗ್ ಜ್ಞಾನದ ಭೇದಗಳು

### ಮತಿಶ್ರುತಾವಧಿಮನಃಪರ್ಯಾಯಕೇವಲಾನಿ ಜ್ಞಾನಂ ||೯||

ಅರ್ಥ :- ಮತಿ, ಶ್ರುತ, ಅವಧಿ' ಮನ:ಪರ್ಯಾಯ ಮತ್ತು ಕೇ
ಇವು ಐದು ಜ್ಞಾನಗಳು.

ಮತಿಜ್ಞಾನ :- ಐದು ಇಂದ್ರಿಯ ಮತ್ತು ಮನಸ್ಸಿನ ಸಹಾಯತೆಯಿ
ತಿಳಿಯುವುದಕ್ಕೆ ಮತಿಜ್ಞಾನವೆಂದು ಹೆಸರು.

ಶ್ರುತಜ್ಞಾನ:- ಮತಿಜ್ಞಾನವು ತಿಳಿದ ವಿಷಯವನ್ನು ವಿಶೇಷ ರು
ದಿಂದ ವಿಚಾರ ಮಾಡುವುದಕ್ಕೆ ಶ್ರುತಜ್ಞಾನವೆಂದು ಹೆಸರು,

ಅವಧಿಜ್ಞಾನ:- ಪಂಚೇದ್ರಿಯ ಮತ್ತುಮನಸ್ಸಿನ ಸಹಾಯವಿಲ್ಲದೇ
ರೂಪೀ ಪದಾರ್ಥಗಳನ್ನು ದ್ರವ್ಯ-ಕ್ಷೇತ್ರ ಕಾಲ ಭಾವಗಳ ಸೀಮೆಯನ್ನಿ
ಕೊಂಡು ಸ್ಪಷ್ಟ ತಿಳಿಯುವುದಕ್ಕೆ ಅವಧಿ ಜ್ಞಾನವೆಂದು ಹೆಸರು.

ಮನಃ ಪರ್ಯಾಯಜ್ಞಾನ:- ಯಾರ ಸಹಾಯತೆಯೂ ಇಲ್ಲದೆ ಬೇ
ವರ ಮನಸ್ಸಿನಲ್ಲಿದ್ದ ವಿಷಯವನ್ನು ಸ್ಪಷ್ಟ ತಿಳಿಯುವದು.

ಕೇವಲಜ್ಞಾನ:- ಸರ್ವದ್ರವ್ಯ, ಸರ್ವಪರ್ಯಾಯಗಳನ್ನೂ ಒಂದೇ
ಯದಲ್ಲಿ ಸ್ಪಷ್ಟ ತಿಳಿಯುವುದಕ್ಕೆ ಕೇವಲಜ್ಞಾನವೆಂದು ಹೆಸರು.

## ಪ್ರಮಾಣಗಳು

### ತತ್ಪ್ರಮಾಣೇ ||೧೦||

ಅರ್ಥ:- ಮೇಲೆ ಹೇಳಿದ ಐದು ಜ್ಞಾನಗಳು ಪ್ರಮಾಣಸ್ವರೂಪವ
ಅಂದರೆ ಸಮ್ಯಗ್ಜ್ಞಾನಕ್ಕೆ ಪ್ರಮಾಣವೆನ್ನುತ್ತಾರೆ. ಆ ಪ್ರಮಾಣವು ಪ್ರ
ಮತ್ತು ಪರೋಕ್ಷ ರೂಪದಿಂದ ಎರಡು ಭೇದವಾಗಿದೆ.

## ಪರೋಕ್ಷ ಪ್ರಮಾಣ

### ಆದ್ಯೇ ಪರೋಕ್ಷಂ ।೧೧।

ಅರ್ಥ:– ಮೊದಲಿನ ಎರಡು ಜ್ಞಾನಗಳು ಅಂದರೆ ಮತಿ ಶ್ರುತ ಜ್ಞಾನಗಳು ಪರೋಕ್ಷ ಪ್ರಮಾಣಗಳು. ಇಂದ್ರಿಯಮನಸ್ಸೆಂಬ ಪರಾಧೀನತೆಗೆ ಸಿಲುಕಿ ಪದಾರ್ಥಗಳನ್ನು ತಿಳಿಯುವುದಕ್ಕೆ ಪರೋಕ್ಷವೆನ್ನುತ್ತಾರೆ.

## ಪ್ರತ್ಯಕ್ಷಪ್ರಮಾಣ

### ಪ್ರತ್ಯಕ್ಷಮನ್ಯತ್ ।೧೨।

ಅರ್ಥ:– ಇನ್ನುಳಿದ ಅವಧಿ ಮನಃಪರ್ಯಾಯ ಮತ್ತು ಕೇವಲ ಜ್ಞಾನಗಳು ಪ್ರತ್ಯಕ್ಷ ಪ್ರಮಾಣಗಳು ಇವುಗಳಿಗೆ ಪರಾಪೇಕ್ಷೆ ಇಲ್ಲದಿರುವುದರಿಂದ ಕೇವಲ ಆತ್ಮ ಸಂಬಂಧವಿರುವುದರಿಂದ ಪ್ರತ್ಯಕ್ಷವೆನ್ನುವರು.

## ಮತಿಜ್ಞಾನದಪರ್ಯಾಯಗಳು

### ಮತಿಸ್ಮೃತಿಸಂಜ್ಞಾಚಿಂತಾಭಿನಿಬೋಧಇತ್ಯನರ್ಥಾಂತರಂ ।೧೩।

ಅರ್ಥ:– ಮತಿ, ಸ್ಮೃತಿ, ಸಂಜ್ಞೆ, ಚಿಂತೆ, ಅಭಿನಿಬೋಧ, ಇವೆಲ್ಲ ಬೇರೆ ಬೇರೆಯಲ್ಲ. ಮತಿಜ್ಞಾನದ ಭೇದಗಳು ಎಂದು ತಿಳಿಯಬೇಕು.

ಮತಿ:– ಇಂದ್ರಿಯ ಮತ್ತು ಮನಸ್ಸಿನಿಂದ ವರ್ತಮಾನಕಾಲದ ಪದಾರ್ಥಗಳನ್ನು ತಿಳಿಯುವುದು.

ಸ್ಮೃತಿ:– ಮೊದಲು ತಿಳಿದ ವಿಷಯಗಳನ್ನು ಈಗ ಸ್ಮರಿಸುವುದು.

ಸಂಜ್ಞಾ:– ಈಗ ಒಂದು ಪದಾರ್ಥವನ್ನು ನೋಡಿ, ಅದನ್ನು ಮೊದಲು ನೋಡಿದ್ದರೆ "ಇದೇ ಅದು"ಎಂಬ ಪ್ರತ್ಯಕ್ಷ ಮತ್ತು ಸ್ಮೃತಿಯ ಸಂಕಲನಾತ್ಮಕ ಜ್ಞಾನ. ಇದಕ್ಕೆ ಪ್ರತ್ಯಭಿಜ್ಞಾನವೆಂದೂ ಹೇಳುವರು.

ಚಿಂತಾ:– ವ್ಯಾಪ್ತಿಜ್ಞಾನ ಎಲ್ಲಿ ಎಲ್ಲಿ ಹೊಗೆ ಇರುತ್ತದೆಯೋ ಅಲ್ಲಿ ಅಲ್ಲಿ ಬೆಂಕಿ ಇರಬೇಕು. ಹೇಗೆಂದರೆ:– ಅಡಿಗೆ ಮನೆ, ಈ ಪ್ರಕಾರದ ವ್ಯಾಪ್ತಿಜ್ಞಾನಕ್ಕೆ ಚಿಂತೆ ಎಂದು ಹೆಸರು.

ಅಭಿನಿಬೋಧ:- ಸಾಧನದಿಂದ ಸಾಧ್ಯದ ಜ್ಞಾನವನ್ನು ಮಾಡುವ ಪರ್ವತದ ಮೇಲಿರುವ ಹೊಗೆಯನ್ನು ನೋಡಿ ಅಗ್ನಿ ಇದೆಯೆಂದು ತಿಳಿ ವುದು. ಇದಕ್ಕೆ ಅನುಮಾನವೆಂದೂ ಹೇಳುತ್ತಾರೆ.

### ಮತಿಜ್ಞಾನದ ಉತ್ಪತ್ತಿಯ ಸಾಧನ

## ತದಿಂದ್ರಿಯಾನಿಂದ್ರಿಯನಿಮಿತ್ತಂ ।೧೪।

ಅರ್ಥ:- ಆ ಮತಿಜ್ಞಾನವು ಇಂದ್ರಿಯ (ಪಂಚೇಂದ್ರಿಯ) ಮತ್ತು ಅನಿಂ ದ್ರಿಯ (ಮನಸ್ಸು)ದ ನಿಮಿತ್ತದಿಂದ ಉತ್ಪನ್ನವಾಗುತ್ತದೆ.

### ಮತಿಜ್ಞಾನದ ಭೇದಗಳು

## ಅವಗ್ರಹೇಹಾವಾಯಧಾರಣಾಃ ।೧೫।

ಅರ್ಥ:- ಅವಗ್ರಹ, ಈಹಾ, ಅವಾಯ ಮತ್ತು ಧಾರಣಾ ಇವು ಮತಿ ಜ್ಞಾನದ ಮೂಲ ನಾಲ್ಕು ಭೇದಗಳು.

ಅವಗ್ರಹ:- ಪದಾರ್ಥಗಳನ್ನು ನೋಡಿದ ಕೂಡಲೇ ಆಗುವ ಪದಾರ್ಥ ವರ್ಣ ಮೊದಲಾದ ಸಾಮಾನ್ಯ ಜ್ಞಾನಕ್ಕೆ ಅವಗ್ರಹವೆಂದು ಹೆಸರು.

ಈಹಾ:- ಅವಗ್ರಹದಿಂದ ತಿಳಿದ ವಿಷಯವನ್ನು ವಿಶೇಷ ರೂಪದಿಂ ತಿಳಿಯಲಿಕ್ಕೆ ಪ್ರಯತ್ನಿಸುವುದು ಈಹಾ ಜ್ಞಾನವು. ಉದಾ:- ಅವಗ್ರಹ ಬೆಳ್ಳಗಿರುವ ಪದಾರ್ಥವನ್ನು ನೋಡಿದ್ದರೆ ಅದೇನಿರಬಹುದು ಬಾತುಕೋಳಿ ಗಿರಬೇಕು,ಅಥವಾ ಧ್ವಜ ಪತಾಕೆಯಾಗಿರಬೇಕು. ಈಹಾ ಜ್ಞಾನವು ಸಂಶಯವ ಯಾಕೆಂದರೆ ಸಂಶಯಜ್ಞಾನದಲ್ಲಿ ಯಾವ ವಿಷಯದ ನಿಶ್ಚಯವೂ ಇರುವುದಿ ಅನೇಕ ವಿಷಯಗಳಲ್ಲಿ ಅನಿಶ್ಚಿತ ರೂಪವಾದ ಜ್ಞಾನಕ್ಕೆ ಸಂಶಯವೆಂದು ಹೆಸ ಇಲ್ಲಿ ಕೊಟ್ಟ ಈಹಾಜ್ಞಾನದ ಉದಾಹರಣೆಯಲ್ಲಿ ಎರಡು ಪದಾರ್ಥಗ ಯಾವುದಾದರೊಂದು ಇರಲೇಬೇಕೆಂಬ ನಿಶ್ಚಯವು ಇರುವುದರಿಂದ ಸಂಶಯವಲ್ಲ.

ಅವಾಯ:- ವಿಶೇಷ ಚಿನ್ಹೆಗಳನ್ನು ನೋಡಿ ಆ ಪದಾರ್ಥದ ನಿಶ್ಚಯವ ಮಾಡುವದಕ್ಕೆ ಅವಾಯವೆಂದು ಹೆಸರು. ಉದಾ: ಹಾರಾಡುವಿಕೆ ರೆಕ್ಕೆಗಳ

ಮೊದಲಾದುವುಗಳಿಂದ ಇದು ಬಾತುಕೋಳಿಯೇ ಇದೆ, ಎಂದು ನಿಶ್ಚಯ ಮಾಡುವುದು.

ಧಾರಣಾ:– ಅವಾಯದಿಂದ ತಿಳಿದ ವಿಷಯವನ್ನು ಕಾಲಾಂತರದಲ್ಲಿಯೂ ಮರೆಯದಿರುವುದಕ್ಕೆ ಧಾರಣಾ ಎಂದು ಹೇಳುತ್ತಾರೆ.

### ಅವಗ್ರಹಾದಿಗಳ ವಿಷಯಭೂತ ಪದಾರ್ಥಗಳು

**ಬಹುಬಹುವಿಧಕ್ಷಿಪ್ರಾನಿಸೃತಾನುಕ್ತಧ್ರುವಾಣಾಂ ಸೇತರಾಣಾಂ ।೧೬।**

ಅರ್ಥ:- ಬಹು, ಬಹುವಿಧ, ಕ್ಷಿಪ್ರ, ಅನಿಸೃತ, ಅನುಕ್ತ, ಧ್ರುವ, ಮತ್ತು ಇವುಗಳ ವಿಪರೀತವಾದ ಅಂದರೆ ಏಕ, ಏಕವಿಧ, ಅಕ್ಷಿಪ್ರ, ನಿಸೃತ, ಉಕ್ತ ಮತ್ತು ಅಧ್ರುವ ಈ ಪದಾರ್ಥಗಳ ಜ್ಞಾನವು ಅವಗ್ರಹಾದಿಗಳಿಂದ ಆಗುತ್ತದೆ.

ತಾತ್ಪರ್ಯ:– ಪದಾರ್ಥಗಳು ಬಹು ಮೊದಲಾದ ಸ್ವರೂಪದಲ್ಲಿವೆ. ಅವುಗಳನ್ನು ತಿಳಿಯಲಿಕ್ಕೆ ಅವಗ್ರಹಾದಿ ನಾಲ್ಕು ಜ್ಞಾನಗಳು ಸಾಧನಗಳಾಗಿವೆ.

ಬಹು:– ಒಂದೇ ಸಮಯದಲ್ಲಿ ಅನೇಕ ಪದಾರ್ಥಗಳನ್ನು ತಿಳಿಯುವುದು. ಕಡಲೆಯ ರಾಶಿಯನ್ನು ನೋಡಿ ಅನೇಕ ಕಡಲೆಗಳ ಜ್ಞಾನ.

ಬಹುವಿಧ:– ಅನೇಕ ವಿಧದಿಂದ ಕೂಡಿದ ಪದಾರ್ಥಗಳ ಜ್ಞಾನ. ಭಿನ್ನ, ಭಿನ್ನ ಧಾನ್ಯಗಳಿದ್ದರೆ ಅವುಗಳ ಜ್ಞಾನವು ಕಡಲೆ, ಗೋದಿ, ಅಕ್ಕಿ ಮೊದಲಾದ ರೂಪದಿಂದಾಗುವದು.

ಕ್ಷಿಪ್ರ:– ಬೇಗನೇ ಪದಾರ್ಥದ ಜ್ಞಾನವಾಗುವುದು ಅಥವಾ ಶೀಘ್ರಗತಿಯುಳ್ಳ ಪದಾರ್ಥದ ಜ್ಞಾನವಾಗುವುದು.

ಅನಿಃಸೃತ:– ವಸ್ತುವಿನ ಕೆಲವು ಅಂಶಗಳನ್ನು ನೋಡಿ ಪೂರ್ಣ ಅಂಶದ ಜ್ಞಾನವನ್ನು ಮಾಡಿಕೊಳ್ಳುವದು. ನೀರಿನಲ್ಲಿ ಮುಳುಗಿದ್ದ ಆನೆಯ ಸೊಂಡಿಲನ್ನು ನೋಡಿ ಆನೆ ಇದೆಯೆಂದು ನಿಶ್ಚಯವಾಗಿ ತಿಳಿದುಕೊಳ್ಳುವುದು.

ಅನುಕ್ತ:– ಮಾತಿನಲ್ಲಿ ಹೇಳದಿರುವ ವಿಷಯವನ್ನು ಅಭಿಪ್ರಾಯದಿಂದಲೇ ತಿಳಿದುಕೊಳ್ಳುವುದು. ಹಸಿದಿದ್ದ ಮನುಷ್ಯನನ್ನು ನೋಡಿ ಅವನ ಅಭಿಪ್ರಾಯವನ್ನು ತಿಳಿದುಕೊಳ್ಳುವುದು.

ಧ್ರುವ:– ನಿಶ್ಚಲ ರೂಪವಾಗಿ ಅನೇಕ ಸಮಯದ ವರೆಗೆ ಪದಾ
ಜ್ಞಾನವಾಗುವುದು ಮತ್ತು ಧ್ರುವ ಪದಾರ್ಥದ ಜ್ಞಾನವಾಗುವುದು.

ಏಕ;– ಅಲ್ಪ ಅಥವಾ ಒಂದು ಪದಾರ್ಥವನ್ನು ತಿಳಿಯುವುದು.

ಏಕವಿಧ:- ಒಂದು ಪ್ರಕಾರದ ಪದಾರ್ಥವನ್ನು ತಿಳಿಯುವುದು.

ಅಕ್ಷಿಪ್ರ:– ಮೆಲ್ಲ ಮೆಲ್ಲಗೆ ಪದಾರ್ಥಗಳನ್ನು ತಿಳಿಯುವುದು ಅ
ಮಂದಗತಿ ಇರುವ ಪದಾರ್ಥಗಳನ್ನು ತಿಳಿಯುವುದು.

ನಿಸೃತ:– ಸಂಪೂರ್ಣ ಅಂಶದಿಂದ ಪ್ರಕಟವಾದ ವಿಷಯವನ್ನು
ಯುವುದು.

ಉಕ್ತ;– ಮಾತಿನಿಂದ ಅಥವಾ ಶಬ್ದದಿಂದ ಪ್ರಕಟವಾದ ವಿಷಯ
ತಿಳಿಯುವುದು.

ಅಧ್ರುವ;– ಪ್ರತಿಕ್ಷಣದಲ್ಲಿ ನ್ಯೂನಾಧಿಕವಾದ ಪದಾರ್ಥ
ತಿಳಿಯುವುದು.

ಈ ಪ್ರಕಾರ ಬಹು ಮೊದಲಾದ ಪದಾರ್ಥಗಳ ಭೇದಗಳನ್ನು ಅವ
ಈಹಾ, ಅವಾಯ ಮತ್ತು ಧಾರಣಾ ರೂಪವಾದ ನಾಲ್ಕೂ ಜ್ಞಾನಗಳು
ಯುತ್ತವೆ.

## ಅರ್ಥಸ್ಯ |೧೭|

ಅರ್ಥ:– ಮೇಲೆ ಹೇಳಿದ ಬಹು ಮೊದಲಾದ ಭೇದಗಳು ಪದಾರ್ಥ
ಅಂದರೆ ಈ ಭೇದಗಳು ದ್ರವ್ಯದ್ದು ಎಂದು ತಿಳಿಯಬೇಕು. ಪದಾರ್ಥಗಳಲ್ಲಿ
ಈ ಭೇದಗಳಾಗುತ್ತವೆಯಲ್ಲದೆ ಬೇರೆ ಕಡೆ ಆಗುವದಿಲ್ಲ.

### ಅವಗ್ರಹದಲ್ಲಿ ವಿಶೇಷ ಭೇದ

## ವ್ಯಂಜನಸ್ಯಾವಗ್ರಹಃ |೧೮|

ಅರ್ಥ:– ವ್ಯಂಜನಸ್ಯ ಅಂದರೆ ಅಪ್ರಕಟ ಅವ್ಯಕ್ತ ರೂಪವಾದ ಪದಾ
ಗಳಲ್ಲಿ ಅವಗ್ರಹ ಜ್ಞಾನ ಮಾತ್ರವೇ ಆಗುತ್ತದೆ. ಅಂದರೆ ಈಹಾ ಮೊದ
ಜ್ಞಾನಗಳು ಆಗುವುದಿಲ್ಲ. ಅವಗ್ರಹ ಜ್ಞಾನದಲ್ಲಿ ಎರಡು ಭೇದಗಳನ್ನು ಪ
ಬಹುದು. ವ್ಯಂಜನಾವಗ್ರಹ ಮತ್ತು ಅರ್ಥಾವಗ್ರಹ. ಅವ್ಯಕ್ತ ಪದಾರ್

ಅವಗ್ರಹಕ್ಕೆ ವ್ಯಂಜನಾವಗ್ರಹವೆಂದೂ ವ್ಯಕ್ತ ಪದಾರ್ಥಗಳ ಅವಗ್ರಹಕ್ಕೆ ಅರ್ಥಾವಗ್ರಹವಂದೂ ಹೆಸರು. ಅವಗ್ರಹವಾಗಿ ಮುಂದಿನ ಈಹಾದಿ ಜ್ಞಾನಗಳು ಆಗುವುದಕ್ಕೆ ವ್ಯಂಜನಾವಗ್ರಹವೆಂದು ಹೆಸರು.

### ವ್ಯಂಜನಾವಗ್ರಹ ಅಸಂಭವ

## ನ ಚಕ್ಷುರನಿಂದ್ರಿಯಾಭ್ಯಾಂ ।೧೯।

ಅರ್ಥ:– ಕಣ್ಣು ಮತ್ತು ಮನಸ್ಸಿನಿಂದ ವ್ಯಂಜನಾವಗ್ರಹ ಆಗುವದಿಲ್ಲ. ಅಂದರೆ ಕಣ್ಣು ಮತ್ತು ಮನಸ್ಸು ಪದಾರ್ಥಗಳನ್ನು ಸ್ಪಷ್ಟ ರೂಪವಾಗಿಯೇ ತಿಳಿಯುತ್ತವೆ. ಈ ಪ್ರಕಾರ ಬಹು ಮೊದಲಾದ ೧೨ ಭೇಧಗಳಿಂದ ಕೂಡಿದ ಪದಾರ್ಥಗಳನ್ನು ಅವಗ್ರಹ ಮೊದಲಾದ ೪ ಜ್ಞಾನಗಳು ೫ ಇಂದ್ರಿಯ ಮತ್ತು ಮನಸ್ಸಿನ ಸಹಾಯತೆಯಿಂದ ತಿಳಿಯಬಹುದು ೧೨ × ೪ = ೪೮ ಮತ್ತು ೪೮ × ೬ = ೨೮೮ ಭೇದಗಳಾಗುವುವು, ಇವುಗಳಲ್ಲಿ ವ್ಯಂಜನಾವಗ್ರಹ ೪ ಇಂದ್ರಿಯಗಳಿಂದಾಗುವುದರಿಂದ ೪೮ ಭೇದಗಳನ್ನು ಕೂಡಿಸಿದರೆ ಮತಿಜ್ಞಾನದ ಭೇದಗಳು ೩೩೬ ಆಗುತ್ತವೆ.

### ಶ್ರುತಜ್ಞಾನದ ವರ್ಣನೆ

## ಶ್ರುತಂಮತಿಪೂರ್ವಂದ್ವ್ಯನೇಕದ್ವಾದಶಭೇದಂ ।೨೦।

ಅರ್ಥ:– ಶ್ರುತಜ್ಞಾನವು ಮತಿಜ್ಞಾನ ಪೂರ್ವಕವಾಗಿ ಅಂದರೆ ಮತಿಜ್ಞಾನದ ನಂತರ ಆಗುತ್ತದೆ. ಆ ಶ್ರುತಜ್ಞಾನವು ಮೊದಲು ಎರಡು ಪ್ರಕಾರವಾಗಿ ಅಂದರೆ ೧ ಅಂಗಬಾಹ್ಯ ೨ ಅಂಗಪ್ರವಿಷ್ಟವೆಂದೂ ಮತ್ತು ಆ ಅಂಗಬಾಹ್ಯವು ಅನೇಕ ಭೇದರೂಪವಾಗಿಯೂ ಮತ್ತು ಅಂಗಪ್ರವಿಷ್ಟವು ಹನ್ನೆರಡು ಪ್ರಕಾರವಾಗಿಯೂ ವಿಭಾಗಿಸಲ್ಪಟ್ಟಿದೆ. ಅಂಗಪ್ರವಿಷ್ಟದ ಹನ್ನೆರಡು ಭೇದಗಳು: ೧) ಆಚಾರಾಂಗ ೨) ಸೂತ್ರಕೃತಾಂಗ ೩) ಸ್ಥಾನಾಂಗ ೪) ಸಮವಾಯಾಂಗ ೫) ವ್ಯಾಖ್ಯಾಪ್ರಜ್ಞಪ್ತಿಅಂಗ ೬) ಜ್ಞಾತೃಧರ್ಮಕಥಾಂಗ ೭) ಉಪಾಸಕಾಧ್ಯಯನಾಂಗ ೮) ಅಂತಃಕೃದ್ದಶಾಂಗ ೯) ಅನುತ್ತರೌಪಪಾದಿಕದಶಾಂಗ ೧೦) ಪ್ರಶ್ನವ್ಯಾಕರಣಾಂಗ ೧೧) ವಿಪಾಕಸೂತ್ರಾಂಗ ೧೨) ದೃಷ್ಟಿವಾದಾಂಗ ಇವು ಹನ್ನೆರಡು ದ್ವಾದಶಾಂಗ ಶ್ರುತಗಳೆಂದು ಹೇಳಲ್ಪಡುತ್ತವೆ.

ಹನ್ನೆರಡನೆಯ ದೃಷ್ಟಿವಾದ ಐದು ಭೇದಗಳು ೧) ಪರಿಕರ್ಮ ೨) ಸೂತ್ರ ೩) ಪ್ರಥಮಾನುಯೋಗ ೪) ಪೂರ್ವಗತಾ ಮತ್ತು ೫) ಚೂಲಿಕಾ.

ಪರಿಕರ್ಮದಲ್ಲಿ ಐದು ಭೇದಗಳು ೧) ವ್ಯಾಖ್ಯಾಪ್ರಜ್ಞಪ್ತಿ ೨) ದ್ವೀಪ ಸಾಗರಪ್ರಜ್ಞಪ್ತಿ ೩) ಜಂಬೂದ್ವೀಪ ಪ್ರಜ್ಞಪ್ತಿ ೪) ಸೂರ್ಯಪ್ರಜ್ಞಪ್ತಿ ೫) ಚಂದ್ರಪ್ರಜ್ಞಪ್ತಿ.

ಚೂಲಿಕೆಯಲ್ಲಿ ಐದು ಭೇದಗಳು ೧) ಜಲಗತಾ ೨) ಸ್ಥಲಗತಾ ೩) ಮಾಯಾಗತಾ ೪) ಆಕಾಶಗತಾ ೫) ರೂಪಗತಾ. ಸೂತ್ರಗತಾ ಮತ್ತು ಪ್ರಥಮಾನು ಯೋಗದಲ್ಲಿ ಒಂದೇ ಭೇದವು. ಪೂರ್ವಗತದಲ್ಲಿ ಮಾತ್ರ ೧೪ ಭೇದಗಳು ೧)ಉತ್ಪಾದ ೨) ಅಗ್ರಾಯಿಣಿ ೩) ವೀರ್ಯಾನುವಾದ ೪) ಅಸ್ತಿನಾಸ್ತಿಪ್ರವಾದ ೫) ಜ್ಞಾನಪ್ರವಾದ ೬) ಸತ್ಯಪ್ರವಾದ ೭) ಆತ್ಮಪ್ರವಾದ ೮) ಕರ್ಮಪ್ರವಾದ ೯) ಪ್ರತ್ಯಾಖ್ಯಾನ ೧೦) ವಿದ್ಯಾನುವಾದ ೧೧) ಕಲ್ಯಾಣಾನುವಾದ ೧೨)ಪ್ರಾಣವಾಯು ೧೩) ಕ್ರಿಯಾವಿಶಾಲ ೧೪) ಲೋಕಬಿಂದುಸಾರ. ಈ ಪ್ರಕಾರ ಶ್ರುತ ಜ್ಞಾನದ ಭೇದಗಳು, ಇವುಗಳಿಗೆ ಚತುರ್ದಶಪೂರ್ವಗಳೆಂದೂ ಹೇಳುತ್ತಾರೆ. ಇವುಗಳ ವಿಶೇಷ ವರ್ಣನೆಯು ರಾಜವಾರ್ತಿಕ ಮೊದಲಾದ ಗ್ರಂಥಗಳಲ್ಲಿ ಮಾಡಲಾಗಿದೆ.

ಇವೆಲ್ಲಾ ಶ್ರುತಜ್ಞಾನಗಳು ಪ್ರಮಾಣಸ್ವರೂಪವಾಗಿವೆ. ಕಥನೆ ಮಾಡುವವರ ಕಾರಣದಿಂದ ಇವುಗಳಲ್ಲಿ ಭೇದವಾಗುತ್ತದೆ, ಮೂರು ಜನ ವಕ್ತಾರರು ಸರ್ವಜ್ಞ ತೀರ್ಥಂಕರರು, ಇತರರು ಅಂದರೆ ಶ್ರುತಕೇವಲೀ ಅಥವಾ ಗಣಧರರು ಆದರಂತರ ಅವರ ಮಾರ್ಗವನ್ನನುಸರಿಸಿ ಗ್ರಂಥ ಪ್ರತಿಪಾದನೆಯನ್ನು ಮಾಡಿ ದವರು. ಪರಂಪರೆಯಿಂದ ಬಂದ ಆಚಾರ್ಯರು, ಇವರೆಲ್ಲರೂ ತಮ್ಮ ಗುರು ಪರಂಪರೆಯಿಂದ ಬಂದ ತತ್ವಗಳನ್ನು ಪ್ರಾಮಾಣಿಕತೆಯಿಂದ ವರ್ಣಿಸಿದ್ದಾರೆ. ಆದುದರಿಂದ ಪ್ರಮಾಣಗಳೆಂದು ಹೇಳಲಾಗಿದೆ.

# ಮತಿಜ್ಞಾನದ ೩೩೬ ಭೇದಗಳು

೧ ಮತಿಜ್ಞಾನ ೨ ೩ ೪

| ಅವಗ್ರಹ | | | | ಈಹಾ | | ಆವಾಯ | | ಧಾರಣಾ | |
|---|---|---|---|---|---|---|---|---|---|
| ವ್ಯಂಜನಾವಗ್ರಹ | | ಅರ್ಥಾವಗ್ರಹ | | | | | | | |
| ಬಹು<br>ಬಹುವಿಧ<br>ಕ್ಷಿಪ್ರ<br>ಅನಿಃಸೃತ<br>ಅನುಕ್ತ<br>ಧ್ರುವ<br>ಏಕ<br>ಏಕವಿಧ<br>ಅಕ್ಷಿಪ್ರ<br>ನಿಃಸೃತ<br>ಉಕ್ತ<br>ಅಧ್ರುವ | ಸ್ಪರ್ಶನ, ರಸನಾ, ಘ್ರಾಣ, ಶ್ರೋತ್ರ, | ಬಹು<br>ಬಹುವಿಧ<br>ಕ್ಷಿಪ್ರ<br>ಅನಿಃಸೃತ<br>ಅನುಕ್ತ<br>ಧ್ರುವ<br>ಏಕ<br>ಏಕವಿಧ<br>ಅಕ್ಷಿಪ್ರ<br>ನಿಃಸೃತ<br>ಉಕ್ತ<br>ಅಧ್ರುವ | ಸ್ಪರ್ಶನ, ರಸನಾ, ಘ್ರಾಣ, ಚಕ್ಷು, ಶ್ರೋತ್ರ, ಮನ, | ಬಹು<br>ಬಹುವಿಧ<br>ಕ್ಷಿಪ್ರ<br>ಅನಿಃಸೃತ<br>ಅನುಕ್ತ<br>ಧ್ರುವ<br>ಏಕ<br>ಏಕವಿಧ<br>ಅಕ್ಷಿಪ್ರ<br>ನಿಃಸೃತ<br>ಉಕ್ತ<br>ಅಧ್ರುವ | ಸ್ಪರ್ಶನ, ರಸನಾ, ಘ್ರಾಣ, ಚಕ್ಷು, ಶ್ರೋತ್ರ, ಮನ, | ಬಹು<br>ಬಹುವಿಧ<br>ಕ್ಷಿಪ್ರ<br>ಅನಿಃಸೃತ<br>ಅನುಕ್ತ<br>ಧ್ರುವ<br>ಏಕ<br>ಏಕವಿಧ<br>ಅಕ್ಷಿಪ್ರ<br>ನಿಸೃತ<br>ಉಕ್ತ<br>ಅಧ್ರುವ | ಸ್ಪರ್ಶನ, ರಸನಾ, ಘ್ರಾಣ, ಚಕ್ಷು, ಶ್ರೋತ್ರ, ಮನ, | | ಸ್ಪರ್ಶನ, ರಸನಾ, ಘ್ರಾಣ, ಚಕ್ಷು, ಶ್ರೋತ್ರ, ಮನ, |
| ೧೨×೪ | | ೧೨×೬ | | ೧೨×೬ | | ೧೨×೬ | | ೧೨×೬ | |
| ೪೮ | + | ೭೨ | + | ೭೨ | + | ೭೨ | + | ೭೨ | ೩೩೬ |

# ಶ್ರುತಜ್ಞಾನದ ಭೇದ ಮತ್ತು ಚಿತ್ರ



| | | |
|---|---|---|
| ಲೋಕ ಬಿಂದುಸಾರ<br>ಕ್ರಿಯಾವಿಶಾಲ<br>ಪ್ರಾಣಾವಾಯ ಪ್ರವಾದ<br>ಕಲ್ಯಾಣವಾದ<br>ವಿದ್ಯಾನುವಾದ<br>ಪ್ರತ್ಯಾಖ್ಯಾನವಾದ<br>ಕರ್ಮಪ್ರವಾದ | ಪೂರ್ವಗತ   ಪೂರ್ವಗತ | ಆತ್ಮ ಪ್ರವಾದ<br>ಸತ್ಯ ಪ್ರವಾದ<br>ಜ್ಞಾನಪ್ರವಾದ<br>ಆಸ್ತಿನಾಸ್ತಿಪ್ರವಾದ<br>ವೀರ್ಯಾನು ಪ್ರವಾದ<br>ಅಗ್ರಾಯಣಿ ಪ್ರವಾದ<br>ಉತ್ಪಾದಪೂರ್ವ |
| ಸೂತ್ರಗತ | | ಪ್ರಥಮಾನುಯೋಗ |
| ವ್ಯಾಖ್ಯಾಪ್ರಜ್ಞಪ್ತಿ<br>ದ್ವೀಪಸಾಗರ ಪ್ರಜ್ಞಪ್ತಿ<br>ಜಂಬೂದ್ವೀಪ ಪ್ರಜ್ಞಪ್ತಿ<br>ಸೂರ್ಯ ಪ್ರಜ್ಞಪ್ತಿ<br>ಚಂದ್ರ ಪ್ರಜ್ಞಪ್ತಿ | ಪೂರ್ವಗತ   ಚೂಲಿಕಾ | ರೂಪಗತಾ<br>ಆಕಾಶಗತಾ<br>ಮಾಯಾಗತಾ<br>ಸ್ಥಲಗತಾ<br>ಜಲಗತಾ |

೧೨ ದೃಷ್ಟಿವಾದಾಂಗ

೧೧ ವಿಪಾಕ ಸೂತ್ರಾಂಗ

೧೦ ಪ್ರಶ್ನವ್ಯಾಕರಣಾಂಗ

೯ ಅನುತ್ತರೌಪಪಾದಿಕದಶಾಂಗ

೮ ಅಂತಃಕೃದ್ದಶಾಂಗ

೭ ಉಪಾಸಕಾಧ್ಯಯನಾಂಗ

೬ ಜ್ಞಾತೃಧರ್ಮಕಥಾಂಗ

೫ ವ್ಯಾಖ್ಯಾಪ್ರಜ್ಞಪ್ತ್ಯಂಗ

೪ ಸಮವಾಯಾಂಗ

೩ ಸ್ಥಾನಾಂಗ

೨ ಸೂತ್ರಕೃತಾಂಗ

೧ ಆಚಾರಾಂಗ

## ಅವಧಿಜ್ಞಾನದ ವರ್ಣನೆ

## ಭವಪ್ರತ್ಯಯೋಽವಧಿರ್ದೇವನಾರಕಾಣಾಂ ॥೨೧॥

ಅರ್ಥ:- ಭವ ಪ್ರತ್ಯಯ ಅವಧಿಜ್ಞಾನವು ದೇವತೆಗಳು ಮತ್ತು ನಾರಕಿಯರಿಗೆ ಆಗುತ್ತದೆ. ಅವಧಿಜ್ಞಾನವು ಒಂದು ಭವಪ್ರತ್ಯಯವೆಂದೂ ಮತ್ತೊಂದು ಗುಣಪ್ರತ್ಯಯವೆಂದೂ ಎರಡು ಪ್ರಕಾರವಾಗಿದೆ. ದೇವ ಮತ್ತು ನರಕ ಗತಿಯಲ್ಲಿ ಭವವೇ ಕಾರಣವಾಗಿ ಉಂಟಾಗುವ ಅವಧಿಗೆ ಭವಪ್ರತ್ಯಯವೆಂದು ಹೇಳುತ್ತಾರೆ. ಹುಟ್ಟಿದಕೂಡಲೇ ಅವರಿಗೆ ಅವಧಿಜ್ಞಾನ ಮತ್ತು ಗತಿ, ಜನ್ಮ ಮೊದಲಾದುವುಗಳ ಅಪೇಕ್ಷೆ ಇಲ್ಲದೆ ಯಾವದು ಅವಧಿಜ್ಞಾನಾವರಣೀಯ ಕರ್ಮದ ಕ್ಷಯೋಪಶಮದಿಂದ ಉಂಟಾಗುತ್ತದೆಯೋ ಅದಕ್ಕೆ ಗುಣಪ್ರತ್ಯಯವೆನ್ನುತ್ತಾರೆ. ಇದಕ್ಕೇನೆಯೇ ಕ್ಷಯೋಪಶಮನಿಮಿತ್ತ ಅವಧಿಜ್ಞಾನವೆಂದೂ ಹೇಳುತ್ತಾರೆ.

## ಯೋಪಶಮನಿಮಿತ್ತ ಅವಧಿಜ್ಞಾನ

## ಕ್ಷಯೋಪಶಮನಿಮಿತ್ತಃಷಡ್ವಿಕಲ್ಪಃಶೇಷಾಣಾಂ॥೨೨॥

ಅರ್ಥ:- ಕ್ಷಯೋಪಶಮನಿಮಿತ್ತದ ಅವಧಿಜ್ಞಾನವು ಆರು ಪ್ರಕಾರವಾಗಿದೆ. ಅದು ದೇವನಾರಕಿಯರನ್ನು ಬಿಟ್ಟು ಉಳಿದ ಮನುಷ್ಯತಿರ್ಯಂಚ ಪ್ರಾಣಿಗಳಿಗೆ ಆಗುತ್ತದೆ. ಆರು ಭೇದಗಳು ೧) ಅನುಗಾಮಿ ೨) ಅನನುಗಾಮಿ ೩) ವರ್ಧಮಾನ ೪) ಹೀಯಮಾನ ೫) ಅವಸ್ಥಿತ ೬)ಅನವಸ್ಥಿತ.

ಅನುಗಾಮಿ:- ಯಾವುದು ನೆರಳಿನ ಹಾಗೆ ಜೀವನೊಡನೆಯೇ ಮುಂದೆ ಹೋಗುತ್ತದೆಯೋ ಅದಕ್ಕೆ ಅನುಗಾಮಿ ಎಂದು ಹೆಸರು. ಇದರಲ್ಲಿ ಕ್ಷೇತ್ರಾನುಗಾಮಿ, ಭವಾನುಗಾಮಿ ಮತ್ತು ಉಭಯಾನುಗಾಮಿ ಎಂದು ಮೂರು ಭೇದಗಳು.

ಅನನುಗಾಮಿ:- ಯಾವುದು ಜೀವನೊಡನೆ ಮುಂದೆ ಹೋಗುವದಿಲ್ಲವೋ ಅದಕ್ಕೆ ಅನನುಗಾಮಿ ಎಂದು ಹೆಸರು. ಇದರಲ್ಲಿಯೂ ಮೇಲಿನಂತೆಯೇ ಮೂರು ಭೇದಗಳು.

ವರ್ಧಮಾನ:- ಯಾವುದು ಶುಕ್ಲಪಕ್ಷದ ಚಂದ್ರನಂತೆ ಹೆಚ್ಚುತ್ತಾ ಹೋಗುತ್ತದೆಯೋ ಅದಕ್ಕೆ ವರ್ಧಮಾನ ಎಂದು ಹೆಸರು.

ಹೀಯಮಾನ:- ಕೃಷ್ಣಪಕ್ಷದ ಚಂದ್ರನಂತೆ ಕ್ಷೀಣವಾಗುತ್ತಾ ಹೋಗುವ ಅವಧಿಜ್ಞಾನಕ್ಕೆ ಹೀಯಮಾನವೆಂದು ಹೆಸರು.

ಅವಸ್ಥಿತ:- ಯಾವ ಅವಧಿ ಜ್ಞಾನವು ಹೀನಾಧಿಕವಾಗದೆ, ಇದ್ದ ಯೇ ಇರುತ್ತದೆಯೋ ಅದಕ್ಕೆ ಅವಸ್ಥಿತವೆನ್ನುವರು.

ಅನವಸ್ಥಿತ ; ಯಾವುದು ಜಲತರಂಗದಂತೆ ಹೀನಾಧಿಕವಾಗುತ್ತ ಅದಕ್ಕೆ ಅನವಸ್ಥಿತ ಎನ್ನುವರು.

ಹೀಗೆ ಗುಣಪ್ರತ್ಯಯ ಅವಧಿಜ್ಞಾನವು ಆರು ಪ್ರಕಾರವಾಗಿದೆ. ಇನ್ನು ಪ್ರಕಾರವಾಗಿ ಅವಧಿಜ್ಞಾನವನ್ನು ದೇಶಾವಧಿ, ಪರಮಾವಧಿ ಮತ್ತು ವಧಿ ಎಂಬ ಮೂರು ವಿಧವಾಗಿಯೂ ವರ್ಣಿಸಿದ್ದಾರೆ.

### ಮನಃಪರ್ಯಾಯ ಜ್ಞಾನ

## ಋಜುವಿಪುಲಮತೀ ಮನಃಪರ್ಯಯಃ ॥೨

ಅರ್ಥ:- ಮನಃಪರ್ಯಯ ಜ್ಞಾನವು ಋಜುಮತಿ. ವಿಪುಲಮತಿ ಎರಡು ಪ್ರಕಾರವಾಗಿ ವಿಭಾಗಿಸಲ್ಪಟ್ಟಿದೆ.

ಋಜುಮತಿ:- ಯಾವುದು ಮನ ವಚನ ಕಾಯಗಳ ಸರಳತ ವಿಚಾರ ಮಾಡಿದ ಬೇರೆಯವರ ಮನಸ್ಸಿನಲ್ಲಿದ್ದ ವಿಷಯವನ್ನು ತಿಳಿಯ ಯೋ ಅದಕ್ಕೆ ಋಜುಮತಿ ಮನಃಪರ್ಯಯ ಜ್ಞಾನವೆಂದು ಹೆಸರು.

ವಿಪುಲಮತಿ:- ಯಾವುದು ಕುಟಿಲ ರೂಪವಾದ ಬೇರೆಯವರ ಮ ನಲ್ಲಿದ್ದ ವಿಷಯವನ್ನು ತಿಳಿಯುತ್ತದೆಯೋ ಅದಕ್ಕೆ ವಿಪುಲಮತಿ ಮನಃ ಯವೆನ್ನುತ್ತಾರೆ.

ವಿಶೇಷಾರ್ಥ:- ಬೇರೆಯವರ ಮನಸ್ಸಿನಲ್ಲಿದ್ದ ವಿಷಯದ ಸರಳತೆ ತಿಳಿಯುವವನಿಗೂ, ವಿಚಾರಮಾಡುವವನಿಗೂ ಇಬ್ಬರಿಗೂ ಸರಳತೆ. ವರ್ತ ನದಲ್ಲಿ ವಿಚಾರಮಾಡುತ್ತಿರುವ ವಿಷಯವನ್ನು ತಿಳಿಯುವುದು ಸರಳ, ಮನಸ್ಸೆಂದರೆ ವರ್ತಮಾನದಲ್ಲಿ ವಿಚಾರಮಾಡುತ್ತಿರುವ ಮನಸ್ಸು, ಋಜುಮತಿ ಮನಃಪರ್ಯಾಯ ಜ್ಞಾನಿಯು ತಿಳಿಯಬಹುದು, ಹಾ ಭೂತ ಭವಿಷತ್‌ನಲ್ಲಿ ಮನಸ್ಸಿನಲ್ಲಾದ ಮತ್ತು ಆಗುವ ವಿಚಾರವನ್ನು ಮತಿ ಮನಃಪರ್ಯಾಯವು ತಿಳಿಯಬಹುದು. ಇದು ಸರಳವಲ್ಲ. ವಿಷಯ. ಕಠಿಣ ವಿಷಯ. ಈ ಕಠಿಣ ವಿಷಯವನ್ನು ವಿಪುಲಮತಿ ತಿಳಿ ದೆ. ಇಲ್ಲಿ ಸರಳವೃತದ ಅರ್ಥ ಕೇವಲ ವರ್ತಮಾನದಲ್ಲಿದ್ದ ಮತ್ತು ಭವಿಷ್ಯತ್‌ದಲ್ಲಾದ ಆಗುವ ವಿಷಯಗಳನ್ನು ತಿಳಿಯುವುದೆಂದು ಅರ್ಥ ಬೇಕು. ಇದರಿಂದ ವಿಪುಲಮತಿಯು ಪೂರ್ಣ ಚಿಂತಿತ ಅರ್ಧ ಚಿಂತಿತ, ತ ವಿಷಯವನ್ನು ತಿಳಿಯಲು ಸಾಧ್ಯವಿದೆ ಎಂದು ತಿಳಿಯಬೇಕು.

### ಋಜುಮತಿ ವಿಪುಲಮತಿಗಳಲ್ಲಿ ಅಂತರ

## ವಿಶುಧ್ಯಪ್ರತಿಪಾತಾಭ್ಯಾಂ ತದ್ವಿಶೇಷಃ ||೨೪||

ಅರ್ಥ:– ವಿಶುದ್ಧಿ ಅಂದರೆ ಪರಿಣಾಮದ ನಿರ್ಮಲತೆ ಮತ್ತುಪ್ರತಿಪಾತ ಅಂದರೆ ಕೇವಲ ಜ್ಞಾನವಾಗುವವರೆಗೆ ಬಿಡದಿರುವಿಕೆ, ಈ ಅಪೇಕ್ಷೆಯಿಂದ ಋಜುಮತಿ ಮತ್ತು ವಿಪುಲಮತಿ ಮನಃಪರ್ಯಾಯ ಜ್ಞಾನಗಳಲ್ಲಿ ಅಂತರ ಇದೆ. ಋಜುಮತಿ ಮನಃಪರ್ಯಾಯ ಜ್ಞಾನದ ಅಪೇಕ್ಷೆಯಿಂದ ವಿಪುಲಮತಿ ಮನಃಪರ್ಯಾಯದಲ್ಲಿ ಆತ್ಮನ ವಿಶುದ್ಧಿಯು ಅಧಿಕವಾಗಿರುತ್ತದೆ, ಋಜು ಮತಿ ಮನಃಪರ್ಯಾಯವು ಒಂದು ಸಾರಿ ಆಗಿ ಬಿಟ್ಟು ಹೋಗುವುದೂ ಉಂಟು. ಆದರೆ ವಿಪುಲಮತಿ ಮನಃಪರ್ಯಾಯವು ಆಗಿ ಕೇವಲ ಜ್ಞಾನವಾಗು ವವರೆಗೆ ಬಿಟ್ಟು ಹೋಗುವುದಿಲ್ಲ.

### ಅವಧಿ ಜ್ಞಾನ ಮತ್ತು ಮನಃಪರ್ಯಾಯ ಜ್ಞಾನದಲ್ಲಿ ಅಂತರ.

## ವಿಶುದ್ಧಿಕ್ಷೇತ್ರಸ್ವಾಮಿವಿಷಯೇಭ್ಯೋऽವಧಿ ಮನಃಪರ್ಯಾಯಯೋಃ ||೨೫||

ಅರ್ಥ:– ವಿಶುದ್ಧಿ, ಕ್ಷೇತ್ರ, ಸ್ವಾಮಿ, ಮತ್ತು ವಿಷಯಂಗಳ ಅಪೇಕ್ಷೆ ಯಿಂದ ಅವಧಿ ಮತ್ತು ಮನಃಪರ್ಯಾಯ ಜ್ಞಾನದಲ್ಲಿ ಅಂತರವಿದೆ. ಅವಧಿಜ್ಞಾನ ದ ಅಪೇಕ್ಷೆಯಿಂದ ಮನಃಪರ್ಯಾಯ ಜ್ಞಾನದಲ್ಲಿ ಆತ್ಮವಿಶುದ್ಧಿಯು ಅಧಿಕ ವಾಗಿರುತ್ತದೆ.

ವಿಶೇಷಾರ್ಥ:– ಯಾವ ರೂಪ ವಸ್ತುವನ್ನು ಅವಧಿಜ್ಞಾನವು ತಿಳಿ ಯುತ್ತದೆಯೋ ಆ ವಸ್ತುವಿನ ಅನಂತ ಭಾಗ ಸೂಕ್ಷ್ಮವಸ್ತುವನ್ನು ಮನಃ ಪರ್ಯಾಯ ಜ್ಞಾನವು ತಿಳಿಯುತ್ತದೆ. ಇದರಿಂದ ಅವಧಿ ಜ್ಞಾನದಿಂದ ಮನಃ ಪರ್ಯಾದಲ್ಲಿ ವಿಶುದ್ಧಿಯು ಅಧಿಕವೆಂದು ಹೇಳಬಹುದು.

ಕ್ಷೇತ್ರ:– ಅವಧಿ ಜ್ಞಾನವು ನಾಲ್ಕು ಗತಿಗಳಲ್ಲಿ ಆಗುತ್ತದೆ. ಆದರೆ ಮನಃಪರ್ಯಾಯ ಜ್ಞಾನವು ಮಾನುಷೋತ್ತರ ಪರ್ವತದವರೆಗಿರುವ ಮನು ಷ್ಯರಿಗೆ ಮಾತ್ರ ಆಗುತ್ತದೆ.

ಸ್ವಾಮಿ:– ಅವಧಿ ಜ್ಞಾನದ ಸ್ವಾಮಿ ಎಂದರೆ ನಾಲ್ಕು ಗತಿಯ ಜೀವಗಳು. ಮನಃಪರ್ಯಾಯವು ಮನುಷ್ಯಗತಿಯಲ್ಲಿ ಮಾತ್ರ ಆಗುತ್ತದೆ. ಮನುಷ್ಯ ಗತಿಯಲ್ಲಿಯೂ ಎಲ್ಲರಿಗೂ ಆಗುವುದಿಲ್ಲ. ಮುನಿಗಳಿಗೆ ಮಾತ್ರ

ಆಗುತ್ತದೆ. ಮುನಿಗಳಲ್ಲಿಯೂ ಎಲ್ಲರಿಗೂ ಆಗುವುದಿಲ್ಲ, ಸಪ್ತವಿಧ ಋ
ಗಳಲ್ಲಿ ಯಾವುದಾದರೊಂದು ಋದ್ಧಿ ಪ್ರಾಪ್ತರಾದವರಿಗೆ ಮಾತ್ರ
ಆಗುತ್ತದೆ. ಋದ್ಧಿ ಪ್ರಾಪ್ತ ಮುನಿಗಳಲ್ಲಿಯೂ ಎಲ್ಲರಿಗೂ ಆಗುವು
ಯಾರ ಚಾರಿತ್ರವು ವರ್ಧಮಾನವಾಗಿದೆಯೋ ಅವರಿಗೆನೆಯೇ ಆಗುತ್ತ
ಹೀಗೆ ಅಂತರವಿದೆ.

ವಿಷಯ:— ಅವಧಿ ಮತ್ತು ಮನಃಪರ್ಯಾಯ ಜ್ಞಾನಗಳ ವಿಷ
ವಿಭಿನ್ನವಾಗಿದೆ. ಅವಧಿ ಜ್ಞಾನವು ಹೊರಗಿನ ದ್ರವ್ಯ ಕ್ಷೇತ್ರ
ಳನ್ನು ತಿಳಿಯುತ್ತದೆ, ಮನಃಪರ್ಯಾಯ ಜ್ಞಾನವು ಇತರರ ಮನಸ್ಸಿ
ರುವ ವಿಷಯವನ್ನು ತಿಳಿಯುತ್ತದೆ.

### ಮತಿ ಮತ್ತು ಶ್ರುತಗಳ ವಿಷಯ

## ಮತಿಶ್ರುತಯೋರ್ನಿಬಂಧೋದ್ರವ್ಯೇಷ್ವಸರ್ವ ಪರ್ಯಾಯೇಷು ||೨೬||

ಅರ್ಥ:— ಮತಿಜ್ಞಾನ ಮತ್ತು ಶ್ರುತ ಜ್ಞಾನಗಳ ವಿಷಯ ನಿಯಮ
ದ್ರವ್ಯಗಳ ಕೆಲವು ಪರ್ಯಾಯಗಳಲ್ಲಿ ಮಾತ್ರ ಇರುತ್ತದೆ. ಅಂದರೆ
ಜ್ಞಾನಗಳು ಕೆಲವು ಪರ್ಯಾಯಗಳನ್ನು ಮಾತ್ರ ತಿಳಿಯುತ್ತವೆ. ಎಲ್ಲಾ
ಪರ್ಯಾಯಗಳನ್ನು ತಿಳಿಯುವ ಸಾಮರ್ಥ್ಯವು ಆ ಜ್ಞಾನಗಳಲ್ಲಿಲ್ಲ.

ವಿಶೇಷಾರ್ಥ:— ಯಾಕೆಂದರೆ ಆ ಜ್ಞಾನಗಳು ಇಂದ್ರಿಯ ಮತ್ತು
ಮನಸ್ಸಿನ ಸಹಾಯತೆಯಿಂದ ಉಂಟಾಗುತ್ತವೆ. ಆ ಇಂದ್ರಿಯ ಮತ್ತು ಮ
ನಸ್ಸು ರೂಪೀ ಮತ್ತು ಅರೂಪಿ ದ್ರವ್ಯಗಳನ್ನು ತಿಳಿಯುತ್ತವೆ. ಈ ಪ್ರಕಾ
ರೂಪೀ ಅರೂಪೀ ದ್ರವ್ಯಗಳನ್ನು ತಿಳಿದರೂ ಆ ಜ್ಞಾನಗಳಿಂದ ಸಮ
ಪರ್ಯಾಯಗಳ ಜ್ಞಾನವಾಗುವುದಿಲ್ಲ, ಆದುದರಿಂದ ಇಲ್ಲಿ ಕೆಲವು ಪರ್ಯಾ
ಯಗಳನ್ನು ಮಾತ್ರ ತಿಳಿಯುತ್ತವೆಂದು ಹೇಳಲಾಗಿದೆ.

### ಅವಧಿ ಜ್ಞಾನದ ವಿಷಯ

## ರೂಪಿಷ್ವವಧೇಃ ||೨೭||

ಅರ್ಥ:- ಅವಧಿ ಜ್ಞಾನದ ವಿಷಯವು ರೂಪಿ ಪದಾರ್ಥಗಳಲ್ಲಿ ಮಾತ್ರ
ಇರುತ್ತದೆ, ಅವಧಿ ಜ್ಞಾನವು ರೂಪಿ ಪದಾರ್ಥಗಳನ್ನು ತಿಳಿಯುತ್ತದೆ.

ವಿಶೇಷಾರ್ಥ:- ಅವಧಿ ಜ್ಞಾನವು ಪುದ್ಗಲದ್ರವ್ಯದ ಪರ್ಯಾಯಗಳನ್ನು ಮಾತ್ರ ತಿಳಿಯುತ್ತದೆ. ಇಲ್ಲಿ ಪೂರ್ವ ಸೂತ್ರದಿಂದ ಅಸರ್ವಪರ್ಯಾಯೇಷು ಎಂಬ ಪದವನ್ನು ತೆಗೆದುಕೊಳ್ಳಬೇಕು. ರೂಪಿ ಶಬ್ದದಿಂದ ಪುದ್ಗಲ ದ್ರವ್ಯ ವನ್ನು ತೆಗೆದುಕೊಳ್ಳಬೇಕು. ಕಾರಣ, ಯಥಾರ್ಥವಾಗಿ ನೋಡಿದರೆ ಪುದ್ಗಲ ದ್ರವ್ಯ ಒಂದೇ ರೂಪಿಯಾಗಿರುತ್ತದೆ. ಆದುದರಿಂದ ಅವಧಿಜ್ಞಾನವು ಪುದ್ಗಲ ದ್ರವ್ಯದ ಕೆಲವು ಪರ್ಯಾಯಗಳನ್ನು ಮಾತ್ರ ತಿಳಿಯುತ್ತದೆ. ವಿಶೇಷವೆಂದರೆ ಪುದ್ಗಲ ದ್ರವ್ಯದೊಡನೆ ಸೇರಿರುವ ಜೀವ ದ್ರವ್ಯದಲ್ಲಿ ಕೆಲವು ಪರ್ಯಾಯಗಳನ್ನು ತಿಳಿಯುತ್ತದೆಂದು ಅರ್ಥ ಮಾಡಬೇಕು. ಸಂಸಾರಿ ಜೀವರು ಕರ್ಮಗಳೊಡನೆ ಬದ್ಧವಾಗಿರುವ ಕಾರಣ ಕಥಂಚಿತ್ ರೂಪಿಗಳೆಂದು ಹೇಳಲ್ಪಡುತ್ತಾರೆ. ಅವರ ನ್ನು ಅವಧಿ ಜ್ಞಾನ ತಿಳಿಯುಬಹುದು, ಆದರೆ ಮುಕ್ತ ಜೀವರನ್ನು ಇತರ ಅಮೂರ್ತ ದ್ರವ್ಯಗಳನ್ನು ಅವಧಿಜ್ಞಾನವು ತಿಳಿಯಲು ಸಾಧ್ಯವಿಲ್ಲ.

### ಮನಃಪರ್ಯಯಜ್ಞಾನದ ವಿಷಯ

## ತದನಂತಭಾಗೇ ಮನಃಪರ್ಯಯಸ್ಯ ॥ ೨೮ ॥

ಅರ್ಥ:- ಅವಧಿಜ್ಞಾನ [ಸರ್ವಾವಧಿ] ದಿಂದ ತಿಳಿದ ವಿಷಯದ ಅನಂತ ಭಾಗ ಸೂಕ್ಷ್ಮ ವಿಷಯದಲ್ಲಿ ಮನಃಪರ್ಯಯ ಜ್ಞಾನದ ಪ್ರವೃತ್ತಿಯಾಗುತ್ತದೆ. ಅಂದರೆ ಸರ್ವಾವಧಿ ಜ್ಞಾನವು ಯಾವ ರೂಪಿ ಪದಾರ್ಥಗಳನ್ನು ತಿಳಿಯುತ್ತ ದೆಯೋ, ಅದರ ಅನಂತ ಭಾಗ ಸೂಕ್ಷ್ಮ ವಿಷಯವನ್ನು ಮನಃಪರ್ಯಯ ಜ್ಞಾನವು ತಿಳಿಯುತ್ತದೆ.

ವಿಶೇಷಾರ್ಥ:- ಸರ್ವಾವಧಿ ಜ್ಞಾನವು ಪುದ್ಗಲದ ಅಂತ್ಯಂತ ಸೂಕ್ಷ್ಮ ಪರಮಾಣುವನ್ನು ತಿಳಿಯುತ್ತದೆ. ಎಂದ ಮೇಲೆ ಈ ಪರಮಾಣುವಿನ ಅನಂತ ಭಾಗ ಸೂಕ್ಷ್ಮತೆಯಲ್ಲಿ ಮನಃಪರ್ಯಯ ಜ್ಞಾನದ ಪ್ರವೃತ್ತಿಯಾಗುವುದು. ಪರಮಾಣುವಿನ ಅನಂತ ಭಾಗ ಹೇಗಾಗಬಹುದು? ಒಂದು ಪರಮಾಣುವಿನಲ್ಲಿ ಸ್ಪರ್ಶ, ರೂಪ, ರಸ ಮತ್ತು ಗಂಧ ಗುಣಗಳಲ್ಲಿ ಅನಂತ ಅವಿಭಾಗ ಪ್ರತಿ ಭೇದದ ಶಕ್ತ್ಯಂಶಗಳು ಇರುತ್ತವೆ. ಈ ಶಕ್ತ್ಯಂಶಗಳ ಅಪೇಕ್ಷೆಯಿಂದ ಪರ ಮಾಣುವನ್ನು ಅನಂತ ಭಾಗ ಮಾಡಬಹುದು.

### ಕೇವಲಜ್ಞಾನದ ವಿಷಯ

## ಸರ್ವದ್ರವ್ಯಪರ್ಯಾಯೇಷು ಕೇವಲಸ್ಯ ||೨೯||

ಅರ್ಥ:- ಕೇವಲಜ್ಞಾನದ ವಿಷಯವು ಸಮಸ್ತ ದ್ರವ್ಯ ಮತ್ತು ಸ... ಪರ್ಯಾಯಗಳಲ್ಲಿದೆ. ಅಂದರೆ ಕೇವಲಜ್ಞಾನವು ಸಮಸ್ತ ದ್ರವ್ಯ ... ಪರ್ಯಾಯಗಳನ್ನು ಒಂದೇ ಸಮಯದಲ್ಲಿ ತಿಳಿಯುತ್ತದೆ. ಇದಕ್ಕೆ ಕೇವಲ... ನವೆಂದುಹೆಸರು. ಇದು ಕೇವಲ ಒಂದೇ ಜ್ಞಾನ ಇರುತ್ತದೆ. ಯಾಕೆಂದರೆ ... ಜ್ಞಾನಾವರಣೀಯ ಕರ್ಮದ ಕ್ಷಯದಿಂದ ಉಂಟಾಗುತ್ತದೆ. ಇದರೊಡನೆ ... ಕ್ಷಾಯೋಪಶಮಿಕ ಜ್ಞಾನವಿರುವುದಿಲ್ಲ. ಹಾಗೆಯೇ ಇದಕ್ಕೋಸ್ಕರವಾ... ಮುನಿಗಳು ತಪಶ್ಚರ್ಯೆಯನ್ನು ಮಾಡುತ್ತಾರೆ. ಆದುದರಿಂದಲೇ ಕೇ... ಸೇವಂತೇಯದರ್ಥ್ಯಂ ಎಂದು ಇದರ ಹೆಸರು ಸಾರ್ಥಕವಾಗಿದೆ.

### ಒಬ್ಬ ಜೀವನಿಗೆ ಒಟ್ಟಿಗೆ ಎಷ್ಟು ಜ್ಞಾನಗಳಾಗಬಹುದು?

## ಏಕಾದೀನಿಭಾಜ್ಯಾನಿಯುಗಪದೇಕಸ್ಮಿನ್ನಾ ಚತುರ್ಭ್ಯಃ ||೩೦||

ಅರ್ಥ:- ಒಬ್ಬ ಜೀವನಲ್ಲಿ ಒಟ್ಟಿಗೆ ಒಂದು ಮೊದಲ್ಗೊಂಡು ನಾ... ಜ್ಞಾನಗಳವರೆಗೆ ಆಗುತ್ತವೆ. ಒಂದು ಜ್ಞಾನವಿದ್ದರೆ ಕೇವಲಜ್ಞಾನ, ... ಡಾದರೆ ಮತಿ, ಶ್ರುತ, ಮೂರಾದರೆ ಮತಿ, ಶ್ರುತ, ಮತ್ತು ಅವಧಿ, ನಾ... ದರೆ ಮತಿ, ಶ್ರುತ, ಅವಧಿ, ಮತ್ತು ಮನಪರ್ಯಾಯ. ಐದು ಜ್ಞಾನ... ಒಟ್ಟಿಗೆ ಇರುವುದಿಲ್ಲ. ಯಾಕೆಂದರೆ ಕೇವಲಜ್ಞಾನವು ಕ್ಷಾಯಿಕ ಜ್ಞಾ... ಗಿರುವುದರಿಂದ ಅದು ಕೇವಲ ಒಂದೇ ಒಂದಾಗಿರುವುದು, ಇತರ ನಾ... ಜ್ಞಾನಗಳು ಕ್ಷಾಯೋಪಶಮಿಕ ಜ್ಞಾನಗಳು.

### ಮತಿಶ್ರುತಾವಧಿಗಳಲ್ಲಿ ವಿಪರ್ಯಯ

## ಮತಿಶ್ರುತಾವಧಯೋ ವಿಪರ್ಯಯಶ್ಚ ||೩೧||

ಅರ್ಥ;- ಮತಿ, ಶ್ರುತ, ಅವಧಿಜ್ಞಾನಗಳಲ್ಲಿ ವಿಪರೀತ ಜ್ಞಾನಗ... ಆಗುತ್ತವೆ. ಅಂದರೆ ಮೇಲೆ ವರ್ಣಿಸಿದ ಐದು ಜ್ಞಾನಗಳು ಸಮ್ಯಗ್ಜ್ಞಾನ...

ಆದರೆ ಮತಿ, ಶ್ರುತ ಮತ್ತು ಅವಧಿಜ್ಞಾನಗಳು ಮಿಥ್ಯಾದರ್ಶನ ಸಂಬಂಧ ದಿಂದ ಮಿಥ್ಯಾಜ್ಞಾನಗಳೆಂದೂ ಹೇಳಲ್ಪಡುತ್ತವೆ. ಅವುಗಳಿಗೆ ಆಗ ಕುಮತಿ, ಕುಶ್ರುತ ಮತ್ತು ಕುಅವಧಿ ಅಥವಾ ವಿಭಂಗಜ್ಞಾನಗಳೆಂದು ಹೇಳುತ್ತಾರೆ.

ವಿಶೇಷಾರ್ಥ:- ಕಹಿ ಸೋರೆಕಾಯಿಯ ಬುರುಡೆಯಲ್ಲಿ ಹಾಲನ್ನು ಸುರಿ ದಿಟ್ಟರೆ ಅದು ಕಹಿಯಾಗುತ್ತದೆ. ಇದರಂತೆ ಮಿಥ್ಯಾದರ್ಶನದ ಉದಯವಿರು ವವರಿಗೆ ಆತ್ಮನಲ್ಲಿರುವ ಆ ಮೂರು ಜ್ಞಾನಗಳು ಮಿಥ್ಯಾರೂಪಗಳಾಗಿ ಪರಿ ಣಮಿಸುತ್ತವೆ. ಮತಿ, ಶ್ರುತ, ಅವಧಿ ಈ ಮೂರು ಜ್ಞಾನಗಳು ವಿಪರೀತ ವಾಗಿಮಾರ್ಪಟ್ಟು ಕುಮತಿ, ಕುಶ್ರುತ, ಕುಅವಧಿ ಜ್ಞಾನಗಳೆಂದುಹೇಳಲ್ಪಡುತ್ತವೆ ಈ ರೀತಿ ಮಿಥ್ಯಾಜ್ಞಾನಗಳು ಮೂರು. ಐದು ಸಮ್ಯಗ್‌ಜ್ಞಾನಗಳು ಕಲೆತು ಜ್ಞಾನವು ಎರಡು ಪ್ರಕಾರವೆಂದು ತಿಳಿಯಬೇಕು.

ಪ್ರಶ್ನೆ:- ಯಾವಪ್ರಕಾರವಾಗಿ ಸಮ್ಯಗ್ದೃಷ್ಟಿಯು ಪದಾರ್ಥಗಳನ್ನು ತಿಳಿಯುತ್ತಾನೆಯೋ ಹಾಗೆಯೇ ಮಿಥ್ಯಾದೃಷ್ಟಿಯನ್ನೂ ತಿಳಿಯುತ್ತಾನೆ. ಹೀಗಿ ರುವಾಗ ಸಮ್ಯಗ್ದೃಷ್ಟಿಯ ಜ್ಞಾನವು ಸಮಗ್‌ಜ್ಞಾನವೆಂದೂ ಮಿಥ್ಯಾದೃಷ್ಟಿ ಯ ಜ್ಞಾನವು ಮಿಥ್ಯಾಜ್ಞಾನವೆಂದೂ ಏಕೆ ಹೇಳುತ್ತಾರೆ, ಉತ್ತರ :-

## ಸದಸತೋರವಿಶೇಷಾದ್ಯದೃಚ್ಛೋಪಲಬ್ಧೇ-
## ರುನ್ಮತ್ತವತ್ ||೩೨||

ಅರ್ಥ ; ಸದ್ವಸ್ತು ಇರುವಂತಹ ವಸ್ತು ಅಥವಾ ಒಳ್ಳೆಯ ವಸ್ತು ಅಸದ್ವಸ್ತು. ಅವಿದ್ಯಮಾನ–ಇಲ್ಲದಿರುವ ವಸ್ತು ಅಥವಾ ಕೆಟ್ಟ ನಿಕೃಷ್ಣ ವಸ್ತು ಇವೆರಡರ ಸತ್-ಅಸತ್ ವಸ್ತುಗಳ ಯಥಾರ್ಥವಾದ ಭೇದವನ್ನು ಮಿಥ್ಯಾ ದೃಷ್ಟಿಯು ತಿಳಿಯುವುದಿಲ್ಲ. ಹುಚ್ಚ ಮನುಷ್ಯನಂತೆ ತನಗಿಚ್ಛೆ ಬಂದಂತೆ, ಯದ್ವಾತದ್ವಾ ತಿಳಿಯುತ್ತಾನೆ. ಉದಾ : ಮದ್ಯಪಾನ ಮಾಡಿದ ಮನುಷ್ಯ ನು ಕೆಲವೊಂದು ಸಮಯ ತಾಯಿಯನ್ನು ನೋಡಿ ಪತ್ನಿಯೆಂದೂ ಕೆಲವು ವಾರಿ ಪತ್ನಿಯನ್ನು ನೋಡಿ ತಾಯಿಯೆಂದೂ ತಿಳಿಯುತ್ತಾನೆ. ಕೆಲವು ಸಮಯ ತಾಯಿಯನ್ನು ತಾಯಿಯೆಂದೂ, ಪತ್ನಿಯನ್ನು ಪತ್ನಿಯೆಂದೂ ತಿಳಿಯುತ್ತಾನೆ. ಇವನಂತೆ ಮಿಥ್ಯಾದೃಷ್ಟಿಯು ಗಡಿಗೆ ಬಟ್ಟೆ ಮೊದಲಾದವುಗಳನ್ನು ಇದ್ದಕ್ಕಿದ್ದ

ಹಾಗೆ ತಿಳಿದರೂ ಮಿಥ್ಯಾದರ್ಶನದ ಉದಯವಿರುವುದರಿಂದ ಅವನ ತಿಳಿ ವಿಶ್ವಾಸಕ್ಕೆ ಯೋಗ್ಯವಾಗುವುದಿಲ್ಲ, ಇವನ ಜ್ಞಾನವು ಒಂದೇ ವಿಧ ನಿಶ್ಚ ವಾಗಿ ಇಲ್ಲದಿರುವಕಾರಣ ಇವನ ಜ್ಞಾನಕ್ಕೆ ಮಿಥ್ಯಾಜ್ಞಾನವೆನ್ನುತ್ತಾರೆ. ದರ್ಶನವಿರುವುದರಿಂದ ಸತ್ ಅಸತ್ ವಸ್ತುಗಳ ಸ್ವರೂಪವನ್ನು ನಿರ್ಣ ಳ್ಳದೆ ಕುಮತಿ, ಕುಶ್ರುತ. ಕುಅವಧಿ ಜ್ಞಾನವುಳ್ಳವರ ಯಥಾರ್ಥ ಜ್ಞಾ ಮಿಥ್ಯಾಜ್ಞಾನವೆಂದೇ ಹೇಳಲ್ಪಡುತ್ತದೆ. ಈ ರೀತಿ ಪ್ರಮಾಣವನ್ನು ಸ ದಿಂದ ವಿವರಿಸಿ ಮುಂದೆ ನಯವನ್ನು ವಿವರಿಸುತ್ತಾರೆ.

## ನಯಗಳ ಭೇಧ

**ನೈಗಮಸಂಗ್ರಹವ್ಯವಹಾರರ್ಜುಸೂತ್ರಶಬ್ದಸಮಭಿ ರೂಢೈವಂಭೂತಾ ನಯಾಃ ||**

ಅರ್ಥ:- ನೈಗಮ, ಸಂಗ್ರಹ, ವ್ಯವಹಾರ, ಋಜುಸೂತ್ರ, ಸಮಭಿರೂಢ, ಮತ್ತು ಏವಂಭೂತ ಈ ಪ್ರಕಾರ ಏಳು ನಯಗಳು. ವಿನಲ್ಲಿ ಅನೇಕ ಧರ್ಮಸ್ವಭಾವಗಳಿರುತ್ತವೆ. ಅವುಗಳಲ್ಲಿ ಯಾವುದಾದರು ಮುಖ್ಯವಾಗಿ ತೆಗೆದುಕೊಂಡು ಅವಿರೋಧರೂಪದಿಂದ ಸಾಧ್ಯವಸ್ತು ತಿಳಿಯುವುದಕ್ಕೆ ಅಥವಾ ಹೇಳುವುದಕ್ಕೆ ನಯವೆನ್ನುತ್ತಾರೆ.

ನೈಗಮನಯ:- ಪ್ರತಿ ಒಂದು ದ್ರವ್ಯವು ಭೂತ, ವರ್ತಮಾನ, ಷ್ಯತ್ಪರ್ಯಾಯಗಳಿಂದ ಕೂಡಿರುತ್ತದೆ, ಮೂರು ಕಾಲದಲ್ಲಿ ಆಗುವ ಪ ಯಗಳ ಸಮೂಹಕ್ಕೆ ದ್ರವ್ಯವೆಂದು ಹೆಸರು ಭೂತ ಮತ್ತು ಭವಿ ಪರ್ಯಾಯಗಳಲ್ಲಿ ವರ್ತಮಾನದ ಸಂಕಲ್ಪವನ್ನು ಮಾಡುವುದು, (ವರ್ತ ನದಲ್ಲಿಯೇ ಪೂರ್ತಿಯಾಗದ ಪರ್ಯಾಯವನ್ನು ಪೂರ್ಣಸಿದಂತೆ ತಿಳಿ ಜ್ಞಾನ) ಅದನ್ನು ನೈಗಮನಯವೆನ್ನುತ್ತಾರೆ. ಭೂತಪರ್ಯಾಯಗಳಲ್ಲಿ ಸಿದ ಕಾರ್ಯಗಳನ್ನು ಅಥವಾ ಭವಿಷತ್ ಮುಂದೆ ಪೂರೈಸುವ ಕಾರ್ಯ ವರ್ತಮಾನಕಾಲದಲ್ಲಿ ಸಂಕಲ್ಪಿಸಿ ಕಾರ್ಯವನ್ನು ಮಾಡುತ್ತೇನೆಂದು ತಿ ವುದು ಅಥವಾ ಹೇಳುವುದು ನೈಗಮನಯವಾಗುತ್ತದೆ.

ಉದಾಹರಣೆ:- ಮರಕಡಿದು ಕಟ್ಟಿಗೆಯ ಸೇರನ್ನು ಮಾಡಲು ಒಬ್ಬ ಹೋರಟ್ಟಿದ್ದಾನೆ, ಅವನನ್ನು ಯಾರಾದರೂ ಕೇಳಿದರೆ ಎಲ್ಲಿಗೆ ಹೋಗುತ್ತಿಯಾ? ಅವನು ಸೇರು ತರಲಿಕ್ಕೆಂದು ಹೇಳಿದರೆ ನೈಗಮನಯದಿಂದ ಅದು ಸರಿಯಾಗಿದೆ.

ಸಂಗ್ರಹನಯ:- ತಮ್ಮ ತಮ್ಮ ಜಾತಿಗನುಸಾರವಾಗಿ ವಸ್ತುಗಳನ್ನು ಅಥವಾ ಅವುಗಳ ಪರ್ಯಾಯಗಳನ್ನು ಒಂದು ರೂಪದಿಂದ ಸಂಗ್ರಹ ಮಾಡುವ ಜ್ಞಾನ ಮತ್ತು ವಚನವನ್ನು ಸಂಗ್ರಹನಯವೆನ್ನುತ್ತಾರೆ. ಅಂದರೆ ಒಂದು ವಸ್ತುವಿನ ಸಮಸ್ತ ಜಾತಿ ಅಥವಾ ಪರ್ಯಾಯಗಳನ್ನು ಒಟ್ಟು ಗೂಡಿಸಿ ಒಂದೇ ಸ್ವರೂಪವನ್ನಾಗಿ ಸಂಗ್ರಹಗೊಳಿಸುತ್ತದೆ.

ಉದಾ :- ಗಡಿಗೆ ಎಂದರೆ ಎಲ್ಲಾ ವಿಧವಾದ ಗಡಿಗೆ. ಬೆಳ್ಳಿಯ, ತಾಮ್ರದ ಹಿತ್ತಾಳೆಯ ಮಣ್ಣಿನ ಎಲ್ಲಾ ಗಡಿಗೆಗಳ ಜ್ಞಾನವಾಗುವುದು, ದ್ರವ್ಯ ವೆಂದು ಹೇಳಿದರೆ ಎಲ್ಲಾ ದ್ರವ್ಯಗಳ ಜ್ಞಾನವಾಗುವುದು. ಜೀವವೆಂದು ಕೇಳಿದರೆ ಎಲ್ಲಾ ತರಹದ ಜೀವಗಳ ಜ್ಞಾನವಾಗುವುದು. ಪುದ್ಗಲವೆಂದು ಹೇಳಿದರೆ ಎಲ್ಲಾ ಪುದ್ಗಲಗಳ ಜ್ಞಾನವಾಗುವುದು. ಸೇನೆ ಎಂದು ಹೇಳಿ ದರೆ ಸೇನೆಯಲ್ಲಿರುವ ಎಲ್ಲ ಭೇದಗಳ ಜ್ಞಾನವಾಗುವುದು. ಇವೆಲ್ಲವನ್ನು ಸಂಗ್ರಹನಯದಿಂದ ತಿಳಿಯಬೇಕು.

ವ್ಯವಹಾರನಯ:- ಸಂಗ್ರಹನಯದಿಂದ ತಿಳಿದ ಪದಾರ್ಥಗಳನ್ನು ಕ್ರಮವಾಗಿ ವಿಂಗಡಿಸುವುದು ವ್ಯವಹಾರನಯವು. ದ್ರವ್ಯ ಎಂದಿಷ್ಟೇ ಕೇಳಿದರೆ ಕಾರ್ಯ ನಡೆಯುವುದಿಲ್ಲ. ಆಗ ವ್ಯವಹಾರನಯವು ಬೇಕಾಗು ತ್ತದೆ. ವ್ಯವಹಾರನಯದಿಂದ ದ್ರವ್ಯವು ಜೀವದ್ರವ್ಯ ಎಂಬುದಾಗಿ ಹೇಳಿ ದರೂ ನಡೆಯುವುದಿಲ್ಲ. ಆಗ ಜೀವದಾದ್ರವ್ಯವು ಸಂಸಾರಿ- ಮುಕ್ತನೆಂಬುದಾಗಿ ಎರಡು ವಿಧವಾಗಿವೆ. ಸಂಸಾರಿಗಳಲ್ಲಿ ದೇವ, ಮನುಷ್ಯ, ತಿರ್ಯಂಚ, ನಾರಕಿಯೆಂದು ನಾಲ್ಕು ವಿಧ. ಅಜೀವ ದ್ರವ್ಯವು ಪುದ್ಗಲ, ಧರ್ಮ ಅಧರ್ಮ, ಆಕಾಶ, ಕಾಲವೆಂಬುದಾಗಿ ಐದು ವಿಧವಾಗಿದೆ. ಪುದ್ಗಲವು ಅಣುಸ್ಕಂಧವೆಂಬ ಭೇದದಿಂದ ಎರಡು ವಿಧವಾಗಿದೆ. ಈ ರೀತಿ ವ್ಯವಹಾರ ನಯವು ವಸ್ತುಗಳನ್ನು ಎಲ್ಲಿಯವರೆಗೆ ಭೇದಗಳನ್ನು ಮಾಡಬಲ್ಲದೋ ಅಲ್ಲಿ ಯವರೆಗೂ ಪ್ರವರ್ತಿಸುತ್ತದೆ.

ಋಜುಸೂತ್ರನಯ:- ಭೂತ ಮತ್ತು ಭವಿಷತ್ ವ
ಗಳನ್ನು ಬಿಟ್ಟು ವರ್ತಮಾನ ಪರ್ಯಾಯವನ್ನೇ ತಿಳಿಯುವ ಜ್ಞಾನ
ವಚನಕ್ಕೆ ಋಜುಸೂತ್ರವೆನ್ನುತ್ತಾರೆ. ವಸ್ತು ಪ್ರತಿಸಮಯದಲ್ಲಿ
ವಣೆಯನ್ನು ಹೊಂದುತ್ತದೆ, ಈ ಕಾರಣದಿಂದ ಯಥಾರ್ಥವಾಗಿ
ದರೆ ಒಂದು ಪರ್ಯಾಯವು ಒಂದು ಸಮಯ ಮಾತ್ರವಿರುತ್ತ
ಒಂದು ಸಮಯ ಮಾತ್ರ ಇರುವ ಪರ್ಯಾಯಕ್ಕೆ ಅರ್ಥಪ
ವೆನ್ನುತ್ತಾರೆ. ಈ ಅರ್ಥ ಪರ್ಯಾಯವು ಋಜುಸೂತ್ರನಯದ
ವಾಗಿರುತ್ತದೆ. ಆದರೆ ವ್ಯವಹಾರದಲ್ಲಿ ಒಂದು ಸ್ಥೂಲಪರ್ಯಾ
ಎಷ್ಟರವರೆಗೆ ಇರುತ್ತದೋ ಅಷ್ಟರವರೆಗೆ ಜನರು ಅದನ್ನು ವ
ಪರ್ಯಾಯವೆನ್ನುತ್ತಾರೆ. ಉದಾ:- ಮನುಷ್ಯ ಪರ್ಯಾಯ ತನ್ನ
ಷ್ಯದವರೆಗೆ ಇರುತ್ತದೆ. ಇಂತಹ ಸ್ಥೂಲಪರ್ಯಾಯವನ್ನು ತಿಳಿಯುವ
ಇದು ಸ್ಥೂಲಋಜುಸೂತ್ರ, ಸೂಕ್ಷ್ಮಋಜುಸೂತ್ರ ವರ್ತಮಾನದ
ಸಮಯದ ಪರ್ಯಾಯವನ್ನು ಮಾತ್ರ ತಿಳಿಯುತ್ತದೆ.

ಶಬ್ದನಯ :- ಲಿಂಗ, ಸಂಖ್ಯಾ, ಸಾಧನ ಮೊದಲಾದುವುಗಳ
ಚಾರ ದೋಷಗಳನ್ನು ದೂರಮಾಡುವ ಜ್ಞಾನ ಮತ್ತು ವಚ
ಶಬ್ದನಯವೆನ್ನುತ್ತಾರೆ. ಬೇರೆ ಬೇರೆ ಲಿಂಗವುಳ್ಳ ಶಬ್ದಗಳನ್ನು
ವಾಚ್ಯವೆನ್ನುವುದು ಲಿಂಗ ವ್ಯಭಿಚಾರವಾಗುತ್ತದೆ. ಅಂದರೆ ಪ
ಸಂಬಂಧವಾದ ಲಿಂಗಸಂಖ್ಯಾ(ವಚನ) (ಕಾರಕ) ಕಾಲ ಮೊದಲಾ
ದೋಷಗಳನ್ನು ನಿವಾರಿಸಿ ಕೇವಲ ಶಬ್ದಮಾತ್ರದ ಅರ್ಥವನ್ನು
ವುದು ಅಥವಾ ಹೇಳುವುದು ಶಬ್ದನಯದ ವಿಷಯವಾಗಿದೆ.
ಪುಷ್ಯ ತಾರಕ ಮತ್ತು ನಕ್ಷತ್ರ ಬೇರೆ ಬೇರೆ ಲಿಂಗವುಳ್ಳ ಶಬ್ದಗಳ
ಗಳನ್ನು ಸೇರಿಸಿ ಪ್ರಯೋಗಿಸುವುದು ಲಿಂಗವ್ಯಭಿಚಾರವಾಗಿದೆ.

ಸಂಖ್ಯಾವ್ಯಭೀಚಾರ:- ಜಲಂ, ಆಪಃ, ವರ್ಷಾ, ಋತುಃ,
ವನಂ, ವರನಗರಂ, ಇವುಗಳಲ್ಲಿ ಏಕವಚನಾಂತ ಶಬ್ದಗಳನ್ನು ಬ
ನಾಂತಗಳಿಗೆ ವಿಶೇಷಮಾಡಲಾಗಿದೆ, ಇದು ಸಂಖ್ಯಾವ್ಯಭಿಚಾರ.

ಸಾಧನವ್ಯಭೀಚಾರ:- ಹೇಗೆ "ಸೇನಾ ಪರ್ವತಂ ವಸತಿ" ಅಂದರೆ
ಬೆಟ್ಟದಲ್ಲಿದೆ ಇದು ಇಲ್ಲಿ ಅಧಿಕರಣ ಕಾರಕಾರ್ಥದಲ್ಲಿ ಸಪ್ತಮೀವಿಭ
ದ್ವಿತೀಯಾವಿಭಕ್ತಿಯಾಗಿದೆ. ಈ ಕಾರಣ ಇಲ್ಲಿ ಸಾಧನವ್ಯಭಿಚಾರವಾಗಿದೆ

ಪುರುಷವ್ಯಭಿಚಾರ:— ಹೇಗೆ "ಏಹಿ ಮನ್ಯೇ ರಥೇನಯಾಸ್ಯಸಿ ನಹಿ ಯಾಸ್ಯಸಿಯಾತಸ್ತೇಪಿತಾ" ಅಂದರೆ ರಥದಿಂದ ಹೋಗುವೆನೆಂದು ನೀನು ತಿಳಿಯುತ್ತೀ ಹೋಗುವುದಿಲ್ಲ, ನಿನ್ನ ತಂದೆ ಹೋಗಿದ್ದಾರೆಯೋ? ಇಲ್ಲ, ಮನ್ಯಸೇ ಎಂಬ ಸ್ಥಾನದಲ್ಲಿ ಮನ್ಯೇ ಮತ್ತು ಯಾಸ್ಯಾಮಿ ಎಂಬ ಜಾಗದಲ್ಲಿ ಯಾಸ್ಯಸಿ ಎಂಬ ಕ್ರಿಯೆಯು ಪ್ರಯೋಗವಾಗಿದೆ, ಈ ಕಾರಣದಿಂದ ಇಲ್ಲಿ ಕಾರಕವ್ಯಭಿಚಾರವಾಗುತ್ತದೆ.

ಕಾಲವ್ಯಭಿಚಾರಃ—"ವಿಶ್ವದೃಶ್ವಾಸ್ಯ ಪುತ್ರೋ ಜನಿತಾ" ಇವನಿಗೆ ವಿಶ್ವದೃಶ್ವನೆಂಬ ಮಗನಾಗುವನು ಇಲ್ಲಿ ವಿಶ್ವದೃಶ್ವಾ ಎಂಬುದನ್ನು ಕರ್ತೃಪದವನ್ನಾಗಿ ಮಾಡಿ "ಜನಿತಾ" ಎಂಬ ಕ್ರಿಯೆಯು ಪ್ರಯೋಗವಿದೆ. ಈ ಕಾರಣದಿಂದ ಇಲ್ಲ. ಕಾಲವು ವ್ಯಭಿಚಾರವಾಗುತ್ತದೆ. ಮುಂದೆ ಆಗುವ ಕಾರ್ಯವನ್ನು ಆದಂತೆ ತೋರಿಸುವುದರಿಂದ ಕಾಲವ್ಯಭಿಚಾರವಾಗುತ್ತದೆ.

ಉಪಗ್ರಹವ್ಯಭಿಚಾರ;— ಸಂತಿಷ್ಠತೇ, ಪ್ರತಿಷ್ಠತೇ, ವಿರಮತಿ, ಉಪರಮತಿ ಇಲ್ಲಿ "ಸಂ" ಮತ್ತು "ಪ್ರ" ಉಪಸರ್ಗದ ಕಾರಣದಿಂದ ಸ್ಥಾ ಧಾತುವಿಗೆ ಆತ್ಮನೇ ಪದ ಪ್ರಯೋಗ ವಿ ಮತ್ತು ಉಪಸರ್ಗದ ಕಾರಣದಿಂದ ರಮು ಧಾತುವಿನ ಪ್ರಯೋಗವು ಪರಸ್ಮೈಪದಿಯಲ್ಲಿ ಆಗಿದೆ. ಈ ಕಾರಣದಿಂದ ಇಲ್ಲಿ ಉಪಗ್ರಹವ್ಯಭಿಚಾರವಾಗಿದೆ. ಒಂದು ವೇಳೆ ವ್ಯವಹಾರದಲ್ಲಿ ಇಂತಹ ಪ್ರಯೋಗಗಳು ಆದರೂ ಶಬ್ದನಯವು ಈ ದೋಷಗಳನ್ನು ಕ್ಷಮೆಯೆಂದು ತಿಳಿಯುತ್ತದೆ. ವ್ಯಾಕರಣ ದೋಷಗಳನ್ನು ದೂರ ಮಾಡಿ ಲೋಕ ವ್ಯವಹಾರವನ್ನು ಅದು ಪೂರ್ಣಗೊಳಿಸುತ್ತದೆ, ಲೋಕ ಮತ್ತು ಆಗಮದ ವಿರೋಧವಾಗುತ್ತದೆ ಎಂದು ಯಾರಾದರೂ ಹೇಳಿದರೆ ಆಗಲಿ. ಇಲ್ಲಿ ತತ್ವದ ವಿಚಾರ ಮಾಡಲಾಗುತ್ತಿದೆ. ಔಷಧವು ರೋಗಿಯ ಇಚ್ಛೆಗನುಸಾರವಾಗಿರುವುದಿಲ್ಲ.

ಸಮಭಿರೂಢನಯ :- ನಾನಾ ಪ್ರಕಾರದ ಅರ್ಥಗಳನ್ನು ಬಿಟ್ಟು ಲೋಕದಲ್ಲಿ ಪ್ರಚಲಿತವಾಗಿರುವ ಅರ್ಥವನ್ನು ಗ್ರಹಣ ಮಾಡಿ ವಸ್ತುವನ್ನು ಹೇಳುವುದು ಸಮಭಿರೂಢನಯವು, ಗೌ ಶಬ್ದವು ಅನೇಕ ಅರ್ಥದಲ್ಲಿ ಪ್ರಯೋಗವಾದರೂ ರೂಢಿಯಲ್ಲಿ ಮಾತ್ರ ವಿಶೇಷತಃ ಆಕಳಿನಲ್ಲಿ ಪ್ರಯುಕ್ತವಾಗುತ್ತದೆ ಆದುದರಿಂದ ಸಮಭಿರೂಢನಯದಿಂದ ಅದು ಸರಿಯಾಗಿದೆ.

ಉದಾ:- ಇಂದ್ರ, ಶಕ್ರ, ಪುರಂದರ, ಈ ಮೂರು ಶಬ್ದಗಳು ಸ್ವ
ರ್ಗಾಧಿಪತಿಯಾದ ಇಂದ್ರನನ್ನು ಹೇಳುತ್ತವೆ, ಎನ್ನುವುದು ಸಮಭಿರೂಢನ
ಯದ ಅಭಿಪ್ರಾಯವಾಗಿರುತ್ತದೆ, ಆನಂದ ಕ್ರೀಡೆಯಲ್ಲಿರುವವನು, ಪ
ಶ್ವರ್ಯವನ್ನನುಭವಿಸುತ್ತಿರುವನು ಎಂದು ಇಂದ್ರ ಶಬ್ದದ ಅರ್ಥ, ಶಕ್ತ
ಯಾಗಿರುವವನು, ಶಕ್ತನು, ನಗರವನ್ನು ರಕ್ಷಿಸುವವನು ಪುರಂದರನು. ಮ
ವಾಗಿ ಶಬ್ದಭೇದದಿಂದ ಅರ್ಥ ಬೇಧವನ್ನು ಒಪ್ಪುವುದು ಸಮಭಿರೂಢನ
ಒಂದು ವಸ್ತುವಿಗೆ ಅನೇಕ ಅರ್ಥಗಳಿದ್ದರೂ ಸಮಭಿರೂಢನಯವು ರೂಢಿ
ಪ್ರಚಲಿತವಾಗಿರುವ ಮುಖ್ಯಾರ್ಥವನ್ನು ಮಾತ್ರ ಹೇಳುತ್ತದೆಂದು ತಿ
ಬೇಕು.

ಏವಂಭೂತನಯ:- ಯಾವ ಕಾಲದಲ್ಲಿ ಯಾವ ಕೆಲಸವನ್ನು ಮ
ತ್ತಾನೆಯೋ ಆ ಸಮಯದಲ್ಲಿ ಅದೇ ಹೆಸರಿಂದ ಅವನನ್ನು ತಿಳಿಯು
ಅಥವಾ ಕರೆಯುವುದು ಇದಕ್ಕೆ ಏವಂಭೂತನಯವೆನ್ನುತ್ತಾರೆ. ಉದಾ:- ದೇ
ಗಳ ಒಡೆಯನು ಪರಮ ಐಶ್ವರ್ಯಯುಕ್ತನಾಗಿರುವಾಗ ಅವನನ್ನು ಇ
ಎನ್ನುವುದು, ಪೂಜೆ-ಅಭಿಷೇಕ ಮಾಡುವಾಗ ಅವನು ಇಂದ್ರನಲ್ಲ, ಅ
ದ್ರನು ಶಕ್ತಿರೂಪಕಾರ್ಯವನ್ನು ಮಾಡುವಾಗ ಅವನು ಇಂದ್ರನಲ್ಲ,
ಶಕ್ರನೆಂದು ತಿಳಿಯುವುದು. ಹೇಳುವುದು ಏವಂಭೂತನಯವು.

ಮೇಲೆ ವಿವರಿಸಿದ ಏಳು ನಯಗಳಲ್ಲಿ ನೈಗಮ, ಸಂಗ್ರಹ, ಮ
ವ್ಯವಹಾರ, ಈ ಮೂರು ನಯಗಳು ದ್ರವ್ಯಾರ್ಥಿಕ ನಯಗಳಾಗಿವೆ,
ಋಜುಸೂತ್ರ, ಶಬ್ದ, ಸಮಭಿರೂಢ, ಮತ್ತು ಏವಂಭೂತ, ಈ ನಾ
ನಯಗಳು ಪರ್ಯಾಯಾರ್ಥಿಕ ನಯಗಳಾಗಿವೆ. ವಸ್ತುವಿನ ನಿಜವಾದ
ಸ್ವರೂಪವನ್ನು ಮುಖ್ಯ ಪಡಕೊಂಡು ವಿವರಿಸುವುದು ನಿಶ್ಚಯನಯ
ಯಾವುದಾದರೊಂದು ಪ್ರಯೋಜನವನ್ನು ಸಾಧಿಸುವುದಕ್ಕಾಗಿ ಇತರ ವ
ವಿನ ಸ್ವರೂಪವನ್ನು ಇನ್ನೊಂದು ವಸ್ತುವಿನಲ್ಲಿ ಆರೋಪಿಸುವುದು ಅಥ
ಪರಕಾರಣದಿಂದ ನೈಮಿತ್ತಿಕ ಭಾವವನ್ನು ವಸ್ತುವಿನ ನಿಜಸ್ವರೂಪವೆನ್ನು
ವ್ಯವಹಾರನಯವು, ಇದನ್ನು ಉಪಚಾರನಯವೆಂದೂ ಹೇಳುತ್ತಾರೆ.
ಲಿನ ಏಳು ನಯಗಳಲ್ಲಿ ಮೂರು ದ್ರವ್ಯದ ಮುಖ್ಯ ಸ್ವರೂಪವನ್ನು

ತ್ರವೆ. ಈ ಕಾರಣದಿಂದ ನೈಗಮಾದಿ ಮೂರು ನಯಗಳು ದ್ರವ್ಯಾರ್ಥಿಕ ಗಳೆಂದೂ, ಉಳಿದ ಋಜುಸೂತ್ರಾದಿ ನಾಲ್ಕು ನಯಗಳು ಪರ್ಯಾಯಗ ಳನ್ನು ಹೇಳುವುದರಿಂದ ಪರ್ಯಾಯಾರ್ಥಿಕಗಳೆಂದೂ ಹೇಳಲ್ಪಟ್ಟಿವೆ. ವ್ಯವ ಹಾರ ಮತ್ತು ನಿಶ್ಚಯ ಎರಡೂ ನಯಗಳು ಜೈನಾಗಮದಲ್ಲಿ ಉಪದೇಶಗಳು.

ವ್ಯವಹಾರ (ಉಪಚಾರ) ನಯವು ಸದ್ಭೂತ–ಅಸದ್ಭೂತ, ಉಪಚರಿತ ಎಂಬುದಾಗಿ ಮೂರು ವಿಧ. ಜೀವನು ರಾಗದ್ವೇಷಾದಿ ಭಾವಕರ್ಮಗಳಿಗೆ ಕರ್ತ ನೆಂದು ಹೇಳುವುದು ಅಸದ್ಭೂತ ವ್ಯವಹಾರನಯವು. ಗಡಿಗೆ ಬಟ್ಟೆ ಮೊದಲಾ ದುವುಗಳ ಕರ್ತನೆನ್ನುವುದು ಉಪಚರಿತ ವ್ಯವಹಾರನಯವು. ಶುದ್ಧವಾದ ಜ್ಞಾನ ದರ್ಶನಗಳಿಗೆ ಕರ್ತನೆನ್ನುವುದು ಸದ್ಭೂತವ್ಯವಹಾರನಯವು. ನಿಶ್ಚಯನಯವು ಎರಡುವಿಧ 1) ಶುದ್ಧನಿಶ್ಚಯನಯ 2) ಅಶುದ್ಧನಿಶ್ಚಯನಯ. ಶುದ್ಧವಾದ ದರ್ಶನಜ್ಞಾನ ಅಂದರೆ ಕೇವಲದರ್ಶನ, ಕೇವಲ ಜ್ಞಾನಗಳಿಗೆ ಕರ್ತನೆನ್ನುವುದು ಶುದ್ಧ ನಿಶ್ಚಯನಯವು. ಜೀವನು ಕ್ಷಯೋಪಶಮ ರೂಪವಾದ ಮತಿಜ್ಞಾನಾದಿ ನಾಲ್ಕು ಜ್ಞಾನಗಳಿಗೆ ಕರ್ತನಾಗಿರುತ್ತಾನೆನ್ನುವುದು ಅಶುದ್ಧ ನಿಶ್ಚಯನಯವು, ಇವುಗಳ ವಿಶೇಷ ಸ್ವರೂಪವನ್ನು ಆಲಾಪಪದ್ಧತಿಯಚಕ್ರ ಮೊದಲಾದ ಗ್ರಂಥ ಗಳಿಂದ ತಿಳಿಯಬೇಕು.

## ಇತಿಶ್ರೀ ಉಮಾಸ್ವಾಮಿವಿರಚಿತೇ ಮೋಕ್ಷಶಾಸ್ತ್ರೇ ಪ್ರಥಮೋಽಧ್ಯಾಯಃ

# ಪ್ರಶ್ನಾವಳಿ

1) ತತ್ವಗಳೆಷ್ಟು? ಮೂಲ ತತ್ವಗಳು ಯಾವುವು?

2) ನಿಕ್ಷೇಪಗಳೆಂದರೇನು?

3) ನಯ ಮತ್ತು ಪ್ರಮಾಣದಲ್ಲಿ ಭೇದವೇನು?

4) ವಿದ್ವಾಂಸನಾದರೆ ಮುಕ್ತಿಯನ್ನು ಹೊಂದುವುದಿಲ್ಲವೇ?

5) ಶ್ರುತಜ್ಞಾನವು ಮೊದಲೋ? ಮತಿಜ್ಞಾನವು ಮೊದಲೋ?

6) ಅವಧಿಜ್ಞಾನದ ಭೇದ ಉಪಭೇದಗಳೆಷ್ಟು?

7) ಸಂಗ್ರಹ ನಯದ ವಿಷಯವನ್ನು ಉದಾಹರಣೆ ಸಹಿತ ತಿಳಿಸು?

8) ನಯ ನಿಕ್ಷೇಪಗಳಲ್ಲಿ ಭೇದವೇನು?

9) ಮನಃಪರ್ಯಾಯ ಜ್ಞಾನದ ಭೇದ ಮತ್ತು ವಿಷಯಗಳನ್ನು ವರ್ಣಿಸು?

10) ಸಮ್ಯಗ್ದರ್ಶನದ ಭೇದಗಳೆಷ್ಟು?

11) ದ್ರವ್ಯನಿಕ್ಷೇಪ ಮತ್ತು ನೈಗಮನಯ, ಭಾವನಿಕ್ಷೇಪ ಮತ್ತು ಭೂತ ನಯಗಳಲ್ಲಿ ಭೇದವೇನು?

12) ನಯಗಳ ಭೇದಗಳನ್ನು ಲಕ್ಷಣಪೂರ್ವಕವಾಗಿ ವರ್ಣಿಸು?



# ಎರಡನೆಯ ಅಧ್ಯಾಯ

ಜೀವನ ಅಸಾಧಾರಣ ಭಾವಗಳು

## ಔಪಶಮಿಕಕ್ಷಾಯಿಕೌ ಭಾವೌ ಮಿಶ್ರಶ್ಚ ಜೀವಸ್ಯ ಸ್ವತತ್ತ್ವಮೌದಯಿಕಪಾರಿಣಾಮಿಕೌ ಚ ||೧||

ಅರ್ಥ:– ಔಪಶಮಿಕ ಮತ್ತು ಕ್ಷಾಯಿಕ ಭಾವಗಳು ಮಿಶ್ರಭಾವವು, ಹಾಗೆಯೇ ಔದಯಿಕ ಪಾರಿಣಾಮಿಕ ಭಾವಗಳು ಇವು ಜೀವನ ಅಸಾಧಾರಣ ಭಾವಗಳು. ಇವುಗಳನ್ನು ಜೀವನ ನಿಜಭಾವವೆಂದು ಹೇಳುತ್ತಾರೆ. ಅಂದರೆ ಇವು ಜೀವನನ್ನು ಬಿಟ್ಟು ಬೇರೆ ದ್ರವ್ಯಗಳಲ್ಲಿ ಇರುವುದಿಲ್ಲ.

ವಿಶೇಷಾರ್ಥ:– ಔಪಶಮಿಕ–ಯಾವ ಕಾರಣದಿಂದ ಔಪಶಮಿಕಗಳ ಶಕ್ತಿಯು ವಿಷಯವನ್ನು ಹೊಂದಿರುತ್ತದೆಯೋ ಪ್ರಕಟವಾಗುವುದಿಲ್ಲವೋ ಅದಕ್ಕೆ ಉಪಶಮ ಭಾವವೆಂದು ಹೆಸರು. ಇದರಿಂದಾಗುವ ಆತ್ಮನ ಪರಿಣಾಮಕ್ಕೆ ಔಪಶಮಿಕ ಭಾವವೆಂದು ಹೆಸರು; ಉದಾ. :– ನಿರ್ಮಲೀ ಬೀಜದ ಸಂಬಂಧದಿಂದ ಕೆಸರು ನೀರಿನ ತಳಹದಿಯಲ್ಲಿ ಹೋಗಿ ನಿಂತು ನೀರು ಸ್ವಚ್ಛವಾಗಿರುವುದು. ಹಾಗೆಯೇ ಕರ್ಮಗಳ ಉಪಶಮವಾಗುವುದು.

ಕ್ಷಯ ಅಂದರೆ ಕರ್ಮಗಳ ನಾಶ. ಕರ್ಮಗಳು ನಾಶವಾಗಿ ಉಂಟಾಗುವ ಪರಿಣಾಮಕ್ಕೆ ಕ್ಷಾಯಿಕ ಭಾವವೆಂದು ಹೇಳುತ್ತಾರೆ. ಮೇಲಿನ ಉದಾಹರಣೆಯಲ್ಲಿ ಕೆಸರುರಹಿತವಾದ ನಿರ್ಮಲವಾದ ನೀರನ್ನು ಮತ್ತೊಂದು ಪಾತ್ರೆಯಲ್ಲಿ ತೆಗೆದುಕೊಂಡರೆ ಆ ನೀರು ಯಾವ ಪ್ರಕಾರವಾಗಿ ಸ್ವಚ್ಛವಾಗುತ್ತದೆಯೋ ಹಾಗೆಯೇ ಕ್ಷಾಯಿಕ ಪರಿಣಾಮದಲ್ಲಿ ಈ ಆತ್ಮನು ನಿರ್ಮಲನಾಗಿರುತ್ತಾನೆ.

### ಕ್ಷಯೋಪಶಮ ಅಥವಾ ಕ್ಷಾಯೋಪಶಮಿಕಭಾವ

೧ಸರ್ವಘಾತಿಸ್ಪರ್ಧಕಗಳ = ಉದಯಾಭಾವೀ ⊕ ಕ್ಷಯ ಮತ್ತು ಭವಿಷ್ಯದಲ್ಲಿ ಉದಯಕ್ಕೆ ಬರುವ ನಿಷೇಕಗಳ + ಸದವಸ್ಥಾರೂಪ ಉಪಶಮ ಮತ್ತು ದೇಶಘಾತಿ ಸ್ಪರ್ಧಕಗಳ ಉದಯವಾಗುವುದಕ್ಕೆ ಕ್ಷಯೋಪಶಮ ಎಂದು

---

= ಯಾವುದು ಜೀವನ ಸಮ್ಯಕ್ತ್ವ ಮೊದಲಾದ ಅನುಜೀವಿ ಗುಣಗಳನ್ನು ಸಂಪೂರ್ಣರೂಪದಿಂದ ನಾಶಮಾಡುವುದೋ ಅದು ಸರ್ವಘಾತಿಯು.

= ಫಲಕೊಡದೆ ಉದಯದಲ್ಲಿ ಬರುವ ಕರ್ಮಗಳು ಬಿದ್ದು ಹೋಗುವುದು.

ಒಂದು ಸಮಯದಲ್ಲಿ ಎಷ್ಟು ಕರ್ಮ ಪರಮಾಣುಗಳು ಉದಯದಲ್ಲಿ ಬರುವವೋ ಅವೆಲ್ಲವುಗಳ ಸಮೂಹಕ್ಕೆ ನಿಷೇಕವೆಂದು ಹೆಸರು.

- ಯಾವುದು ಜೀವನ ಜ್ಞಾನ ಮೊದಲಾದ ಗುಣಗಳ ಏಕದೇಶವನ್ನು ವಿನಾಶ ಮಾಡುವುದೋ, ಅದು ದೇಶಘಾತಿಯು.

ಹೇಳುತ್ತಾರೆ. ಉದಾ :- ಸ್ವಚ್ಛ ನೀರನ್ನು ಹಾಳುಮಾಡುವ ಕೆಸರಿನ ಪ
ಪರಮಾಣುಗಳು ತಳಹದಿಯಲ್ಲಿರುವುದೂ ಮತ್ತು ಗಣನೆಗೆ ಬಾರದ ಪ
ಹಲವು ಪರಮಾಣುಗಳು ನೀರಿನೊಡನೆ ಬೆರೆಸಿರುವುದೂ ಇವೆರಡರ ಬಗೆ
ನೀರಿನಲ್ಲಿ ಸ್ವಚ್ಛತೆ ಅಸ್ವಚ್ಛತೆಗಳು ಕೂಡಿ ಇರುತ್ತವೆ. ಹೀಗೆಯೇ ಕರ್ಮ
ಕ್ಷಯ ಮತ್ತು ಉಪಶಮಗಳ ಮೂಲಕ ಜೀವನ ಯಾವ ಪರಿಣಾಮವಾ
ಡೆಯೋ ಅದು ಕ್ಷಾಯೋಪಶಮಿಕ ಭಾವವೆಂದು ತಿಳಿಯಬೇಕು.

### ಉದಯ ಮತ್ತು ಔದಯಿಕ ಭಾವ

ಕರ್ಮಗಳ ಸ್ಥಿತಿಯು ಪೂರ್ತಿಯಾದೊಡನೆ ಕರ್ಮಗಳು ಫಲಕೊ
ದಕ್ಕೆ ಉದಯವೆಂದು ಹೆಸರು. ಕರ್ಮಗಳ ಉದಯದಿಂದ ಜೀವನ
ಪರಿಣಾಮವಾಗುವುದೋ ಅದಕ್ಕೆ ಔದಯಿಕ ಭಾವವೆಂದು ಹೇಳಲಾಗಿ

ಕೆಲವು ಕರ್ಮಗಳ ಪ್ರಕೃತಿಗಳು ಉದಯದಲ್ಲಿಯೇ ಕಾಣುತ್ತವೆ. 
ಕ್ಷಯ, ಉಪಶಮ ಮತ್ತು ಕ್ಷಯೋಪಶಮಗಳು ಆಗುವುದಿಲ್ಲ.

ಪಾರಿಣಾಮಿಕಭಾವ:- ಯಾವ ಜೀವನ ಭಾವವು ಕರ್ಮಗಳ ಉ
ಕ್ಷಯೋಪಶಮ ಕ್ಷಯಮತ್ತು ಉದಯದ ಅಪೇಕ್ಷೆ ಇಲ್ಲದೆ ಆತ್ಮನ ಸ್ವ
ರೂಪವಾಗಿರುವುದೋ ಅವುಗಳಿಗೆ ಪಾರಿಣಾಮಿಕ ಭಾವಗಳೆಂದು ಹೆಸರು.

### ಭಾವಗಳ ಭೇದಗಳು

## ದ್ವಿನವಾಷ್ಟಾದಶೈಕವಿಂಶತಿತ್ರಿಭೇದಾ ಯಥಾಕ್ರಮ

ಅರ್ಥ:- ಮೇಲೆ ವಿವರಿಸಿದ ಐದು ಭಾವಗಳು ಕ್ರಮವಾದ ಎರಡು
ಭತ್ತು, ಹದಿನೆಂಟು, ಇಪ್ಪತ್ತೊಂದು ಮತ್ತು ಮೂರು ವಿಭಾಗಗಳಿಂದ
ವಾಗಿ ವಿಭಾಗಿಸಲ್ಪಟ್ಟಿವೆ.

### ಔಪಶಮಿಕಭಾವದ ಭೇದ

## ಸಮ್ಯಕ್ತ್ವಚಾರಿತ್ರೇ ॥೩॥

ಅರ್ಥ:- ಔಪಶಮಿಕಸಮ್ಯಕ್ತ್ವ ಮತ್ತು ಔಪಶಮಿಕ ಚಾರಿ
ಔಪಶಮಿಕ ಭಾವದ ಎರಡು ಭೇದಗಳು.

(5) ಜ್ಞಾನಾವರಣ, ದರ್ಶನಾವರಣ ಮತ್ತು ಅಂತರಾಯವೆಂಬ ಮೂರು ಘಾತಿಯ ಕರ್ಮಗಳ ಉದಯ, ಕ್ಷಯ, ಮತ್ತು ಕ್ಷಯೋಪಶಮಗಳು, ಮೋಹನೀಯ ಕರ್ಮಗಳ, ಉದಯ, ಕ್ಷಯ, ಕ್ಷಯೋಪಶಮ, ಮತ್ತು ಉಪಶಮ ಹೀಗೆಯೇ ಅಘಾತಿ ಕರ್ಮಗಳ ಉದಯ ಕ್ಷಯಗಳ ಅವಸ್ಥಾನಗಳು ಪಾರಿಣಾಮಿಕ ಭಾವದಲ್ಲಿ ಆಗುವುದಿಲ್ಲ.

ವಿಶೇಷಾರ್ಥ :- ಔಪಶಮಿಕ ಸಮ್ಯಕ್ತ್ವ, ಅನಂತಾನುಬಂಧೀ ಕ್ರೋಧ ಮಾನ, ಮಾಯಾ, ಲೋಭ, ಮಿಥ್ಯಾತ್ವ, ಸಮ್ಯಕ್‌ಮಿಥ್ಯಾತ್ವ ಮತ್ತು ಸಮ್ಯಕ್ತ್ವ ಏಳು ಪ್ರಕೃತಿಗಳ ಉಪಶಮದಿಂದ ಆಗುವ ಸಮ್ಯಕ್ತ್ವಕ್ಕೆ ಉಪಶಮ ಸಮ್ಯಕ್ತ್ವವೆಂದು ಹೇಳುತ್ತಾರೆ. ಉಪಶಮ ಸಮ್ಯಕ್ತ್ವವು ಎರಡು ಪ್ರಕಾರವಾಗಿದೆ. ಅನಾದಿ ಮಿಥ್ಯಾದೃಷ್ಟಿಗೆ ಮಾತ್ರವೊದಲು ಆಗುವ ಸಮ್ಯಕ್ತ್ವಕ್ಕೆ ಪ್ರಥಮೋಪಶಮ ಸಮ್ಯಕ್ತ್ವವೆಂದೂ, ಶ್ರೇಣಿಯನ್ನು ಏರುವಾಗ ಆಗುವ ಕರ್ಮಗಳ ಉಪಶಮಕ್ಕೆ ದ್ವಿತೀಯೋಪಶಮ ಸಮ್ಯಕ್ತ್ವವೆಂದೂ ಹೇಳುವರು.

ಔಪಶಮಿಕ ಚಾರಿತ್ರ:- ಅಪ್ರತ್ಯಾಖ್ಯಾನ ಮೊದಲಾದ ಚಾರಿತ್ರ ಮೋಹನೀಯ ಕರ್ಮದ ೨೧ ಪ್ರಕೃತಿಗಳ ಉಪಶಮದಿಂದ ಯಾವ ಚಾರಿತ್ರವಾಗುವುದೋ ಅದಕ್ಕೆ ಔಪಶಮಿಕ ಚಾರಿತ್ರವೆನ್ನುತ್ತಾರೆ.

### ಕ್ಷಾಯಿಕ ಭಾವದ ಭೇದ

## ಜ್ಞಾನದರ್ಶನದಾನಲಾಭಭೋಗೋಪಭೋಗ-ವೀರ್ಯಾಣಿ ಚ ||೪||

ಅರ್ಥ :- ಕೇವಲಜ್ಞಾನ, ಕೇವಲ ದರ್ಶನ, ಕ್ಷಾಯಿಕದಾನ, ಕ್ಷಾಯಿಕ ಲಾಭ, ಕ್ಷಾಯಿಕಭೋಗ, ಕ್ಷಾಯಿಕ ಉಪಭೋಗ, ಕ್ಷಾಯಿಕವೀರ್ಯ ಹಾಗೇನೆಯೇ ಸೂತ್ರದಲ್ಲಿರುವ ಚಕಾರದಿಂದ ಕ್ಷಾಯಿಕ ಸಮ್ಯಕ್ತ್ವ ಮತ್ತು ಕ್ಷಾಯಿಕಚಾರಿತ್ರ ಈ ಒಂಭತ್ತು ಕ್ಷಾಯಿಕ ಭಾವದ ಭೇದಗಳು.

(ಈ ಒಂಭತ್ತು ಭಾವಗಳಿಗೆ ನವಲಬ್ಧಿಗಳೆಂದೂ ಹೇಳುತ್ತಾರೆ.)

ಕೇವಲಜ್ಞಾನ :- ಸಂಪೂರ್ಣಜ್ಞಾನಾವರಣೀಯ ಕರ್ಮದ ಕ್ಷಯದಿಂದಾಗುವುದು. ಕೇವಲದರ್ಶನ–ಸಂಪೂರ್ಣ ದರ್ಶನಾವರಣೀಯ ಕರ್ಮದ ಕ್ಷಯದಿಂದಾಗುವುದು. ಕ್ಷಾಯಿಕದಾನ ಮೊದಲಾದ ಐದು ಭಾವಗಳು ದಾನಾಂತರಾ

ಯ, ಲಾಭಾಂತರಾಯ, ಭೋಗಾಂತರಾಯ, ಉಪಭೋಗಾಂತರಾಯ ಮ
ವೀರ್ಯಾಂತರಾಯಗಳ ಸಂಪೂರ್ಣ ಕ್ಷಯದಿಂದ ಕ್ರಮವಾಗಿ ಕ್ಷಾಯಿ
ಕ್ಷಾಯಿಕಲಾಭ, ಕ್ಷಾಯಿಕಭೋಗ, ಕ್ಷಾಯಿಕ ಉಪಭೋಗ ಮತ್ತು ಕ್ಷಾ
ವೀರ್ಯಗಳೆಂದಾಗುವವು, ಕ್ಷಾಯಿಕ ಸಮ್ಯಕ್ತ್ವ-ಮೇಲೆಬರೆದ ಅನಂತಾ
ಮೊದಲಾದ ಏಳು ಪ್ರಕೃತಿಗಳ ಸಂಪೂರ್ಣ ನಾಶದಿಂದಾಗುವದು.

ಕ್ಷಾಯಿಕಚಾರಿತ್ರ:- ಮೇಲೆ ಬರೆದ ಚಾರಿತ್ರ ಮೋಹನೀಯ ಕ
೨೧ ಪ್ರಕೃತಿಗಳ ಕ್ಷಯದಿಂದಾಗುವದು.

### ಕ್ಷಾಯೋಪಶಮಿಕ ಭಾವದ ಭೇದಗಳು.

**ಜ್ಞಾನಾಜ್ಞಾನದರ್ಶನಲಬ್ಧಯಶ್ಚತುಸ್ತ್ರಿತ್ರಿಪಂಚ
ಭೇದಾಃ ಸಮ್ಯಕ್ತ್ವಚಾರಿತ್ರಸಂಯಮಾಸಂಯಮಾ**

ಅರ್ಥ:- ಮತಿ, ಶ್ರುತ, ಅವಧಿ ಮತ್ತು ಮನಃಪರ್ಯಯ
ನಾಲ್ಕು ಜ್ಞಾನಗಳೂ, ಕುಮತಿ, ಕುಶ್ರುತ, ಮತ್ತು ಕುಅವಧಿಗಳೆಂಬ ಮೂ
ಅಜ್ಞಾನಗಳೂ, ಚಕ್ಷುದರ್ಶನ, ಅಚಕ್ಷುದರ್ಶನ, ಅವಧಿದರ್ಶನಗಳೆಂಬ ಮೂ
ದರ್ಶನಗಳೂ, ಕ್ಷಾಯೋಪಶಮಿಕ ದಾನ, ಲಾಭ-ಭೋಗ-ಉಪಯೋಗ ಮ
ವೀರ್ಯಗಳೆಂಬ ಐದು ಲಬ್ಧಿಗಳೂ ಹಾಗೇಯೇ ಕ್ಷಾಯೋಪಶಮಿಕ ಸಮ್ಯ
ಕ್ಷಾಯೋಪಶಮಿಕ ಚಾರಿತ್ರ ಮತ್ತು ಸಂಯಮಾಸಂಯಮಗಳೂ ಇವ
ಕ್ಷಾಯೋಪಶಮಿಕ ಭಾವದ ಭೇದಗಳು.

ಕ್ಷಾಯೋಪಶಮಿಕ ಸಮ್ಯಕ್ತ್ವ:- ಅನಂತಾನುಬಂಧೀ ಕ್ರೋಧ, ಮಾ
ಮಾಯಾ, ಲೋಭ, ಹಾಗೇಯೇ ಮಿಥ್ಯಾತ್ವ ಸಮ್ಯಕ್‌ಮಿಥ್ಯಾತ್ವಗಳೆಂಬ
ಸರ್ವಘಾತಿ ಪ್ರಕೃತಿಗಳ ಉದಯಾಭಾವೀ ಕ್ಷಯದಿಂದಲೂ ಮತ್ತು ಅ
ಆಗಾಮಿ ಕಾಲದಲ್ಲಿ ಉದಯದಲ್ಲಿ ಬರುವ ನಿಷೇಕಗಳ ಸದವಸ್ಥಾರೂಪ
ಶಮ, ದೇಶಘಾತಿ ಸಮ್ಯಕ್ತ್ವ ಪ್ರಕೃತಿಯು ಉದಯವಾಗಲು ಯಾವ ಸಮ್ಯ
ವಾಗುವುದೋ ಅದಕ್ಕೆ ಕ್ಷಾಯೋಪಶಮಿಕ ಸಮ್ಯಕ್ತ್ವವೆಂದು ಹೆಸರು.
ವೇದಕ ಸಮ್ಯಕ್ತ್ವವೆಂದೂ ಹೇಳುತ್ತಾರೆ.

ಕ್ಷಾಯೋಪಶಮಿಕ ಚಾರಿತ್ರ:- ಅನಂತಾನುಬಂಧೀ ಮೊದಲಾದ ೧೨ ಕಷಾಯಗಳ ಉದಯಾಭಾವೀ ಕ್ಷಯ, ಹಾಗೆನೆಯೇ ಇವುಗಳ ನಿಷೇಕಗಳ ಸದವಸ್ಥಾ ರೂಪ ಉಪಶಮ ಮತ್ತು ಸಂಜ್ವಲನಕಷಾಯ ಮತ್ತು ನೋಕಷಾಯಗಳ ಯಥಾಸಂಭವ ಉದಯವಾಗಲು ಯಾವ ಚಾರಿತ್ರವಾಗುವುದೋ ಅದು ಕ್ಷಾಯೋಪಶಮಿಕ ಚಾರಿತ್ರವು, ಇದಕ್ಕೆ ಸರಾಗಸಂಯಮವೆಂದೂ ಹೇಳುತ್ತಾರೆ

ಸಂಯಮಾಸಂಯಮ:- ಅನಂತಾನುಬಂಧೀ ಮೊದಲಾದ ೮ ಪ್ರಕೃತಿಗಳ ಉದಯಾಭಾವೀ ಕ್ಷಯ. ಇವುಗಳ ನಿಷೇಕಗಳ ಸದವಸ್ಥಾರೂಪ ಉಪಶಮ ಹಾಗೇಯೇ ಪ್ರತ್ಯಾಖ್ಯಾನಾವರಣಾದಿ ೧೭ ಪ್ರಕೃತಿಗಳ ಯಥಾಸಂಭವ ಉದಯವಾಗುತ್ತಿರಲು ಜೀವನ ಯಾವ ವಿರತಾವಿರತ ದಶೆಯಾಗುವುದೋ ಅದು ಸಂಯಮಾಸಂಯಮವೆಂದು ಹೇಳಲ್ಪಡುವುದು.

## ಔದಯಿಕ ಭಾವದ ಭೇದಗಳು

**ಗತಿಕಷಾಯಲಿಂಗಮಿಥ್ಯಾದರ್ಶನಾಜ್ಞಾನಾಸಂಯತಾಸಿದ್ಧಲೇಶ್ಯಾಶ್ಚತುಶ್ಚತುಸ್ತ್ರ್ಯೇಕೈಕೈಕೈಕಷಡ್ಭೇದಾಃ॥**

ಅರ್ಥ:- ನರಕ, ತಿರ್ಯಂಚ ಮನುಷ್ಯ ಮತ್ತು ದೇವಗತಿಗಳೆಂಬ ನಾಲ್ಕು ಗತಿಗಳೂ, ಕ್ರೋಧ, ಮಾನ, ಮಾಯಾ, ಮತ್ತು ಲೋಭಗಳೆಂಬ ನಾಲ್ಕು ಕಷಾಯಗಳೂ, ಸ್ತ್ರೀವೇದ ಪುರುಷವೇದ ಮತ್ತು ನಪುಂಸಕವೇದಗಳೆಂಬ ಮೂರು ವೇದಗಳೂ (ಲಿಂಗಗಳೂ) ಮಿಥ್ಯಾದರ್ಶನ, (೧)ಅಜ್ಞಾನ, ಅಸಂಯಮ, ಅಸಿದ್ಧತ್ವ ಮತ್ತು ಕೃಷ್ಣ, ನೀಲ, ಕಾಪೋತ, ಪೀತ, ಪದ್ಮ ಮತ್ತು ಶುಕ್ಲಗಳೆಂಬ ಆರು (೨)ಲೇಶ್ಯೆಗಳೂ ಈ ಪ್ರಕಾರವಾಗಿ ಔದಯಿಕ ಭಾವದ ೨೧ ಭೇದಗಳು. ಈ ಅವಸ್ಥೆಗಳು ಕೇವಲ ಕರ್ಮದ ಉದಯದಿಂದಲೇ ಆಗುತ್ತವೆ.

---

(೧) ಔದಯಿಕ ಭಾವದಲ್ಲಿ ಯಾವ ಅಜ್ಞಾನ ಭಾವವಿದೆಯೋ ಅದು ಅಭಾವರೂಪವಾಗಿರುವುದು ಮತ್ತು ಕ್ಷಾಯೋಪಶಮಿಕ ಅಜ್ಞಾನಭಾವವು ಮಿಥ್ಯಾದರ್ಶನದ ಮೂಲಕ ದೂಷಿತವಾಗುತ್ತದೆ.

(೨) ಕಷಾಯಗಳ ಉದಯದಿಂದ ಕೂಡಿದ ಯೋಗಗಳ ಪ್ರವೃತ್ತಿಗೆ ಲೇಶ್ಯೆಯೆಂದು ಹೆಸರು.

ಪಾರಿಣಾಮಿಕ ಭಾವದ ಭೇದ

## ಜೀವಭವ್ಯಾಭವ್ಯತ್ವಾನಿ ಚ ।೭।

ಅರ್ಥ;- ಜೀವತ್ವ, ಭವ್ಯತ್ವ ಮತ್ತು ಅಭವ್ಯತ್ವಗಳೆಂಬ ಮೂ[illegible] ಣಾಮಿಕ ಭಾವದ ಭೇದಗಳು,

ವಿಶೇಷ;- ಸೂತ್ರದಲ್ಲಿರುವ ಚ ಶಬ್ದದಿಂದ ಅಸ್ತಿತ್ವ ವಸ್ತುತ್ವ[illegible] ಯತ್ವ ಮೊದಲಾದ ಸಾಮಾನ್ಯ ಗುಣಗಳ ಗ್ರಹಣೆಯೂ ಆಗುತ್ತದೆ. [illegible] ಮಗಳು ಜೀವನ ಭಾವಗಳೆಂದು ಏಕೆ ಹೇಳಲ್ಪಟ್ಟಿವೆ? ಜೀವನ ಅಮೂ[illegible] ಗಿದ್ದಾನೆ. ಅವನಿಗೆ ಈ ಭಾವಗಳಾಗಲು ಸಾಧ್ಯವಿಲ್ಲ ಆದಕ್ಕೆ ಆಚಾರ್ಯರು[illegible] ವನ್ನು ಹೇಳುತ್ತಾರೆ, ಆತ್ಮನು ಸರ್ವಥಾ ಏಕಾಂತದಿಂದ ಅಮೂ[illegible] ಅವನು ಕಥಂಚಿತ್ ಕರ್ಮ ಬಾಧಾಪೇಕ್ಷೆಯಿಂದ ಮೂರ್ತಿಕನೂ [illegible] ಶುದ್ಧ ಸ್ವರೂಪದಿಂದ ಅವನು ಮೂರ್ತಿಕನೂ ಸಂಸಾರದ ಅಪೇ[illegible] ಅವನು ಮೂರ್ತಿಕನೂ, ಆದುದರಿಂದ ಮೂರ್ತಿಕನೊಡನೆ ಮೂರ್ತಿಕ[illegible] ಬಂಧವಾಗುತ್ತದೆ,

ಈ ಪರಿಣಾಮಗಳು ಜೀವನ ಭಾವಗಳೆಂದು ಏಕೆ ಹೇಳ[illegible] ಜೀವನು ಅಮೂರ್ತಿಕನಾಗಿದ್ದಾನೆ. ಅವನಿಗೆ ಈ ಭಾವಗಳಾಗಲು ಸ[illegible] ಆದಕ್ಕೆ ಆಚಾರ್ಯರು ಉತ್ತರವನ್ನು ಹೇಳುತ್ತಾರೆ, ಆತ್ಮನು ಸರ್ವಥಾ [illegible] ತದಿಂದ ಅಮೂರ್ತಿಕನಲ್ಲ ಅವನು ಕಥಂಚಿತ್ ಕರ್ಮ ಬಾಧಾಪೇಕ್ಷೆಯಿಂ[illegible] ರ್ತಿಕನೂ ಇದ್ದಾನೆ. ಶುದ್ಧ ಸ್ವರೂಪದಿಂದ ಅವನು ಅಮೂರ್ತಿಕನು [illegible] ರದ ಅಪೇಕ್ಷೆಯಿಂದ ಅವನು ಮೂರ್ತಿಕನು, ಆದುದರಿಂದ ಮೂರ್ತಿ[illegible] ಮೂರ್ತಿಗಳ ಬಂಧವಾಗುತ್ತದೆ,

ಈ ಪ್ರಕಾರವಾಗಿ ೨ + ೯ + ೧೮ + ೨೧ + ೩ = ೫೩ ಭೇದಗಳ[illegible] ಪರಿಣಾಮದ ಉತ್ತರ ಭೇದಗಳೆಂದು ತಿಳಿಯಬೇಕು. ಈ ಭೇದಗಳನ್ನು ಸ್ಪಷ್ಟವಾಗಿ ತಿಳಿಯುವುದಾದರೆ ಈ ಮುಂದಿನ ಭಾವ ಚಿತ್ರದಿಂದ ತಿಳಿಯ[illegible]

# ಭಾವ

| ೨ | ೯ | ೧೮ | ೨೧ | ೨ |
|---|---|---|---|---|
| ಔಪಶಮಿಕ | ಕ್ಷಾಯಿಕ | ಕ್ಷಾಯೋಪಶಮಿಕ | ಔದಯಿಕ | ಪಾರಿಣಾಮಿಕ |

**ಔಪಶಮಿಕ**
೧ ಸಮ್ಯಕ್ತ್ವ ೨ ಚಾರಿತ್ರ

**ಕ್ಷಾಯಿಕ**
೧ ಕೇವಲ ಜ್ಞಾನ
೨ ಕೇವಲದರ್ಶನ
೩ ಕ್ಷಾಯಿಕದಾನ
೪ ,, ಲಾಭ
೫ ,, ಭೋಗ
೬ ,, ಉಪಭೋಗ
೭ ,, ವೀರ್ಯ
೮ ,, ಸಮ್ಯಕ್ತ್ವ
೯ ,, ಚಾರಿತ್ರ

**ಕ್ಷಾಯೋಪಶಮಿಕ**

| ಜ್ಞಾನ | ಅಜ್ಞಾನ | ದರ್ಶನ | ಲಬ್ಧಿ | ಕ್ಷಾ.ಸಮ್ಯಕ್ತ್ವ |
|---|---|---|---|---|
| ೧ಮತಿ | ೧ಕುಮತಿ | ೧ಚಕ್ಷು | ೧ದಾನ, | ಚಾರಿತ್ರ |
| ೨ಶ್ರುತ | ೨ಕುಶ್ರುತ | ೨ಅಚಕ್ಷು | ೨ಲಾಭ | ಸಂಯಮಾ |
| ೩ಅವಧಿ | ೩ಕುಅವಧಿ | ೩ಅವಧಿ | ೩ ಭೋಗ | ಸಂಯಮ |
| ೪ ಮನಃ ಪರ್ಯಾಯ | | | ೪ ಉಪಭೋಗ | |
| | | | ೫ ವೀರ್ಯ | |

**ಪಾರಿಣಾಮಿಕ**
ಜೀವತ್ವ
ಭವ್ಯತ್ವ
ಅಭವ್ಯತ್ವ

**ಔದಯಿಕ**

ಗತಿ ೪ : ನರಕ, ತಿರ್ಯಂಚ, ಮನುಷ್ಯ, ದೇವ

ಕಷಾಯ ೪ : ಕ್ರೋಧ, ಮಾನ, ಮಾಯಾ, ಲೋಭ

ಲಿಂಗ ೩ : ಸ್ತ್ರೀ, ಪುರುಷ, ನಪುಂಸಕ

ಮಿಥ್ಯಾದರ್ಶನ

ಅಜ್ಞಾನ

ಅಸಂಯತ

ಅಸಿದ್ಧತ್ವ

[ಲೇಶ್ಯಾ ಕೃಷ್ಣನೀಲಕಾಪೋತಪೀತಪದ್ಮಶುಕ್ಲ]

## ಜೀವನ ಲಕ್ಷಣ

# ಉಪಯೋಗೋ ಲಕ್ಷಣಂ ||೮||

ಅರ್ಥ- ಜೀವನ ಲಕ್ಷಣವು ಉಪಯೋಗಮಯವಾಗಿದೆ. ಉಪಯೋಗ-ಆತ್ಮನ ಚೈತನ್ಯಗುಣದೊಡನೆ ಸಂಬಂಧಿಸಿರುವಪರಿಣಾಮ... ಯೋಗವು. ಇದು ಆತ್ಮನ ತದ್ಭೂತ ಲಕ್ಷಣವು.

ಆತ್ಮನ ಚೈತನ್ಯಗುಣಕ್ಕೆ ಉಪಯೋಗವೆಂದು ಹೆಸರು. ಈ... ಗುಣವು ಆತ್ಮನಿಂದ ಬೇರೆಯಾಗಲಾರದು. ಜೀವದ್ರವ್ಯದ ಇದು ... ರಣ ಗುಣವಾಗಿದೆ.

## ಉಪಯೋಗಗಳ ಭೇದ

# ಸ ದ್ವಿವಿಧೋಽಷ್ಟ ಚತುರ್ಭೇದಃ ||೯||

ಅರ್ಥ:- ❂ ಉಪಯೋಗವು ಜ್ಞಾನೋಪಯೋಗ, ಮತ್ತು, × ದ... ಪಯೋಗವೆಂದು ಎರಡು ಪ್ರಕಾರವಾಗಿದೆ. ಪುನಃ ಕ್ರಮದಿಂದ ಎಂಟು... ನಾಲ್ಕು ಭೇದಗಳಿಂದ ಕೂಡಿದೆ. ಅಂದರೆ ಜ್ಞಾನೋಪಯೋಗವು ಮತಿ... ಅವಧಿ, ಮನಃಪರ್ಯಾಯ ಕೇವಲಜ್ಞಾನ ಮತ್ತು ಕುಮತಿ ಕುಶ್ರುತ... ಗಳೆಂದು ೮ ಭೇದಗಳಿಂದ ಕೂಡಿದೆ. ಹಾಗೇನೆಯೇ ದರ್ಶನೋಪ... ಚಕ್ಷುದರ್ಶನ ಅಚಕ್ಷುದರ್ಶನ ಅವಧಿದರ್ಶನ ಮತ್ತು ಕೇವಲದರ್ಶ... ನಾಲ್ಕು ಭೇದದಿಂದ ಕೂಡಿದೆ. ಈ ರೀತಿಯಾಗಿ ಎರಡು ಉಪಯೋ... ಭೇದಗಳು ೧೨ ಪ್ರಕಾರಗಳಾಗಿವೆ. ಈ ಭೇದಗಳ ಪ್ರಕಾರಗಳನ್ನು ... ಚಿತ್ರದಲ್ಲಿ ನೋಡಿರಿ:-

---

❂ ಯಾವುದು ಸವಿಕಲ್ಪಕವಾಗಿ ಪದಾರ್ಥಗಳನ್ನು ತಿಳಿಯುವುದೋ... ಜ್ಞಾನೋಪಯೋಗವು. × ಯಾವುದು ಪದಾರ್ಥಗಳ ಸತ್ತೆ... ಮಾತ್ರ ಗ್ರಹಣ ಮಾಡುತ್ತದೆಯೋ ಅದು ದರ್ಶನೋಪಯೋಗವು.

# ಉಪಯೋಗಗಳ ಚಿತ್ರ

## ಉಪಯೊಗೀ

- ದರ್ಶನೋಪಯೋಗ
  - ೧ ಚಕ್ಷುದರ್ಶನ
  - ೨ ಅಚಕ್ಷುದರ್ಶನ
  - ೩ ಅವಧಿದರ್ಶನ
  - ೪ ಕೇವಲದರ್ಶನ.
- ಜ್ಞಾನೋಪಯೋಗ
  - ಮತಿಜ್ಞಾನ
    - ೫ ಕುಮತಿ
    - ೬ ಸುಮತಿ
  - ಶ್ರುತಜ್ಞಾನ
    - ೭ ಕುಶ್ರುತ
    - ೮ ಸುಶ್ರುತ
  - ಅವಧಿಜ್ಞಾನ
    - ೯ ಕುಅವಧಿ
    - ೧೦ ಸುಅವಧಿ
  - ೧೧ ಮನಃಪರ್ಯಯಜ್ಞಾನ
  - ೧೨ ಕೇವಲಜ್ಞಾನ

ದರ್ಶನೋಪಯೋಗ ೪
ಜ್ಞಾನೋಪಯೋಗ ೮



## ಜೀವನ ಭೇದ

### ಸಂಸಾರಿಣೋ ಮುಕ್ತಾಶ್ಚ ||೧೦||

ಅರ್ಥ:- ಜೀವಗಳು ಸಂಸಾರಿ ಜೀವ ಮತ್ತು ಮುಕ್ತ ಜೀವಗಳೆಂದು ಎರಡು ಪ್ರಕಾರಗಳಾಗಿವೆ. ಕರ್ಮಸಹಿತ ಜೀವವು ಸಂಸಾರಿಯೆಂದೂ, ಕರ್ಮ... ಜೀವವು ಮುಕ್ತಜೀವವೆಂದೂ ಹೇಳಲಾಗುತ್ತದೆ.

ವಿಶೇಷಾರ್ಥ:- ಸಂಸಾರದಲ್ಲಿ ಪರಿವರ್ತನೆಗಳು ಐದು ಪ್ರಕಾರ... ದ್ರವ್ಯ, ಕ್ಷೇತ್ರ, ಕಾಲ, ಭವ, ಭಾವವೆಂದು ಐದು ಪ್ರಕಾರ. ದ್ರವ್ಯ ಪರಿ... ಸಮಸ್ತಕರ್ಮನೋಕರ್ಮಪುದ್ಗಲ ಪರಮಾಣುಗಳನ್ನು ಕ್ರಮದಂತೆ ಭೋ... ಬಿಡುವುದಕ್ಕೆ ದ್ರವ್ಯ ಪರಿವರ್ತನೆಯೆಂದು ಹೆಸರು. ಲೋಕಾಕಾರದ ಪ್ರತ್ಯೇ... ದೇಶಗಳಲ್ಲಿ ಕ್ರಮದಂತೆ ಜನ್ಮವೆತ್ತಿ ಮರಣವನ್ನು ಪಡೆಯುವುದಕ್ಕೆ ಕ್ಷೇತ್ರ... ವರ್ತನೆ ಎಂದು ಹೆಸರು. ಉತ್ಸರ್ಪಿಣೀ ಮತ್ತು ಅವಸರ್ಪಿಣಿಗಳ ಕಾಲ... ಒಂದು ಸಮಯದಲ್ಲಿ ಕ್ರಮದಂತೆ ಜನ್ಮವೆತ್ತಿ ಮರಣವನ್ನು ಹೊಂದಿ ... ಮಾಡುವುದಕ್ಕೆ ಕಾಲಪರಿವರ್ತನೆಯೆನ್ನುತ್ತಾರೆ. ನರಕಾದಿ ಗತಿಗಳಲ್ಲಿ ಜಘನ್ಯ... ಹಿಡಿದು ಉತ್ಕೃಷ್ಟ ಆಯುಷ್ಯವನ್ನು ಅನುಭವಿಸಿ ಬಿಡುವುದಕ್ಕೆ ಭವಪರಿ... ನೆಯೆನ್ನುತ್ತಾರೆ. ಯೋಗಸ್ಥಾನ, ಕಷಾಯ ಸ್ಥಾನಗಳನ್ನು ಕ್ರಮವಾಗಿ ... ವರಣಾದಿ ಕರ್ಮಗಳ ಜಘನ್ಯ, ಮಧ್ಯಮ, ಉತ್ಕೃಷ್ಟ ಭೇದಗಳಿಂದ ... ಸುವ ಕ್ರಮಕ್ಕೆ ಭಾವಪರಿವರ್ತನೆಯೆನ್ನುವರು.

## ಸಂಸಾರಿಜೀವರ ಭೇದ

### ಸಮನಸ್ಕಾಽಮನಸ್ಕಾಃ ||೧೧||

ಅರ್ಥ:- ಸಂಸಾರಿಜೀವವು ಸಮನಸ್ಕ (ಸಂಜ್ಞೀ ಅಮನಸ್ಕ-ಅಸಂ... ಎಂದು ಎರಡು ಭೇದಗಳಾಗಿ ವಿಭಾಗಿಸಲಾಗಿದೆ, ಸಮನಸ್ಕವೆಂದರೆ ಮ... ನಿಂದ ಕೂಡಿರುವುದು. ಅಮನಸ್ಕವೆಂದರೆ ಮನರಹಿತ ಜೀವವು. ಕರೆದು... ವುದು ಸಂಕೇತಗಳನ್ನು ತಿಳಿಯುವುದು ಸಮನಸ್ಕಜೀವಗಳ ಲಕ್ಷಣ. ಅಸಂ... ಜೀವಗಳು ಚಿಕ್ಕ ಉಪದೇಶ ಮೊದಲಾದವುಗಳನ್ನು ಗ್ರಹಣಮಾಡುವುದಿ...

## ಸಂಸಾರಿಜೀವರ ಭೇದ

### ಸಂಸಾರಿಣಸ್ತ್ರಸಸ್ಥಾವರಾಃ ||೧೨||

ಅರ್ಥ:- ಸಂಸಾರಿಜೀವವು ತ್ರಸಜೀವ ಮತ್ತು ಸ್ಥಾವರ ಜೀವಗಳೆಂದು ಎರಡು ಪ್ರಕಾರಗಳಿಂದ ಕೂಡಿದೆ, ಯಾರಿಗೆ ತ್ರಸನಾಮ ಕರ್ಮದ ಉದಯ ವಿದೆಯೋ ಅವುಗಳು ತ್ರಸವೆಂದೂ, ಸ್ಥಾವರನಾಮ ಕರ್ಮದಿಂದ ಜೀವಗಳು ಸ್ಥಾವರವೆಂದೂ ಹೇಳಲ್ಪಡುತ್ತವೆ.

## ಸ್ಥಾವರ ಜೀವಗಳ ಭೇದ

### ಪೃಥಿವ್ಯಪ್ತೇಜೋವಾಯುವನಸ್ಪತಯಃ ಸ್ಥಾವರಾಃ ||೧೩||

ಅರ್ಥ:- ಪೃಥ್ವೀಕಾಯಿಕ, ಜಲಕಾಯಿಕ, ಅಗ್ನಿಕಾಯಿಕ, ವಾಯು ಕಾಯಿಕ ಮತ್ತು ವನಸ್ಪತಿ ಕಾಯಿಕಗಳೆಂದು ಸ್ಥಾವರ ಜೀವವು ೫ ಪ್ರಕಾರವಾಗಿದೆ, ಇವು ಗಳಿಗೆ ಕೇವಲ ಸ್ಪರ್ಶನೇಂದ್ರಿಯವಿರುತ್ತದೆ. ಇವುಗಳಲ್ಲಿ ಪುನಃ ೪ ಭೇದಗಳಿರು ತ್ತವೆ. ಪೃಥ್ವೀ, ಪೃಥ್ವೀಯು, ಪೃಥ್ವೀ ಕಾಯಿಕ, ಮತ್ತು ಪೃಥ್ವಿಕಾಯ ಜೀವ, ಚೇತನಾರಹಿತವಾದ ಭೂಮಿಗೆ ಪೃಥ್ವೀಎಂದೂ, ಜೀವ ಬಿಟ್ಟುಹೋದ ಪೃಥ್ವಿಗೆ ಪೃಥ್ವೀ ಕಾಯವೆಂದೂ, ಜೀವ ಸಹಿತ ಪೃಥ್ವಿಗೆ ಪೃಥ್ವೀ ಕಾಯಿಕವೆಂದೂ, ಪೃಥ್ವಿಯ ಶರೀರವನ್ನು ಬಿಟ್ಟು ಮುಂದಿನ ಶರೀರವನ್ನು ಧಾರಣೆ ಮಾಡಲು ಹೋಗುವ ಜೀವನಿಗೆ ಪೃಥ್ವೀ ಜೀವವೆಂದೂ ಹೇಳಲಾಗಿದೆ. ಹೀಗೆಯೆ ಅಪ್ ಮೊದಲಾದುವುಗಳಲ್ಲಿ ಭೇದಗಳನ್ನು ತಿಳಿಯಬೇಕು.

## ತ್ರಸ ಜೀವಗಳ ಭೇದ

### ದ್ವೀಂದ್ರಿಯಾದಯಸ್ತ್ರಸಾಃ ||೧೪||

ಅರ್ಥ:- ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಮತ್ತು ಪಂಚೇಂ ದ್ರಿಯ ಜೀವಗಳು ತ್ರಸ ಜೀವಗಳೆಂದು ಹೇಳಲಾಗುತ್ತವೆ.

ತ್ರಸ- ತ್ರಸ ನಾಮ ಕರ್ಮದ ಉದಯದಿಂದುಂಟಾದ ಜೀವನ ಅವಸ್ಥೆಗೆ ತ್ರಸವೆಂದು ಹೆಸರು. ಇದರಲ್ಲಿ ದ್ವೀಂದ್ರಿಯಕ್ಕೆ ೬ಪ್ರಾಣ, ತ್ರೀಂದ್ರಿಯಕ್ಕೆ ೭ ಪ್ರಾಣ, ಚತುರಿಂದ್ರಿಯಕ್ಕೆ ೮ ಪ್ರಾಣ ತ್ರಸ ಪಂಚೇಂದ್ರಿಯ ಅಸಂಜ್ಞಿಗೆ ೯ ಪ್ರಾಣ ಹಾಗೆಯೇಪಂಚೇಂದ್ರಿಯ ಸಂಜ್ಞಿಗೆ ೧೦ ಪ್ರಾಣಗಳೆಂದು ತಿಳಿಯಬೇಕು.

### ಇಂದ್ರಿಯಗಳೆಷ್ಟು?

## ಪಂಚೇಂದ್ರಿಯಾಣಿ ||೧೫||

ಅರ್ಥ:- ಇಂದ್ರಿಯಗಳು ಐದು ಪ್ರಕಾರಗಳಾಗಿವೆ,

ಇಂದ್ರಿಯ– ಯಾವ ಚಿಹ್ನೆಗಳ ಮೂಲಕ ಜೀವನನ್ನು ತಿಳಿಯಬ ಹುದೋ ಅದಕ್ಕೆ ಇಂದ್ರಿಯವೆಂದು ಹೆಸರು.

### ಇಂದ್ರಿಯಗಳ ಮೂಲ ಭೇದ

## ದ್ವಿವಿಧಾನಿ ||೧೬||

ಅರ್ಥ:- ಎಲ್ಲಾ ಬಗೆಯ ಇಂದ್ರಿಯಗಳು ದ್ರವ್ಯ ಇಂದ್ರಿಯ ಮ ಭಾವ ಇಂದ್ರಿಯಗಳ ಭೇದದಿಂದ ಎರಡೆರಡು ಪ್ರಕಾರಗಳಾಗಿವೆ.

### ದ್ರವ್ಯೇಂದ್ರಿಯದ ಸ್ವರೂಪ

## ನಿರ್ವೃತ್ಯುಪಕರಣೇ ದ್ರವ್ಯೇಂದ್ರಿಯಂ ||೧೭||

ಅರ್ಥ:- ನಿರ್ವೃತ್ತಿ ಮತ್ತು ಉಪಕರಣಗಳಿಗೆ ದ್ರವ್ಯೇಂದ್ರಿಯ ಹೇಳುತ್ತಾರೆ. ಅವುಗಳ ಲಕ್ಷಣವನ್ನು ತಿಳಿಯಬೇಕು.

ನಿರ್ವೃತ್ತಿ- ಪುದ್ಗಲ-ವಿಪಾಕಿ ನಾಮಕರ್ಮದ ಉದಯದಿಂದ ನಿ ರಚನೆ ಮಾಡಲ್ಪಟ್ಟ ನಿಯಮಿತ ಆಕಾರವುಳ್ಳ ಪುದ್ಗಲರಚನಾ ವಿಶೇಷಕ್ಕೆ ಎಂದೆನ್ನುತ್ತಾರೆ. ಇದರಲ್ಲಿ ಎರಡು ಭೇದಗಳಿವೆ, ೧ನೇ ಆಭ್ಯಂತರ ನಿ ಎರಡನೇ ಬಾಹ್ಯ ನಿವೃತ್ತಿಯು. ಉತ್ಸೇಧಾಂಗುಲದ ಅಸಂಖ್ಯಾತ ಭಾ ಮಾಣವುಳ್ಳ ಪರಿಶುದ್ಧಾತ್ಮನ ಪ್ರದೇಶಗಳ ಕಣ್ಣು ಮೊದಲಾದ ಇಂದ್ರಿ ಆಕಾರದಲ್ಲಿ ಯಾವ ರಚನೆಯಾಗುವುದೋ ಅದಕ್ಕೆ ಅಭ್ಯಂತರ ನಿರ್ವೃತ್ತಿ ಹೆಸರು. ಹಾಗೇನೆಯೇ ಇಂದ್ರಿಯವೆಂದು ಹೇಳುವ ಆತ್ಮನ ಆಯಾಯ ಶಗಳಲ್ಲಿ ನಾಮಕರ್ಮದ ಉದಯದಿಂದ ಕಣ್ಣು ಮೊದಲಾದ ಇಂದ್ರಿ ಆಕಾರದಲ್ಲಿ ಪರಿಣತವಾದ ಯಾವ ಪುದ್ಗಲ ಪ್ರಚಯ(ಪಿಂಡ)ವಿದೆಯೋ ಬಾಹ್ಯನಿರ್ವೃತ್ತಿ ಎಂದು ಹೆಸರು.

ಉಪಕರಣ–ಯಾವುದರಿಂದ ನಿವೃತ್ತಿಗೆ ಉಪಕಾರವಾಗುವುದೋ ಅದು ಉಪಕರಣವು ಇದರಲ್ಲಿ ಎರಡು ಭೇದಗಳಿವೆ. ೧ ನೇ ಅಭ್ಯಂತರ ಉಪಕರಣ ಮತ್ತು ೨ ನೇ ಬಾಹ್ಯ ಉಪಕರಣವೆಂದು. ಹೇಗೆಂದರೆ ಚಕ್ಷು ಇಂದ್ರಿಯದಲ್ಲಿ ಇರುವ ಕೃಷ್ಣಶುಕ್ಲ ಮಂಡಲಗಳು ಅಭ್ಯಂತರಉಪಕರಣವು. ಮತ್ತು, ಹೊರಗಿನ ಕಣ್ಣಿನ ರೆಪ್ಪೆ ರೋಮ ಮೊದಲಾದವುಗಳು ಬಾಹ್ಯ ಉಪಕರಣವು.

### ಭಾವೇಂದ್ರಿಯದ ಸ್ವರೂಪ

## ಲಬ್ಧ್ಯುಪಯೋಗೌ ಭಾವೇಂದ್ರಿಯಂ ||೧೮||

ಅರ್ಥ :– ಲಬ್ಧಿ ಮತ್ತು ಉಪಯೋಗಗಳಿಗೆ ಭಾವೇಂದ್ರಿಯವೆಂದು ಹೇಳುತ್ತಾರೆ ದ್ರವ್ಯೇಂದ್ರಿಯ ಮತ್ತು ಭಾವೇಂದ್ರಿಯ ಇವು ಎರಡು ಇಂದ್ರಿಯಗಳ ಭೇದವೆಂದು ಹೇಳಲಾಗಿದೆ;

ಲಬ್ಧಿ–ಜ್ಞಾನಾವರಣೀಯ ಕರ್ಮದ ಕ್ಷಯೋಪಶಮವಿಶೇಷಕ್ಕೆ ಲಬ್ಧಿಯೆಂದು ಹೇಳುತ್ತಾರೆ.

ಉಪಯೋಗ–ಇದರ ಮೂಲಕವಾಗಿ ಆತ್ಮನು ದ್ರವ್ಯೇಂದ್ರಿಯದಿಂದಾಗಿರುವ ಪದಾರ್ಥದ ಕಡೆಗೆ ಪ್ರವರ್ತಿತನಾಗುತ್ತಾನೆ, ಅದರಿಂದಾಗುವ ಆತ್ಮನ ಪರಿಣಾಮವು ಉಪಯೋಗವೆಂದೆನಿಸುತ್ತದೆ.

### ಪಂಚೇಂದ್ರಿಯಗಳ ಹೆಸರು

## ಸ್ಪರ್ಶನರಸನ ಘ್ರಾಣಚಕ್ಷುಃಶ್ರೋತ್ರಾಣಿ ||೧೯||

ಅರ್ಥ–ಸ್ಪರ್ಶನ (ಚರ್ಮ) ರಸನ [ನಾಲಿಗೆ] ಘ್ರಾಣ [ಮೂಗು] ಚಕ್ಷು [ಕಣ್ಣು] ಮತ್ತು ಶ್ರೋತ್ರ [ಕಿವಿ[ ಇವು ಐದು ಇಂದ್ರಿಯಗಳು. ವೀರ್ಯಾಂತರಾಯ ಮತ್ತು ಮತಿ ಜ್ಞಾನಾವರಣೀಯ ಕರ್ಮದ ಕ್ಷಯೋಪಶಮ ಮತ್ತು ಅಂಗೋಪಾಂಗದ ನಾಮ ಕರ್ಮದಿಂದ ಈ ಇಂದ್ರಿಯಗಳಾಗುತ್ತವೆ.

### ಇಂದ್ರಿಯಗಳ ವಿಷಯ

## ಸ್ಪರ್ಶರಸಗಂಧವರ್ಣಶಬ್ದಾಸ್ತದರ್ಥಾಃ ||೨೦||

ಅರ್ಥ:- ಸ್ಪರ್ಶ, ರಸ, ಗಂಧ, ರೂಪ, ಮತ್ತು ಶಬ್ದ ಇವು ಐದು ಕ್ರಮದಿಂದ ಮೇಲಿನ ಐದು ಇಂದ್ರಿಯಗಳ ವಿಷಯವಾಗಿವೆ. ಅಂದರೆ ಇಂದ್ರಿಯ

ಗಳಿಂದ ಇವುಗಳು ತಿಳಿಯಲ್ಪಡುತ್ತವೆ. ಅಂದರೆ ಸ್ಪರ್ಶನೇಂದ್ರಿಯವು ಸ್ಪ
ನ್ನು ರಸನೇಂದ್ರಿಯವು ರಸವನ್ನು ಘ್ರಾಣೇಂದ್ರಿಯವು ಸುಗಂಧ ದು
ವನ್ನು ನೇತ್ರೇಂದ್ರಿಯವು ರೂಪವನ್ನು ಮತ್ತು ಶ್ರೋತ್ರೇಂದ್ರಿಯವು ಶ
ತಿಳಿಯುತ್ತದೆ. ಇಂದ್ರಿಯಗಳು ತಮ್ಮ ತಮ್ಮ ವಿಷಯವನ್ನು ಮಾತ್ರ
ಲು ಸಾಧ್ಯ.

ಮನಸ್ಸಿನ ವಿಷಯ

## ಶ್ರುತಮನಿಂದ್ರಿಯಸ್ಯ ||೨೧||

ಅರ್ಥ;– ಮನಸ್ಸಿನ ವಿಷಯವು ಶ್ರುತಜ್ಞಾನಕ್ಕೆ ಗೋಚರವಾಗುವ
ಗಳಾಗಿದೆ, ಅಥವಾ ಮನಸ್ಸಿನ ವಿಷಯವು ಶ್ರುತಜ್ಞಾನವು, ಮ
ಅನೇಕ ವಿಷಯಗಳು ಬರುತ್ತವೆ ಅದೇ ಮನಸ್ಸಿನ ವಿಷಯ.

ಇಂದ್ರಿಯಗಳ ಸ್ವಾಮಿ ಯಾರು?

## ವನಸ್ಪತ್ಯಂತಾನಾಮೇಕಂ ||೨೨||

ಅರ್ಥ;- ವನಸ್ಪತಿ ಕಾಯವೇ ಕೊನೆಯಾಗಿರುವ ಜೀವಗಳು,
ಪೃಥ್ವೀಯೇ ಮೊದಲಾದ ಐದು ಸ್ಥಾವರ ಜೀವಗಳಿಗೆ ಒಂದು ಸ್ಪರ್ಶ
ಯವು ಇರುತ್ತದೆ,

## ಕೃಮಿಪಿಪೀಲಿಕಾಭ್ರಮರ ಮನುಷ್ಯಾದೀನಾಮೇ
## ವೃದ್ಧಾನಿ ||೨೩||

ಅರ್ಥ:- ಕ್ರಿಮಿ, ಇರುವೆ, ಭ್ರಮರ, ಮನುಷ್ಯ ಮೊದಲಾದ ಜೀ
ಕ್ರಮವಾಗಿ ಒಂದೊಂದು ಇಂದ್ರಿಯಗಳು ಹೆಚ್ಚಾಗಿವೆ. ಅಂದರೆ ಕ್ರಿಮಿ
ರ್ಶನ ಮತ್ತು ರಸನೇಂದ್ರಿಯಗಳೂ. ಇರುವೆಗೆ ಸ್ಪರ್ಶನ, ರಸನ, ಮತ್ತು
ಇಂದ್ರಿಯಗಳೂ, ಭ್ರಮರಕ್ಕೆ ಸ್ಪರ್ಶನ, ರಸನ,ಘ್ರಾಣ ಮತ್ತು ಚಕ್ಷು ಇಂ
ಗಳು ಹಾಗೇನೆಯೇ ಮನುಷ್ಯನಿಗೆ ಸ್ಪರ್ಶನ. ರಸನ, ಘ್ರಾಣ, ಚಕ್ಷು
ಶ್ರೋತ್ರೇಂದ್ರಿಯಗಳೆಂದು ಐದು ಇಂದ್ರಿಯಗಳಿರುತ್ತವೆ.

ಸಮನಸ್ಕವೆಂದರೇನು?

## ಸಂಜ್ಞಿನಃ ಸಮನಸ್ಕಾಃ ||೨೪||

ಅರ್ಥ:– ಮನಸ್ಸಿನಿಂದ ಕೂಡಿದ ಜೀವಗಳು ಸಂಜ್ಞೀ ಅಥವಾ ಸ
ಗಳೆಂದು ಕರೆಯಲಾಗುತ್ತದೆ.

ಸಂಜ್ಞಾ– ಹಿತ ಮತ್ತು ಅಹಿತಗಳ ಪರೀಕ್ಷೆಯೂ, ಹಾಗೇನೆಯೇ ಗುಣ ದೋಷಗಳ ವಿಚಾರವೂ, ಸಂಕೇತಕ್ಕೆ ಮತ್ತು ಸ್ಮರಣೆ ಮೊದಲಾದುವುಗಳಿಗೆ ಸಂಜ್ಞೆ ಎಂದು ಹೆಸರು.

ಪ್ರಶ್ನೆ— ಜೀವಗಳ ಹಿತಾಹಿತ ಪ್ರವೃತ್ತಿಯು ಯಾವಾಗ ಮನಸ್ಸಿನ ಸಹಾಯದಿಂದಾಗುವುದೋ ಆಗ ವಿಗ್ರಹ ಗತಿಯಲ್ಲಿ ಮನಸ್ಸಿನ ಹೊರತು ನವೀನ ಶರೀರ ಧಾರಣೆ ಮಾಡಲು ಹೇಗೆ ಗಮನ (ಹೋಗುವಿಕೆ) ವಾಗುತ್ತದೆ?

## ವಿಗ್ರಹಗತೌ ಕರ್ಮಯೋಗಃ ||೨೫||

ಅರ್ಥ—ವಿಗ್ರಹಗತಿಯಲ್ಲಿ ಕಾರ್ಮಾಣಕಾಯಯೋಗವಿರುತ್ತದೆ. ಅದರ ಸಹಾಯದಿಂದ ಜೀವನು ಒಂದು ಗತಿಯಿಂದ ಇನ್ನೊಂದು ಗತಿಗೆ ಹೋಗುತ್ತಾನೆ. ಮರಣದ ನಂತರ ಜನ್ಮದ ಮೊದಲಿನ ಅವಸ್ಥೆಯೇ ವಿಗ್ರಹಗತಿ.

ವಿಗ್ರಹಗತಿ—ಒಂದು ಶರೀರವನ್ನು ಬಿಟ್ಟು ಇನ್ನೊಂದು ಶರೀರವನ್ನು ಪಡೆಯಲು ಹೋಗುವುದೇ ವಿಗ್ರಹಗತಿಯು. ಅಥವಾ ವಿರುದ್ಧ ಗ್ರಹ ವಿಗ್ರಹವೆಂದು ಅರ್ಥ ಮಾಡಿದರೆ ವಿಗ್ರಹಗತಿಯಲ್ಲಿ ಕಾರ್ಮಾಣ ವರ್ಗಣೆಗಳ ಗ್ರಹಣೆ ಮಾಡುವುದು ಮತ್ತು ಕರ್ಮಗಳ ವರ್ಗಣೆಯಾಗುವುದಿಲ್ಲ. ಇದಕ್ಕೆ ವಿರುದ್ಧ ಗ್ರಹವೆಂದು ಹೆಸರು.

ಕರ್ಮಯೋಗ—ಜ್ಞಾನಾವರಣಾದಿ ಕರ್ಮಗಳ ಸಮೂಹಕ್ಕೆ ಕಾರ್ಮಾಣವೆಂದು ಹೆಸರು. ಅದರ ಮೂಲಕವಾಗಿ ಆತ್ಮನ ಪ್ರದೇಶದಲ್ಲಿ ಯಾವ ಹಲನ ಚಲನ (ಸ್ಪಂದನ) ವಾಗುವುದೋ ಅದು ಕರ್ಮಯೋಗ ಅಥವಾ ಕಾರ್ಮಾಣ ಯೋಗವೆಂದು ಹೇಳಲಾಗುತ್ತದೆ. ವಿಗ್ರಹಗತಿಯಲ್ಲಿ ಕಾರ್ಮಾಣಯೋಗವು ಇರುತ್ತದೆ.

### ಗಮನವು ಹೇಗಾಗುತ್ತದೆ

## ಅನುಶ್ರೇಣಿಗತಿಃ ||೨೬||

ಅರ್ಥ—ಜೀವ ಮತ್ತು ಪುದ್ಗಲಗಳ ಗಮನವು ಶ್ರೇಣಿಯ ಅನುಸಾರವಾಗಿ ಅಂದರೆ ಆಕಾಶ ಪಂಕ್ತಿಯಲ್ಲಿ ನಿಯತ ಮಾರ್ಗದಂತೆ ಆಗುತ್ತದೆ.

ಶ್ರೇಣಿ–ಲೋಕದ ಸರಿಯಾದ ಮಧ್ಯಭಾಗದಿಂದ ಮೇಲೆ ಕೆಳಗೆ ಹಾಗೇನೆಯೇ ತಿರ್ಯಕ್ [ಅಡ್ಡ] ದಿಕ್ಕಿನಲ್ಲಿ ಕ್ರಮದಿಂದಿರುವ ಆಕಾಶ ಪ್ರದೇಶದ ಪಂಕ್ತಿಗೆ ಶ್ರೇಣಿ ಎಂದು ಹೆಸರು.

ವಿಶೇಷ–ಯಾವ ಜೀವನು ಮರಣ ಹೊಂದಿ ವಿಗ್ರಹಗತಿಯಲ್ಲಿ ಮಾಡುತ್ತಾನೋ ಅವನ ಗಮನವೇ ಶ್ರೇಣಿಗನುಸಾರವಾಗಿ ಆಗುತ್ತದೆ ಸಂಸಾರಿ ಜೀವಗಳಿಗೆ ಗತಿಯಲ್ಲಿರುವವರಿಗೆ ಆಗುವುದಿಲ್ಲ. ಹಾಗೇನೆಂ ಪುದ್ಗಲ ಪರಮಾಣು ಒಂದು ಸಮಯದಲ್ಲಿ ೧೪ ರಜ್ಜು ಗತಿಯನ್ನು ಶೀ ವಾಗ ಶ್ರೇಣಿಗನುಸಾರವಾಗಿ ಗತಿಯಾಗುತ್ತದೆ. ಬೇರೆ ಎಲ್ಲಾ ಪುದ್ಗ ಆಗುವುದಿಲ್ಲ.

### ಮುಕ್ತ ಜೀವರ ಗತಿ ಹೇಗೆ ?

## ಅವಿಗ್ರಹಾ ಜೀವಸ್ಯ ||೨೭||

ಅರ್ಥ—ಮುಕ್ತ ಜೀವಿಗಳ ಗತಿಯು ನೇರವಾಗಿ ಆಗುವುದು ಅವರಿಗೆ ವಕ್ರಗತಿಯಾಗುವುದಿಲ್ಲ.

ಭಾವಾರ್ಥ–ಶ್ರೇಣಿಗನುಸಾರವಾಗಿ ಆಗುವ ಗತಿಯು ಎರಡು ವಾಗಿದೆ. ಒಂದು ವಿಗ್ರಹಗತಿಯೆಂದೂ ಮತ್ತೊಂದು ಅವಿಗ್ರಹಗತಿ ಹೇಳಲಾಗುತ್ತದೆ. ಇವುಗಳೆರಡರಲ್ಲಿ ಸಂಪೂರ್ಣ ಕರ್ಮನಾಶಮಾಡಿ ಸಿದ್ಧ ಸ್ನ ಮುಟ್ಟಲು ಹೋಗುವ ಜೀವರುಗಳ ಗತಿಯು ನೇರವಾದ ಗತಿಯು

### ಸಂಸಾರಿಗಳ ಗತಿ ಮತ್ತು ಸಮಯವು

## ವಿಗ್ರಹವತೀ ಚ ಸಂಸಾರಿಣಃ ಪ್ರಾಕ್ ಚತುರ್ಭ್ಯಃ

ಅರ್ಥ–ಸಂಸಾರಿ ಜೀವಿಗಳ ಗತಿಯು ನಾಲ್ಕು ಸಮಯದೊಳಗೆ ಮತ್ತು ಅವಿಗ್ರಹಗಳೆಂಬ ಎರಡು ಬಗೆಯ ಗತಿಗಳಾಗುತ್ತವೆ.

ಭಾವಾರ್ಥ—ಸಂಸಾರಿ ಜೀವಿಗಳ ವಿಗ್ರಹ ಗತಿಯು ನೇರವಾ [ಅವಿಗ್ರಹ] ಮತ್ತು ನೇರವಾಗಿಲ್ಲವೆನ್ನುವುದೂ (ವಿಗ್ರಹ) ಆಗುತ್ತದೆ. ಗತಿಯು ನೇರವಾಗಿ ಆಗುವುದೋ ಅದು ಒಂದು ಸಮಯದಲ್ಲಿ ಆಗಳ ಯಾವುದರಲ್ಲಿ ಒಂದು ವಕ್ರತೆಯುಳ್ಳ ಗತಿ ಇರುವುದೋ ಅದು ಎರಡು ಯದಲ್ಲಿ ಆಗುವುದು. ಯಾವುದರಲ್ಲಿ ಎರಡು ಡೊಂಕಾಗಿರುವ ಗತಿ ಇರುವೇ ಆದರಲ್ಲಿ ಮೂರು ಸಮಯ ಮತ್ತು ಮೂರು ಡೊಂಕಾಗಿರುವ ಗ ನಾಲ್ಕು ಸಮಯ ತಗಗುತ್ತದೆ. ಆದರೆ ನಾಲ್ಕನೇ ಸಮಯದಲ್ಲಿ ಕ

ಯಾವರೀತಿಯಿಂದಲಾದರೂ ಹೊಸ ಶರೀರವನ್ನು ಪಡೆಯುವುದರಿಂದ ವಿಗ್ರಹ ಗತಿಯ ಸಮಯವು ನಾಲ್ಕು ಸಮಯದ ಮೊದಲು ಮೊದಲೆಂದು ನಿರ್ವಿವಾದ

ಅವಿಗ್ರಹಗತಿಯ ಸಮಯ

## ಏಕ ಸಮಯಾsವಿಗ್ರಹಾ ||೨೯||

ಅರ್ಥ —ಅವಿಗ್ರಹ (ನೇರವಾದ) ಗತಿಯು ಒಂದೇ ಸಮಯದಲ್ಲಾಗುತ್ತದೆ. ಅಂದರೆ ಅವಿಗ್ರಹ ಗತಿಗೆ ಒಂದು ಸಮಯದಿಂದ ಹೆಚ್ಚು ತಾಗಲಾರದು.

ವಿಗ್ರಹಗತಿಯಲ್ಲಿ ಜೀವನು ಆಹಾರಕನೋ ಅನಾಹಾರಕನೋ

## ಏಕಂದ್ವೌ ತ್ರೀನ್ವಾನಾಹಾರಕಃ ||೩೦||

ಅರ್ಥ – ವಿಗ್ರಹಗತಿಯಲ್ಲಿರುವ ಜೀವನು ಒಂದು, ಎರಡು ಮತ್ತು ಮೂರು ಸಮಯಗಳ ವರೆಗೆ ಅನಾಹಾರಕನಾಗಿರುತ್ತಾನೆ.

ಆಹಾರ – ಔದಾರಿಕ, ವೈಕ್ರಿಯಿಕ ಮತ್ತು ಆಹಾರಕ ಶರೀರಗಳಿಗೂ ಮತ್ತು ಆರು ಪರ್ಯ್ಯಾಪ್ತಿಗಳಿಗೂ ಯೋಗ್ಯವಾದ ಪುದ್ಗಲ ಪರಮಾಣುಗಳನ್ನು ಗ್ರಹಣೆ ಮಾಡುವುದಕ್ಕೆ ಆಹಾರವೆನ್ನುತ್ತಾರೆ.

ಭಾವಾರ್ಥ : – ಎಂದಿನತನಕ ಜೀವನು ಮೇಲೆ ಬರೆದ ಆಹಾರವನ್ನು ಗ್ರಹಣೆ ಮಾಡುವುದಿಲ್ಲವೋ ಅಂದಿನ ತನಕ ಆವನು ಅನಾಹಾರಕನು. ಸಂಸಾರಿ ಜೀವನು ಅವಿಗ್ರಹಗತಿಯಲ್ಲಿ ಆಹಾರಕನೂ, ಮತ್ತು ಒಂದು, ಎರಡು ಹಾಗೇ ನೆಯೇ ಮೂರು ವಕ್ರಗತಿಯಲ್ಲಿ ಒಂದು. ಎರಡು, ಮೂರು ಸಮಯದವರೆಗೆ ಕ್ರಮವಾಗಿ ಅನಾಹಾರಕನಾಗಿರುತ್ತಾನೆ. ನಾಲ್ಕನೇ ಸಮಯದಲ್ಲಿ ನಿಶ್ಚಯವಾಗಿಯೂ ಆಹಾರಕನಾಗುತ್ತಾನೆ,

ಜನ್ಮಭೇದ.

## ಸಮ್ಮೂರ್ಛನ ಗರ್ಭೋಪಪಾದಾ ಜನ್ಮ ||೩೧||

ಅರ್ಥ :– ಜನ್ಮವು + ಸಮ್ಮೂರ್ಛನ–ಗರ್ಭ–ಮತ್ತು ಉಪಪಾದ ಜನ್ಮಗಳೆಂಬ ಮೂರು ಭೇದದಿಂದ ಪ್ರಕಾರವಾಗಿವೆ.

ಸಮ್ಮೂರ್ಛನ ಜನ್ಮ —ತಾಯಿ-ತಂದೆಗಳ ರಜ ಮತ್ತು ವೀರ್ಯಗಳಿಲ್ಲದೇನೆಯೇ ತನ್ನ ಶರೀರಕ್ಕೆ ಯೋಗ್ಯವಾದ ಪುದ್ಗಲ ಪರಮಾಣುಗಳಿಂದ ಅವಯ

---

+ ಹೊಸ ಶರೀರವನ್ನು ಧಾರಣೆ ಮಾಡುವುದಕ್ಕೆ ಜನ್ಮವೆನುತ್ತಾರೆ.

ವಗಳ ರಚನೆಯುಊ ಸಮ್ಮೂರ್ಛನ ಜನ್ಮವು.

ಗರ್ಭಜನ್ಮ-ಸ್ತ್ರೀಯು ಗರ್ಭದಲ್ಲಿ ರಜ ಮತ್ತು ವೀರ್ಯಗಳ ಸ
ದಿಂದಾಗುವ ಜನ್ಮವು ಗರ್ಭಜನ್ಮವು.

ಉಪಪಾದಜನ್ಮ-ತಾಯಿ – ತಂದೆಗಳ ರಜ ಮತ್ತು ವೀರ್ಯ
ದೇನೆಯೇ ದೇವ ಮತ್ತು ನಾರಕೀಯರು ಹುಟ್ಟುವ ವಿಶೇಷ ಸ್ಥಾನವು
ದ ಜನ್ಮವು.

## ಯೋನಿಗಳ ಭೇದ.

## ಸಚಿತ್ತಶೀತಸಂವೃತಾಃ ಸೇತರಾ ಮಿಶ್ರಾಶ್ಚೈಕಶ ಸ್ತದ್ಯೋನಯಃ ॥ ೩೨ ॥

ಅರ್ಥ--ಸಚಿತ್ತ-ಶೀತ-ಮತ್ತು ಸಂವೃತ ಯೋನಿಗಳು ಇವುಗಳಿಗೆ ವಿ
ಗಳಾದ ಅಚಿತ್ತ–ಉಷ್ಣ ಮತ್ತು ವಿವೃತ ಯೋನಿಗಳೂ ಮತ್ತು ಒಂದೊ
ಕ್ರಮಾನುಸಾರ ಸೇರುವ ಸಚಿತ್ತಾಚಿತ್ತ-ಶೀತೋಷ್ಣ ಮತ್ತು ಸಂವೃತ
ಯೋನಿಗಳೂ ಕೂಡಿ ೯ ಪ್ರಕಾರಗಳಾದ ಯೋನಿಗಳು ಸಮ್ಮೂ
ಮೊದಲಾದ ಜನ್ಮಗಳ ಸ್ಥಾನಗಳು.

ಸಚಿತ್ತಯೋನಿ–ಜೀವಸಹಿತವಾದ ಯೋನಿಗೆ ಅಂದರೆ ಅನೇಕ ಕ್ರಿಮಿ
ಗಳೊಂದಿಗೆ ಕೂಡಿದ ಯೋನಿ ಸಚಿತ್ತಯೋನಿ ಎಂದು ಹೆಸರು.

ಶೀತಗುಣದಿಂದಯುಕ್ತವಾದಯೋನಿಗೆ ಶೀತಯೋನಿ ಎಂದ ಹೆಸರು

ಸಂವೃತ ಯೋನಿ– ಯಾರಿಗೂ ನೋಡಲು ಬರದಿರುವ ಜೀವನ
ಸ್ಥಾನಕ್ಕೆ ಸಂವೃತಯೋನಿ ಎಂದು ಹೆಸರು

ಈ ಮೂರರಿಂದ ವಿಪರೀತವಾದ ಯೋನಿಗಳು ಅಂದರೆ ಅಚಿತ್ತ
ರಹಿತ, ಉಷ್ಣ ಮತ್ತು ವಿವೃತ ರೂಪದಿಂದ ಮೂರು ಭೇದಗಳಿಂದ
ಮತ್ತು ಮಿಶ್ರಯೋನಿಗಳು ಸಚಿತ್ತ ಚಿತ್ತ, ಶೀತೋಷ್ಣ, ಮತ್ತು ಸಂವೃತ
ವೆಂದು ಮೂರು.

ಯಾವ ಯಾವ ಯೋನಿಯು ಯಾವ ಯಾವ ಜೀವಗಳ ಉತ್ಪತ್ತಿ
ವೆಂಬುದನ್ನು ಈ ಕೆಳಗಿನ ವಿವರಣೆಯಿಂದ ತಿಳಿಯಬೇಕು.

## +ಯೋನಿಭೇದ ಮತ್ತು ಅವುಗಳ ಸ್ವಾಮಿ

| ಯೋನಿಗಳ ಹೆಸರು. | ಸ್ವಾಮಿ |
|---|---|
| ೧ ಸಚಿತ್ತಯೋನಿ | ಸಾಧಾರಣ ಶರೀರ ಜೀವ |
| ೨ ಅಚಿತ್ತಯೋನಿ | ದೇವ ನಾರಕಿ " |
| ೩ ಸಚಿತ್ತಾಚಿತ್ತ ಯೋನಿ | ಗರ್ಭಜ " |
| ೪ ಶೀತ " | ತೇಜಕಾಯಿಕ ಮತ್ತು ದೇವನಾರಕೀಯ ಜೀವಗಳನ್ನು ಬಿಟ್ಟು ಉಳಿದ ಜೀವಗಳು |
| ೫ ಉಷ್ಣ " | ತೇಜಕಾಯಿಕ " |
| ೬ ಶೀತೋಷ್ಣ " | ದೇವನಾರಕಿ " |
| ೭ ಸಂವೃತ " | ದೇವ, ನಾರಕೀ ಏಕೇಂದ್ರಿ ಜೀವ |
| ೮ ವಿವೃತ " | ವಿಕಲೇಂದ್ರಿಯ |
| ೯ ಸಂವೃತ ವಿವೃತ " | ಗರ್ಭಜ. |

+ ಜೀವಗಳ ಉತ್ಪತ್ತಿ ಸ್ಥಾನಕ್ಕೆ ಯೋನಿ ಎಂದು ಹೆಸರು. ಜನ್ಮ ಮತ್ತು ಯೋನಿಗಳಲ್ಲಿ ಆಧಾರ ಮತ್ತು ಆಧೇಯಗಳ ಭೇದವಿದೆ.

## ಗರ್ಭಜ ಜೀವಗಳು

# ಜರಾಯುಜಾಂಡಜಪೋತಾನಾಂ ಗರ್ಭಃ ||೩

ಅರ್ಥ–ಜರಾಯುಜ, ಅಂಡಜ ಮತ್ತು ಪೋತ ಈ ಮೂರು ಪ್ರ ಳಾದ ಜೀವಗಳಿಗೆ ಗರ್ಭ ಜನ್ಮವಾಗುತ್ತದೆ. ಅಥವಾ ಗರ್ಭ ಜನ್ಮವು ಬರೆದ ಜೀವಗಳಿಗೇನೆಯೋ ಆಗುತ್ತದೆ.

ಜರಾಯುಜ-ಬಲೆಗೆ ಸಮಾನವಾದ ಮಾಂಸ ಮತ್ತು ನೆತ್ತರಿನಿಂ ಹೊದಿಕೆಯಿಂದ ಯಾವ ಜೀವಗಳು ಹುಟ್ಟುತ್ತವೆಯೋ ಅವುಗಳು ಜರಾ ಜೀವಗಳು. ಉದಾಹರಣೆಗಾಗಿ:-ದನ–ಮನುಷ್ಯ ಮೊದಲಾದ ಜೀವಗ

ಅಂಡಜ–ಯಾವ ಜೀವಗಳು ಮೊಟ್ಟೆಯಿಂದ ಹುಟ್ಟುತ್ತವೆಯೋ ಗಳು ಅಂಡಜ ಜೀವಗಳು. ಉದಾಹರಣೆಗಾಗಿ–ಪಕ್ಷಿ-ಪಾರಿವಾಳ-ಕೋಳಿ ಲಾದುವುಗಳು.

ಪೋತ--ಹುಟ್ಟುವಾಗ ಯಾವ ಜೀವಗಳ ಮೇಲೆ ಮಾಂಸ ಮೊ ಆವರಣಗಳಿಲ್ಲದೆ, ಅತ್ತಿತ್ತ ಓಡಾಡಲು ಪ್ರಾರಂಭಿಸುವವೋ ಅವುಗಳು ಜೀವಗಳು. ಉದಾಹರಣೆಗಾಗಿ –ಕುದುರೆ, ಒಂಟೆ, ಮತ್ತು ಸಿಂಹ ಮೊ ವುಗಳು.

## ಉಪಪಾದ ಜೀವಗಳು

# ದೇವನಾರಕಾಣಾಮುಪಪಾದಃ ||೩೪||

ಅರ್ಥ–ದೇವ ನಾರಕೀ ಜೀವರುಗಳಿಗೆ ಉ ಪ ಪಾ ದ ಜನ್ಮವಾ ಅಥವಾ ಉಪಪಾದ ಜನ್ಮವು ದೇವ ನಾರಕೀಜೀವರುಗಳಿಗೇನೆಯೋ ಆ ದೇವತೆಗಳು ಹುಟ್ಟುವಾಗ ಒಂದು ರತ್ನದ ಪೆಟ್ಟಿಗೆಯಿಂದ ಎದ್ದು 16 ಯುವಕನಂತೆ ಕೂತು ಕೊಳ್ಳುತ್ತಾರೆ ಹಾಗೆಯೇ ನಾರಕಿಗಳು ಅನೇಕ ಮೇಲೆ ಚೆಂಡಿನಂತೆ ಬೀಳುತ್ತಾರೆ, ಏಳುತ್ತಾರೆ. ನಂತರ ಜನ್ಮ ಪಡೆಯು ಇದಕ್ಕೆ ಉಪಪಾದವೆಂದು ಹೇಳುತ್ತಾರೆ,

ಸಮ್ಮೂರ್ಛನ ಜೀವ.

## ಶೇಷಾಣಾಂ ಸಮ್ಮೂರ್ಛನಂ ॥ ೩೫ ॥

ಅರ್ಥ–ಗರ್ಭ ಮತ್ತು ಉಪಪಾದ ಜೀವಗಳನ್ನು ಬಿಟ್ಟು ಉಳಿದ ಜೀವಗಳಿಗೆ ಸಮ್ಮೂರ್ಛನ ಜನ್ಮವಾಗುತ್ತದೆ. ಅಥವಾ ಸಮ್ಮೂರ್ಛನ ಜನ್ಮವು ಸಮ್ಮೂರ್ಛನ ಜೀವಗಳಿಗೇನೆಯೇ ಆಗುತ್ತದೆ.

ವಿಶೇಷ—ಏಕೇಂದ್ರಿಯದಿಂದ ಹಿಡಿದು ಪಂಚೇಂದ್ರಿಯ ತಿರ್ಯಂಚದವರೆಗೆ ಸಮ್ಮೂರ್ಛನ ಜನ್ಮವಾಗುತ್ತದೆ. ಉಳಿದ ತಿರ್ಯಂಚಗಳಿಗೆ ಗರ್ಭಜನ್ಮ ಮತ್ತು ಸಮ್ಮೂರ್ಛನ ಜನ್ಮಗಳೆರಡೂ ಆಗುತ್ತವೆ. ಲಬ್ಧ್ಯಪರ್ಯಾಪ್ತಕ ಮನುಷ್ಯರಿಗೂ ಸಮ್ಮೂರ್ಛನ ಜನ್ಮವಾಗುತ್ತದೆ.

ಶರೀರಗಳ ಹೆಸರು ಮತ್ತು ಭೇದ.

## ಔದಾರಿಕವೈಕ್ರಿಯಕಾಹಾರಕತೈಜಸಕಾರ್ಮಾಣಾನಿ ಶರೀರಾಣಿ ॥ ೩೬ ॥

ಅರ್ಥ–ಔದಾರಿಕ, ವೈಕ್ರಿಯಕ, ಆಹಾರಕ, ತೈಜಸ ಮತ್ತು ಕಾರ್ಮಾಣ ಇವು ಐದು ಶರೀರಗಳು.

ಔದಾರಿಕ ಶರೀರ–ಸ್ಥೂಲ ಶರೀರಕ್ಕೆ ಔದಾರಿಕ ಶರೀರವೆಂದು ಹೆಸರು. ಈ ಶರೀರವು ಮನುಷ್ಯ ಮತ್ತು ತಿರ್ಯಂಚಗಳಿಗಾಗುತ್ತದೆ.

ವೈಕ್ರಿಯಿಕ ಶರೀರ-ಯಾವ ಶರೀರದಿಂದ ಹಗುರ–ಭಾರ ಸಣ್ಣದು ದೊಡ್ಡದು ಮೊದಲಾದ ವಿಕ್ರಿಯೆಗಳು ಮಾಡಲಾಗುತ್ತವೆಯೋ ಆದಕ್ಕೆ ವೈಕ್ರಿಯಿಕಶರೀರವೆಂದು ಹೆಸರು.

ಆಹಾರಕ ಶರೀರ–ಸೂಕ್ಷ್ಮ ಪದಾರ್ಥಗಳ ನಿರ್ಣಯಕ್ಕಾಗಿಯೂ ಅಥವಾ ಸಂಯಮದ ರಕ್ಷಣೆಗಾಗಿಯೂ ಆರನೇ ಗುಣಸ್ಥಾನದಲ್ಲಿರುವ ಮುನಿಗಳ ಮಸ್ತಕದಿಂದ ಒಂದು ಗಿಡ್ಡ ಮೊಳದಷ್ಟು ಹೊರಸುವ ಶ್ವೇತ ( ಬಿಳಿ ) ಶರೀರಕ್ಕೆ ಆಹಾರಕ ಶರೀರವೆಂದು ಹೆಸರು. ಇದರಿಂದ ಆ ಮುನಿಯು ತತ್ವದವಿಷಯದಲ್ಲಿ ಸಂಶಯವುಂಟಾದರೆ ಕೇವಲಿ ಅಥವಾ ಶ್ರುತಕೇವಲಿಗಳು ಎಲ್ಲಿರುತ್ತಾರೆಯೋ ಅಲ್ಲಿಗೆ ಹೋಗಿ ಅವರ ಚರಣ ಸ್ಪರ್ಶದಿಂದ ಸಂಶಯ ದೂರಮಾಡಿಕೊಳ್ಳಬಹುದು.

ತೈಜಸ ಶರೀರ-ಔದಾರಿಕ, ವೈಕ್ರಿಯಿಕ ಮತ್ತು ಆಹಾರಕ ಶರೀ
ತೇಜಸ್ಸು ಕೊಡುವ ಶರೀರಕ್ಕೆ ತೈಜಸ ಶರೀರವೆಂದು ಹೆಸರು.

ಕಾರ್ಮಾಣ ಶರೀರ-ಜ್ಞಾನಾವರಣಾದಿ ಎಂಟು ಕರ್ಮಗಳ ಸಮ
ಕಾರ್ಮಾಣ ಶರೀರವೆಂದು ಹೆಸರು.

ಶರೀರಗಳ ಸೂಕ್ಷ್ಮತೆ

## ಪರಂ ಪರಂ ಸೂಕ್ಷ್ಮಂ ||೩೭||

ಅರ್ಥ ;– ಪೂರ್ವದ ಶರೀರದಿಂದ ನಂತರ ಶರೀರಗಳು ಸೂಕ್ಷ್ಮ
ಕ್ಷ್ಮಗಳಾಗಿರುತ್ತವೆ. ಅಂದರೆ ಔದಾರಿಕ ಶರೀರದಿಂದ ವೈಕ್ರಿಯಿಕವೂ, ವೈಕ್ರಿ
ಶರೀರದಿಂದ ಆಹಾರಕ ಶರೀರವೂ, ಆಹಾರಕ ಶರೀರದಿಂದ ತೈಜಸ್ಸೂ,
ತೈಜಸ್ಸಿನಿಂದ ಕಾರ್ಮಾಣ ಶರೀರವೂ ಸೂಕ್ಷ್ಮರೂಪವಾಗಿದೆ.

ಪ್ರದೇಶಗಳ ಅಪೇಕ್ಷೆಯಿಂದ ಸ್ಥೂಲ.

## ಪ್ರದೇಶತೋಽಸಂಖ್ಯೇಯಗುಣಂ ಪ್ರಾಕ್‌ತೈಜಸಾ

ಅರ್ಥ - ಪ್ರದೇಶಗಳ ಅಪೇಕ್ಷೆಯಿಂದ ತೈಜಸ ಶರೀರದಿಂದ ಹಿ
ಮೊದಲು ಇರುವ ಶರೀರಗಳು ಅಸಂಖ್ಯಾತ ಗುಣಪ್ರದೇಶಗಳಿಂದ ಹೆ
ಆಗಿರುತ್ತವೆ.

ಭಾವಾರ್ಥ - ಔದಾರಿಕ ಶರೀರದ ಅಪೇಕ್ಷೆಯಿಂದ ಅಸಂಖ್ಯಾತ
ಪ್ರದೇಶ ( ಪರಮಾಣು ) ವೈಕ್ರಿಯಿಕ ಶರೀರದಲ್ಲಿದೆ. ವೈಕ್ರಿಯಿಕ
ಅಪೇಕ್ಷೆಯಿಂದ ಅಸಂಖ್ಯಾತ ಗುಣಪ್ರದೇಶವು ಆಹಾರಕ ಶರೀರದಲ್ಲಿದೆ.
ದರಿಂದಲೇ ತೈಜಸದಿಂದ ಮೊದಲು ಎಂದು ಹೇಳಲಾಗಿದೆ.

## ಅನಂತಗುಣೇ ಪರೇ ||

ಅರ್ಥ – ಉಳಿದ ಎರಡು ಶರೀರಗಳು ಅನಂತಗುಣ ಪರಮಾಣು
ಹೆಚ್ಚಿನವು. ಅಂದರೆ ಆಹಾರಕ ಶರೀರದಿಂದ ಅನಂತಗುಣ ಪರಮಾಣು

ಶರೀರದಲ್ಲಿಯೂ ಅದರಿಂದ ಅನಂತಗುಣ ಪರಮಾಣು ಕಾರ್ಮಾಣ ಶರೀರದ ಲ್ಲಿಯೂ ಇವೆ. +

ತೈಜಸ ಮತ್ತು ಕಾರ್ಮಾಣ ಶರೀರಗಳ ವಿಶೇಷತೆ

## ಅಪ್ರತೀಘಾತೇ ॥ ೪೦ ॥

ಅರ್ಥ– ತೈಜಸ ಮತ್ತು ಕಾರ್ಮಾಣ ಈ ಎರಡು ಶರೀರಗಳು ಪ್ರತಿಘಾತ-ಬಾಧಾರಹಿತವಾಗಿರುವವು. ಅಂದರೆ ಯಾವುದಾದರೊಂದು ಪುದ್ಗಲ ಪದಾರ್ಥಗಳಿಂದ ಇವುಗಳಿಗೆ ತಡೆಯಿಲ್ಲ ಮತ್ತು ಅವುಗಳಿಂದಲೂ ಬೇರೆ ಯಾವ ಪದಾರ್ಥಗಳಿಗೂ ತಡೆಯಿಲ್ಲದಿರುತ್ತದೆ.

ಲೋಕದ ಯಾವ ಭಾಗದಲ್ಲಿಯೂ ಇವುಗಳಿಗೆ ಪ್ರತಿಘಾತವಿಲ್ಲ ಆದರೆ ಆ ನರಕವು ಎರಡುವರೆ ದ್ವೀಪದವರೆಗೆ ವೈಕ್ರಿಯಿಕವೂ ನಿಯಮಿತ ಸಾಧನದವರೆಗೆ ಮಾತ್ರ ಹೋಗುತ್ತದೆ.

## ಅನಾದಿ ಸಂಬಂಧೇ ಚ ॥ ೪೧ ॥

ಅರ್ಥ- ಈ ಎರಡು ಶರೀರಗಳು ಆತ್ಮನೊಡನೆ ಅನಾದಿ ಕಾಲದಿಂದಲೂ, ಸಂಬಂಧಿಸಿರುವವು.

ವಿಶೇಷ– ಈ ಮಾತು ಸಾಮಾನ್ಯ ತೇಜಸ್ಸು ಮತ್ತು ಕಾರ್ಮಾಣ ಶರೀರಗಳ ಅಪೇಕ್ಷೆಯಿಂದಾಗಿದೆ. ವಿಶೇಷಾಪೇಕ್ಷೆಯಿಂದ ಔದಾರಿಕ ಮೊದಲಾದ ಶರೀರಗಳು ನಾಶವಾಗಿ ಅವುಗಳ ಸ್ಥಾನದಲ್ಲಿ ಹೊಸಹೊಸ ಶರೀರಗಳ ಸಂಬಂಧವಾಗುತ್ತವೆ. ಏಕೆಂದರೆ ಔದಾರಿಕ ವೈಕ್ರಿಯಿಕ ಮತ್ತು ಆಹಾರಕ ಶರೀರಗಳು ಯಾವಾಗಲು ಪರಿವರ್ತನೆಯಾದ ನಂತರ ಪರಿವರ್ತಿಸುತ್ತವೆ.

---

+ ಔದಾರಿಕ ಮೊದಲಾದ ಶರೀರಗಳ ನಂತರ ಇರುವ ಶರೀರಗಳಲ್ಲಿ ಅನಂತಗುಣ ಪ್ರದೇಶಗಳಿದ್ದಗೂ ಅವುಗಳ ರಚನೆಯು ಕಬ್ಬಿಣದ ಗುಂಡಿನಂತೆ ಘನವಾಗಿರುತ್ತದೆ. ಆದುದರಿಂದ ಅವುಗಳು ಹೊರಗಿನಿಂದ ಸೂಕ್ಷ್ಮವಾಗಿರುತ್ತವೆ.

## ಸರ್ವಸ್ಯ || ೪೨ ||

ಅರ್ಥ—ತೈಜಸ ಮತ್ತು ಕಾರ್ಮಾಣ ಶರೀರಗಳೆರಡೂ ಸಮಸ್ತ ಸಂ ಜೀವಗಳಿಗೆ ಆಗುತ್ತವೆ. ಸಂಸಾರದಲ್ಲಿ ಈ ಶರೀರವಿಲ್ಲದ ಜೀವನಿಲ್ಲ.

ಒಬ್ಬ ಜೀವನಿಗೆ ಒಟ್ಟಿಗೆ ಎಷ್ಟು ಶರೀರಗಳಾಗುವವು.

## ತದಾದೀನಿ ಭಾಜ್ಯಾನಿ ಯುಗಪದೇಕಸ್ಯಾಚತು ||೪೩||

ಅರ್ಥ—ತೈಜಸ ಮತ್ತು ಕಾರ್ಮಾಣ ಶರೀರಗಳು ಮೊದಲಾಗಿ ಸಾರಿ ಒಬ್ಬ ಜೀವನಿಗೆ ನಾಲ್ಕು ಶರೀರಗಳವರೆಗಾಗುತ್ತವೆ. ಅಂದರೆ ಶರೀರವಾದರೆ ತೈಜಸ ಮತ್ತು ಕಾರ್ಮಾಣಗಳೂ, ಮೂರು ಶರೀರ ತೈಜಸ ಕಾರ್ಮಾಣ ಮತ್ತು ವೈಕ್ರಿಯಿಕ ಶರೀರಗಳೂ, ಹಾಗೇನೆಯೇ ಶರೀರಗಳಾದರೆ ತೈಜಸ ಕಾರ್ಮಾಣ ಔದಾರಿಕ ಮತ್ತು ಆಹಾರಕ ಗಳು ಆಗುತ್ತವೆ. ಆಹಾರಕ ಶರೀರದ ಬದಲಿಗೆ ಲಬ್ಧಿಪ್ರತ್ಯಯ ದಿಂದುಂಟಾದ ವೈಕ್ರಿಯಿಕ ಶರೀರವೂ ಆಗಬಹುದು.

ಕಾರ್ಮಾಣ ಶರೀರದ ವಿಶೇಷತೆ.

## ನಿರುಪಭೋಗಮಂತ್ಯಂ || ೪೪ ||

ಅರ್ಥ— ಅಂತ್ಯದ ಕಾರ್ಮಾಣ ಶರೀರವು ಇಂದ್ರಿಯಗಳ ಉಪ ಭೋಗ ರಹಿತವಾಗಿರುತ್ತದೆ.

ಉಪಭೋಗ— ಇಂದ್ರಿಯಗಳ ಮೂಲಕ ಶಬ್ದಾದಿ ವಿಷಯ ಗ್ರಹಣೆ ಮಾಡುವುದಕ್ಕೆ ಉಪಭೋಗವೆಂದು ಹೆಸರು ತೈಜಸ ಶರೀರವು ಭೋಗವಾಗಿದ್ದರೂ ಇಲ್ಲಿ ಯೋಗಕ್ಕೆ ನಿಮಿತ್ತವಾದ ಶರೀರವನ್ನೇ ಭೋಗವೆಂದು ಗ್ರಹಣೆ ಮಾಡಲಾಗಿದೆ.

ಔದಾರಿಕ ಶರೀರ.

## ಗರ್ಭಸಮ್ಮೂರ್ಛನಜಮಾದ್ಯಂ || ೪೫ ||

ಅರ್ಥ– ಗರ್ಭ ಮತ್ತು ಸಮ್ಮೂರ್ಛನ ಜನ್ಮದಿಂದುಂಟಾದ ಶರೀರವು ಔದಾರಿಕ ಶರೀರವು. ಈ ಔದಾರಿಕ ಶರೀರವು ಗರ್ಭ ಮತ್ತು ಸಮ್ಮೂರ್ಛನ ಜೀವಗಳಿಗೆ ಪ್ರಾಪ್ತವಾಗುತ್ತದೆ.

ವೈಕ್ರಿಯಿಕ ಶರೀರ॥

## ಔಪಪಾದಿಕಂ ವೈಕ್ರಿಯಿಕಂ || ೪೬ ||

ಅರ್ಥ- ಉಪಪಾದ ಜನ್ಮದಲ್ಲಿ ಹುಟ್ಟಿದ ದೇವನಾರಕರ ಶರೀರವು ವೈಕ್ರಿಯಿಕ ಶರೀರವು.

ವೈಕ್ರಿಯಿಕ ಶರೀರವು ಉಪಪಾದ ಜನ್ಮದಿಂದ ಆಗುವುದೆಂದರೆ ಉಪಪಾದ ವಲ್ಲದೆ ವೈಕ್ರಿಯಿಕವಾಗುವುದಿಲ್ಲ.

## ಲಬ್ಧಿಪ್ರತ್ಯಯಂ ಚ || ೪೭ ||

ಅರ್ಥ– ವೈಕ್ರಿಯಿಕ ಶರೀರವು ಲಬ್ಧಿ ವಿಶೇಷದಿಂದಲೂ ಆಗುತ್ತದೆ.

ಲಬ್ಧಿ–ತಪೋವಿಶೇಷದಿಂದ ಪಡೆಯುವ ಋದ್ಧಿ ವಿಶೇಷಕ್ಕೆ ಲಬ್ಧಿ ಎಂದು ಹೆಸರು. ಅದರಿಂದಲೂ ವೈಕ್ರಿಯಿಕ ಋದ್ಧಿಯು ಪ್ರಾಪ್ತಿಯಾಗುತ್ತದೆ. ಆದ ರಿಂದ ತನ್ನ ಶರೀರವನ್ನು ಅನೇಕ ಆಕಾರಗಳಲ್ಲಿ ಆ ಮುನಿಗಳು ನಿರ್ಮಿಸಬಹುದು ಹಾಗೆಯೇ:-

## ತೈಜಸಮಪಿ || ೪೮ ||

ಅರ್ಥ– ತೈಜಸ ಶರೀರವೂ ಲಬ್ಧಿ ವಿಶೇಷದಿಂದುಂಟಾಗುತ್ತದೆ.

ವಿಶೇಷ– ಶುಭ ತೈಜಸ ಮತ್ತು ಅಶುಭ ತೈಜಸವೆಂದು ತೈಜಸ ಶರೀರ ದಲ್ಲಿ ಎರಡು ಭೇದಗಳಿವೆ. ಋದ್ಧಿಯಿಂದುಂಟಾದ ಶುಭ ತೈಜಸ ಶರೀರದ ಬಲಭುಜದಿಂದ ಹೊರಟು 12 ಯೋಜನಗಳಲ್ಲಿರುವ ಎಷ್ಟೋ ಜೀವಗಳನ್ನು

ದುರ್ಭಿಕ್ಷೆ ಇತ್ಯಾದಿ ದುಃಖಗಳಿಂದ ನಾಶಮಾಡಿರುವುದು ಹಾಗೆಯೇ ಎಡ
ದಿಂದ ಹೊರಟು ಅಶುಭ ತೈಜಸವು 12 ಯೋಜನಗಳಲ್ಲಿರುವ ಎಲ್ಲಾ ಪ
ಗಳನ್ನು ಸುಟ್ಟು ತನ್ನನ್ನೂ ಸುಟ್ಟು ನರಕವನ್ನು ದೊರಕಿಸುವುದು.

## ಆಹಾರಕ ಶರೀರದ ಲಕ್ಷಣ ಮತ್ತು ಸ್ವಾಮಿ

## ಶುಭಂ ವಿಶುದ್ಧಮವ್ಯಾಘಾತಿ ಚಾಹಾರಕಂ ಪ್ರಮ ಸಂಯತಸ್ಯೈವ ||೪೯||

ಅರ್ಥ– ಆಹಾರಕ ಶರೀರವು ಶುಭ ರೂಪವೂ, ವಿಶುದ್ಧವೂ ಮ
ಅವ್ಯಾಘಾತವೂ ಆಗಿ ಪ್ರಮತ್ತ ಗುಣಸ್ಥಾನದಲ್ಲಿರುವ ಅಂದರೆ ಆರನೇ ಗ
ಸ್ಥಾನದಲ್ಲಿರುವ ಮುನಿಗಳಿಗೆ ಆಗುತ್ತದೆ. ಅದರಲ್ಲಿ ಸಮಚತುರ ಸಂ
ವಿರುತ್ತದೆ. ಧಾತು ಉಪಧಾತುಗಳಿಂದ ಅದು ರಹಿತವಾಗಿರುತ್ತದೆ. ಅ
ಆಭಾದಿತವಾಗಿರುತ್ತದೆ. ಪ್ರಮತ್ತ ಸಂಯತವೆಂಬ ಆರನೇ ಗುಣಸ್ಥಾನದಲ್ಲಿ
ಅದು ಆಗುತ್ತದೆ. ಕೆಲವು ಸಾರಿ ಋದ್ಧಿಯನ್ನು ತಿಳಿಯಲಿಕ್ಕೂ ಕೆಲವು ಸ
ಸೂಕ್ಷ್ಮ ವಿಷಯಗಳ ನಿರ್ಣಯಕ್ಕಾಗಿಯೂ ನಿಯಮಿತದಿಂದ ಹೊರಟು ಕೇ
ಗಳೆಡೆಗೆ ಹೋಗಿ ಅಂತರ್ಮುಹೂರ್ತದಲ್ಲಿ ಮತ್ತೆ ಮುನಿ ಶರೀರದಲ್ಲಿ ಪ್ರ
ಸುತ್ತದೆ.

ಶರೀರದ ಭೇದ ಜನ್ಮ ಮತ್ತು ಸ್ವಾಮಿಗಳನ್ನು ತೋರಿಸುವ ಚಿತ್ರ

| ಶರೀರ | ಸ್ವಾಮಿ | ಜನ್ಮ |
|---|---|---|
| ೧ ಔದಾರಿಕ | ಮನುಷ್ಯ–ತಿರ್ಯಂಚ | ಗರ್ಭ-ಸಮ್ಮೂರ್ಛನ |
| ೨ ವೈಕ್ರಿಯಿಕ | ದೇವ–ನಾರಕೀ<br>ಲಬ್ಧಿ ಪ್ರತ್ಯಯ ವಿಷಯ ದಿಂದ ಮನುಷ್ಯನೂ | ಉಪಪಾದ |
| ೩ ಆಹಾರಕ | ೬ನೇ ಗುಣಸ್ಥಾನವರ್ತಿ ಮುನಿ | |
| ೪ ತೈಜಸ | ಸಮಸ್ತ ಸಂಸಾರಿ | |
| ೫ ಕಾರ್ಮಾಣ | ಸಮಸ್ತ ಸಂಸಾರಿ | |

## ಲಿಂಗ ಮತ್ತು ಅದರ ಸ್ವಾಮಿ

## ನಾರಕಸಮ್ಮೂರ್ಛಿನೋ ನಪುಂಸಕಾನಿ ||೫೦||

ಅರ್ಥ- ನಾರಕೀ ಮತ್ತು ಸಮ್ಮೂರ್ಛನ ಜೀವಗಳು ನಪುಂಸಕರಾಗಿರುತ್ತಾರೆ. ಇವರಿಗೆ ಸ್ತ್ರೀವೇದವೂ ಇರುವುದಿಲ್ಲ ಪುರುಷ ವೇದವೂ ಇರುವುದಿಲ್ಲ.

## ನ ದೇವಾಃ || ೫೧ ||

ಅರ್ಥ- ದೇವತೆಗಳು ನಪುಂಸಕರಾಗಿ ಆಗುವುದಿಲ್ಲ. ಅಂದರೆ ದೇವತೆಗಳಲ್ಲಿ ಸ್ತ್ರೀಲಿಂಗ ಮತ್ತು ಪುಲ್ಲಿಂಗಗಳೆಂದು ಎರಡೇ ಲಿಂಗಗಳಿರುತ್ತವೆ,

## ಶೇಷಾಸ್ತ್ರಿವೇದಾಃ || ೫೨ ||

ಅರ್ಥ-- ಉಳಿದ ಮನುಷ್ಯ ಮತ್ತು ತಿರ್ಯಂಚಗಳು ಸ್ತ್ರೀಲಿಂಗ, ಪುಲ್ಲಿಂಗ ಮತ್ತು ನಪುಂಸಕಲಿಂಗ [ವೇದ] ಉಳ್ಳವರಾಗಿ ಆಗುತ್ತಾರೆ.

## ಯಾರಿಗೆ ಅಕಾಲಮೃತ್ಯು ಆಗುವುದಿಲ್ಲ?

## ಔಪಪಾದಿಕಚರಮೋತ್ತಮದೇಹಾಽಸಂಖ್ಯೇಯವರ್ಷಾಯುಷೋಽನಪವರ್ತ್ಯಾಯುಷಃ || ೫೩ ||

ಅರ್ಥ-- ಉಪಪಾದ ಜನ್ಮವನ್ನು ಪಡೆದ ದೇವ ಮತ್ತು ನಾರಕಿಗಳು, ತದ್ಭವ ಮೋಕ್ಷಗಾಮಿಗಳಾದ ತೀರ್ಥಂಕರರೂ ಮೊದಲಾದ ಶ್ರೇಷ್ಟ ಪುರುಷರೂ ಮತ್ತು ಅಸಂಖ್ಯಾತ ವರ್ಷಗಳ ಆಯುಷ್ಯವನ್ನು ಪಡೆದ ಭೋಗಭೂಮಿಯ ಜೀವರೂ, ಸಂಪೂರ್ಣ ಆಯುಷ್ಯವುಳ್ಳವರಾಗಿ ಆಗುತ್ತಾರೆ. ಅಂದರೆ ಈ ಎಲ್ಲಾ ಜೀವರುಗಳಿಗೆ ಅಕಾಲಮೃತ್ಯು ಆಗುವುದಿಲ್ಲ.

ವಿಶೇಷಾರ್ಥ— ಬೇರೆ ಜೀವರಿಗೆ ಸಂಸಾರದಲ್ಲಿ ಅಕಾಲ ಮೃತ್ಯುವಿದೆ. ಕೆಲವರು ಅಕಾಲ ಮೃತ್ಯು ಇಲ್ಲವೆಂದು ಹೇಳುತ್ತಾರೆ. ತೀರ್ಥಂಕರರಲ್ಲಿಯೂ ಸರ್ವ

ಜ್ಞರ ಜ್ಞಾನದಲ್ಲಿ ಬಂದ ವಿಷಯವನ್ನು ಅಕಾಲವೆಂದು ಏಕೆ ಹೇಳ
ಅದು ಸಕಾಲವೇ ಎಂದು ಅವರ ತರ್ಕ. ಆದರೆ ಸರ್ವಜ್ಞರು ಅದನ್ನು
ವೆಂದು ಹೇಳುತ್ತಾರೆ. ಅಲ್ಲದೆ ಅಕಾಲ ಮೃತ್ಯುವು ಇಲ್ಲದಿದ್ದರೆ ಜ
ಅಗ್ನಿಪಾತ, ಪರ್ವತಪತನ ಭಕ್ಷಣೆ ಮೊದಲಾದವುಗಳಿಗೆ ಜನರು ಏಕೆ
ಬೇಕು? ರೋಗವಾದ ಕೂಡಲೇ ಡಾಕ್ಟರ್ ಅಥವಾ ವೈದ್ಯನನ್ನು ಏಕೆ
ಬೇಕು! ಆದುದರಿಂದ ಅಪಮೃತ್ಯುವಿದೆ. ಇದಕ್ಕೆ ಆಗಮದ ಪ್ರಮಾ
ಮೇಲಿನ ಪ್ರಾಣಿಗಳಿಗೆ ಮಾತ್ರ ಅಪಮೃತ್ಯುವಿಲ್ಲವೆಂದು ತಿಳಿಯಬೇಕು.

॥ಇತಿ ಶ್ರೀಮದುಮಾಸ್ವಾಮಿವಿರಚಿತೇ ಮೋಕ್ಷಶಾಸ್ತ್ರೇ ದ್ವಿತೀಯೋಽಧ್ಯಾ

# ಪ್ರಶ್ನಾವಳಿಗಳು

೧ ಜೀವನ ಅಸಾಧಾರಣ ಭಾವಗಳೆಷ್ಟು ?

೨ ಈಗ ನಿನಗೆಷ್ಟು ಭಾವಗಳಿವೆ ?

೩ ವಿಗ್ರಹಗತಿಯಲ್ಲಿ ಜೀವನು ಅನಾಹಾರಕನಾಗಿ ಎಲ್ಲಿಯ ವರೆಗೆ ಏಕೆ
ತ್ತಾನೆ.

೪ ಜನ್ಮ ಮತ್ತು ಯೋನಿಗಳಲ್ಲಿರುವ ಭೇದವೇನು ?

೫ ನಿನಗೆಷ್ಟು ಶರೀರವಿದೆ ?

೬ ಮನುಷ್ಯರಿಗೆ ಯಾವ ಯಾವ ಜನ್ಮವಿರುತ್ತವೆ ?

೭ ದೇವತೆಗಳಿಗೆ ಆಹಾರಕ ಶರೀರವಿರುತ್ತದೆಯೋ ವಾ ಇಲ್ಲವೋ ?

೮ ಔದಾರಿಕಾದಿ ಶರೀರಗಳಿಂದ ವೈಕ್ರಿಯಿಕ ಶರೀರಗಳು ಹೆಚ್ಚೆಚ್ಚು ಪ್ರ
ವುಳ್ಳವುಗಳಾಗಿದ್ದರೆ ಔದಾರಿಕ ಶರೀರದಿಂದ ಅವು ಸ್ಥೂಲರೂಪವಾಗ
ದಿಲ್ಲವೇಕೆ ?

೯ ಒಂದು ವ್ಯಕ್ತಿಯು ಅಕಾಲಮೃತ್ಯುವಾಯಿತೆಂದು ನೀವು ಹೇಗೆ ಹೇ
ಯುವಿರಿ ?

೧೦ ನಾರಕೀಯರಿಗೆ ಯಾವ ಲಿಂಗವಿದೆ ? ದೇವತೆಗಳಲ್ಲಿ ಯಾವ ಲಿಂಗ
ಮೂರು ಲಿಂಗಗಳನ್ನು ಧಾರಣೆ ಮಾಡಿದವರು ಯಾರು ?

# ಮೂರನೇ ಅಧ್ಯಾಯ



## ಅಧೋಲೋಕದ ವರ್ಣನೆ

### ಏಳು ಭೂಮಿಗಳು ಅಥವಾ ನರಕಗಳು.

ರತ್ನ ಶರ್ಕರಾವಾಲುಕಾಪಂಕಧೂಮತಮೋ–
ಮಹಾತಮಃಪ್ರಭಾ ಭೂಮಯೋ ಘನಾಂಬುವಾತಾ
ಕಾಶ ಪ್ರತಿಷ್ಠಾಃ ಸಪ್ತಾಽಧೋಽಧಃ ॥೧॥

ಅರ್ಥ–ರತ್ನಪ್ರಭಾ, + ಶರ್ಕರಾಪ್ರಭಾ, ವಾಲುಕಾಪ್ರಭಾ, ಪಂಕಪ್ರಭಾ, ಧೂಮಪ್ರಭಾ, ತಮಃಪ್ರಭಾ ಮತ್ತು ಮಹಾತಮಃಪ್ರಭಾ ಎಂಬುದಾಗಿ ಒಂದರ ಕೆಳಗೆ ಒಂದರಂತೆ ಏಳುಭೂಮಿಗಳು ಅಥವಾ ನರಕಗಳಿವೆ. ಮತ್ತು ಘನೋದಧಿ ವಾತವಲಯ, ಘನವಾತವಲಯ ಹಾಗೇನೆಯೇ ತನುವಾತವಲಯ ಮತ್ತು ಆಕಾಶದ ಆಧಾರದಿಂದ ಸುತ್ತಲ್ಪಟ್ಟಿವೆ.

ವಿಶೇಷ–ರತ್ನಪ್ರಭೆ ಎಂಬ ಭೂಮಿಯು ಮೂರುವಿಭಾಗದಿಂದ ಕೂಡಿದೆ. ಖರಭಾಗ ಪಂಕಭಾಗ ಮತ್ತು ಅಬ್ಬಹುಲಭಾಗ ಎಂದು. ಇವುಗಳಲ್ಲಿ ಮೊದಲಿನ ಎರಡು ಭೂಮಿಗಳಲ್ಲಿ ಭವನವಾಸಿ ಮತ್ತು ವ್ಯಂತರ ದೇವತೆಗಳ ನಿವಾ

---

+ ರತ್ನಪ್ರಭೆ ಮೊದಲಾದ ಭೂಮಿಗಳ ಹೆಸರು ಸಾರ್ಥಕವಾದುದು ಆದರೆ ಇವುಗಳ ರೂಢಿಯ ಹೆಸರು ಕ್ರಮವಾಗಿ ೧ ಘಮ್ಮಾ, ೨ ವಂಶಾ, ೩ ಮೇಘಾ, ೪ ಅಂಜನಾ. ೫ ಅರಿಷ್ಟಾ, ೬ ಮಘವೀ, ೭ ಮಾಘವೀ ಎಂಬುದಾಗಿ ಇದೆ.

ಸವಿರುತ್ತದೆ. ಕೆಳಗಿನ ಅಬ್ಬಹುಲ ಭಾಗದಲ್ಲಿ ನಾರಕೀಯರು ಇರುತ್ತಾರೆ. ಪ್ರಭಾ ಎಂಬ ಭೂಮಿಯ ಅಗಲವು ೧ ಲಕ್ಷ ೮೦ ಸಾವಿರ ಯೋಜನವು.

ಏಳು ಭೂಮಿಗಳಲ್ಲಿರುವ ನರಕಬಿಲಗಳ ಸಂಖ್ಯೆ

ತಾಸುತ್ರಿಂಶತ್ಪಂಚವಿಂಶತಿ ಪಂಚದಶದಶತ್ರಿ ಪಂಚೋನೈಕನರಕಶತಸಹಸ್ರಾಣಿಪಂಚಚೈವಯ ಕ್ರಮಂ || ೨ ||

ಅರ್ಥ—ಮೇಲೆ ಹೇಳಿದ ಏಳು ನರಕ ಭೂಮಿಗಳಲ್ಲಿ ಕ್ರಮವಾಗಿ ೩೦ ೨೫ ಲಕ್ಷ, ೧೫ ಲಕ್ಷ, ೧೦ ಲಕ್ಷ, ೩ ಲಕ್ಷ, ೫ ಬಿಲಕಮ್ಮಿಯಾದ ಮತ್ತು ೫ ಬಿಲಗಳು ಇವೆ. ಈ ಬಿಲಗಳು ಭೂಮಿಯಲ್ಲಿರುವ ರು ಒಳಗಿಂದ ಟೊಳ್ಳಾಗಿರುತ್ತವೆ.

ನಾರಕೀಯರ ದುಃಖ.

ನಾರಕಾ ನಿತ್ಯಾ ಶುಭತರಲೇಶ್ಯಾಪರಿಣಾಮ ವೇದನಾ ವಿಕ್ರಿಯಾಃ || ೩ ||

ಅರ್ಥ—ನಾರಕೀ ಜೀವರು ನಿರಂತರವೂ ಅತ್ಯಧಿಕವಾದ ಲೇಶ್ಯ +, ಪರಿಣಾಮ. ಶರೀರ, [ದೇಹ * ] ವೇದನೆ. ಮತ್ತು ವಿಕ್ರಿಯೆ ದ ಕೂಡಿರುತ್ತಾರೆ.

ಪರಿಣಾಮ—ಸ್ಪರ್ಶ, ರಸ, ಗಂಧ ವರ್ಣ ಮತ್ತು ಶಬ್ದಗಳ ಪರಿಣಾಮವು.

---

* ಯೋಜನವೆಂದರೆ ಎರಡು ಸಾವಿರ ಕೋಶಗಳು. ಕೋಶ ಎರಡು ಮೈಲುಗಳು.

## ಪರಸ್ಪರೋದೀರಿತದುಃಖಾಃ ॥ ೪ ॥

ಅರ್ಥ—ನಾರಕೀ ಜನರು ಪರಸ್ಪರವಾಗಿ ತಮ್ಮಲ್ಲಿ ದುಃಖವನ್ನುಂಟು ಮಾಡಿಕೊಳ್ಳುತ್ತಾರೆ. ನಾರಕೀಯರು ನಾಯಿಯಂತೆ ಪರಸ್ಪರ ದ್ವೇಷದಿಂದ ಕರ್ಮಜನ್ಮದ ವೈರಗಳನ್ನು ಸ್ಮರಿಸಿ ಒಬ್ಬರಿಗೊಬ್ಬರು ದುಃಖವನ್ನು ಕೊಡುತ್ತಿರುತ್ತಾರೆ.

---

+ ಇದು ದ್ರವ್ಯಲೇಶ್ಯೆಯ ವರ್ಣನೆಯು. ಇದು ನಾರಕೀಜೀವದ ಆಯುಷ್ಯದ ಕೊನೆಯವರೆಗೆ ಇರುತ್ತದೆ. ಆದರೆ ಭಾವಲೇಶ್ಯೆಯು ಅಂತರ್ಮುಹೂರ್ತದಲ್ಲಿ ಬದಲಾಯಿಸುತ್ತದೆ. ಆದುದರಿಂದ ಅದರ ವರ್ಣನೆಯನ್ನು ಮಾಡಲಾಗುವುದಿಲ್ಲ. ಮೊದಲನೆ ಮತ್ತು ಎರಡನೇ ನರಕ ಭೂಮಿಗಳಲ್ಲಿ ಕಾಪೋತಲೇಶ್ಯೆಯೂ, ಮೂರನೆ ಭೂಮಿಯ ಮೇಲುಭಾಗದಲ್ಲಿ ಕಾಪೋತಲೇಶ್ಯೆ ಮತ್ತು ಅದರ ಕೆಳಭಾಗದಲ್ಲಿ ನೀಲಲೇಶ್ಯೆಯೂ, ನಾಲ್ಕನೇ ಭೂಮಿಯಲ್ಲಿ ನೀಲಲೇಶ್ಯೆಯೂ, ಐದನೇ ನರಕ ಭೂಮಿಯಲ್ಲಿ ಮೇಲ್ಗಡೆಯಲ್ಲಿ ನೀಲಲೇಶ್ಯೆ ಮತ್ತು ಅದರ ತಲಭಾಗದಲ್ಲಿ ಕೃಷ್ಣಲೇಶ್ಯೆಯೂ, ಹಾಗೇಸೆಯೇ ಆರನೇ ಮತ್ತು ಏಳನೇ ನರಕಭೂಮಿಗಳಲ್ಲಿ ಪರಮಕೃಷ್ಣಲೇಶ್ಯೆ ಇರುತ್ತದೆ.

* ದೇಹ—ಮೊದಲನೇ ನರಕದಲ್ಲಿ ದೇಹದಎತ್ತರವು ೭ ಧನಸ್ಸು, ೩ ಹಸ್ತ ೭ ಅಂಗುಲ ಇವೆ. ಕೆಳಗಿನ ನರಕಗಳಲ್ಲಿ ಕ್ರಮವಾಗಿ ಎರಡರಷ್ಟು ಪ್ರಮಾಣದಿಂದ ಬೆಳೆಯುತ್ತದೆ. ಅಂದರೆ ೨ ನೇ ನರಕದಲ್ಲಿ ೧೫ ಧನುಸ್ಸು ೬ ಹಸ್ತ ಮತ್ತು ೧೫ ಅಂಗುಲ. ವೇದನೆ— ೧ ನೇ ೨ ನೇ ೩ ನೇ ಮತ್ತು ೪ ನೇ ನರಕಗಳಲ್ಲಿ ಕೇವಲ ಉಷ್ಣವೇದನೆಯೂ, ೫ ನೇ ನರಕದ ಮೇಲುಭಾಗದಲ್ಲಿ ಉಷ್ಣವೇದನೆಯೂ ಕೆಳಭಾಗದಲ್ಲಿ ಶೀತವೇದನೆಯೂ, ಹಾಗೇನೇಯೇ ೬ ನೇ ಮತ್ತು ೭ ನೇ ನರಕಗಳಲ್ಲಿ ಮಹಾಶೀತ ವೇದನೆಯೂ ಇದೆ.

ಮತ್ತು

## ಸಂಕ್ಲಿಷ್ಟಾಸುರೋದೀರಿತದುಃಖಾಶ್ಚ ಪ್ರಾಕ್ ಚತುರ್ಥ್ಯಾಃ ॥ ೫ ॥

ಅರ್ಥ—ಮೂರನೇ ನರಕದ ವರೆಗೆ ಇರುವ ನಾರಕೀಯರು ಸಂ ಪರಿಣಾಮದಿಂದ ಕೂಡಿದ ಅಂಬಾರೀಷ ಜಾತಿಯ ಅಸುರಕುಮಾರ ದೇ ಗಳಿಂದಲೂ ದುಃಖವನ್ನು ಪಡೆಯುತ್ತಾರೆ. ಈ ಅಸುರ ಕುಮಾರರು ನಾ ಯರ ಪೂರ್ವಭವದ ವೈರವನ್ನು ನೆನಪು ಮಾಡಿಸಿ ಪರಸ್ಪರ ಜಗಳ ಮಾ ತ್ತಾರೆ. ಅವರ ಜಗಳದಿಂದಾಗುವ ದುಃಖವನ್ನು ನೋಡಿ ಆನಂದಿತರಾಗುತ್ತಾ ಅವರಿಗೆ ಈ ರೀತಿಯ ಕಷಾಯಗಳ ಉದಯವಿರುತ್ತದೆ.

ನರಕಗಳಲ್ಲಿರುವ ಉತ್ಕೃಷ್ಟ ಆಯುಷ್ಯ.

## ತೇಷ್ವೇಕತ್ರಿಸಪ್ತದಶ ಸಪ್ತದಶದ್ವಾವಿಂಶತಿ ತ್ರಯ ಸ್ತ್ರಿಂಶತ್ಸಾಗರೋಪಮಾ ಸತ್ತ್ವಾನಾಂ ಪರಾಸ್ಥಿತಿಃ ॥೬

ಅರ್ಥ—ಆ ನರಕಗಳಲ್ಲಿ ನಾರಕೀ ಜೀವಗಳ ಉತ್ಕೃಷ್ಟ ಸ್ಥಿತಿಯು ಕ್ರ ವಾಗಿ ೧ ನೇ ನರಕದಲ್ಲಿ ೧ ಸಾಗರ, ೨ ನೇ ನರಕದಲ್ಲಿ ೩ ಸಾಗರ, ೩ ನೇ ದಲ್ಲಿ ೭ ಸಾಗರ ೪ ನೇ ನರಕದಲ್ಲಿ ೧೦ ಸಾಗರ, ೫ ನೇ ನರಕದಲ್ಲಿ ೧೭ ಸಾ ೬ ನೇ ನರಕದಲ್ಲಿ ೨೨ ಸಾಗರ, ಮತ್ತು ೭ ನೇ ನರಕದಲ್ಲಿ ೩೩ ಸಾಗರ

ವಿಶೇಷ-—ನರಕದಲ್ಲಿ ಭಯಂಕರ ದುಃಖವಿದ್ದರೂ ಅಕಾಲದಲ್ಲಿ ಮೃ ಆಗುವುದಿಲ್ಲ. ನಾನು ಸಾಯಬೇಕೆಂದು ನಾರಕೀಯು ಇಚ್ಛೆ ಮಾಡಿದರೂ ಅ ಸಾಯುವುದಿಲ್ಲ. ಇದೇ ಅಲ್ಲಿಯ ವಿಶೇಷತೆ.

ಈ ರೀತಿಯಾಗಿ ಅಧೋಲೋಕದ ವರ್ಣನೆಯು ಮಾಡಲಾಯಿತು. ಇ ವಿಶೇಷರೀತಿಯಾಗಿ ತಿಳಿಯಬೇಕೆಂದಿರುವುದಾದರೆ ಸರ್ವಾರ್ಥಸಿದ್ಧಿ ವಾರ್ತಿಕ ಮತ್ತು ಶ್ಲೋಕವಾರ್ತಿಕ ಮೊದಲಾದ ಗ್ರಂಥಗಳನ್ನು ಓದಿನೋಡಬೇ

# ನರಕದ ವ್ಯವಸ್ಥೆಯ ಚಿತ್ರ

| ನಂಬರು | ಪೃಥ್ವಿ | ಪ್ರಸ್ತಾರ | ಬಿಲ | ಶರೀರದ ಎತ್ತರ | ಲೇಶ್ಯೆ | ವೇದನೆ | ಉತ್ಕೃಷ್ಟ ಆಯು | ಜಘನ್ಯ ಆಯು |
|---|---|---|---|---|---|---|---|---|
| ೧ | ರತ್ನಪ್ರಭಾ | ೧೩ | ೩೦೦೦೦೦೦ | ೭ ಧನುಸ್ಸು ೩ ಹಸ್ತ ೬ ಅಂಗುಲ | ಜಘನ್ಯ ಕಾಪೋತ | ಉಷ್ಣ ವೇದನೆ | ೧ ಸಾಗರ | ೧೦ ಸಾವಿರ ವರ್ಷ |
| ೨ | ಶರ್ಕರಾ ಪ್ರಭಾ | ೧೧ | ೨೫೦೦೦೦೦ | ೧೫ ಧನುಸ್ಸು ೨ ಹಸ್ತ ೧೨ ,, | ಮಧ್ಯಮ ಕಾಪೋತ | ,, | ೩ ಸಾಗರ | ೧ ಸಾಗರ |
| ೩ | ವಾಲುಕಾ ,, | ೯ | ೧೫೦೦೦೦೦ | ೩೧ ಧನುಸ್ಸು ೧ ಹಸ್ತ | ಉತ್ಕೃಷ್ಟ ,, ಜಘನ್ಯ ನೀಲ | ,, ,, | ೭ ಸಾಗರ | ೩ ಸಾಗರ |
| ೪ | ಪಂಕಪ್ರಭಾ | ೭ | ೧೦೦೦೦೦೦ | ೬೨ ಧನುಸ್ಸು ೨ ಹಸ್ತ | ಮಧ್ಯಮ ನೀಲ | ,, | ೧೦ ಸಾಗರ | ೭ ಸಾಗರ |
| ೫ | ಧೂಮಪ್ರಭಾ | ೫ | ೩೦೦೦೦೦ | ೧೨೫ ಧನುಸ್ಸು | ಉತ್ಕೃಷ್ಟ ನೀಲ ಜಘನ್ಯ ಕೃಷ್ಣ | ಉಷ್ಣ ಶೀತ | ೧೭ ಸಾಗರ | ೧೦ ಸಾಗರ |
| ೬ | ತಮಃಪ್ರಭಾ | ೩ | ೯೯೯೯೫ | ೨೫೦ ಧನುಸ್ಸು | ಮಧ್ಯಮ ಕೃಷ್ಣ | ಶೀತ | ೨೨ ಸಾಗರ | ೧೭ ಸಾಗರ |
| ೭ | ಮಹಾತಮಃ | ೧ | ೫ | ೫೦೦ ಧನುಸ್ಸು | ಉತ್ಕೃಷ್ಟ ಕೃಷ್ಣ | ಶೀತ | ೩೩ ಸಾಗರ | ೨೨ ಸಾಗರ |

## ಮಧ್ಯಲೋಕದ ವರ್ಣನೆ

### ಅದರಲ್ಲಿ ಕೆಲವು ದ್ವೀಪ ಮತ್ತು ಸಮುದ್ರಗಳ ಹೆಸರು

**ಜಂಬೂದ್ವೀಪಲವಣೋದಾದಯಃ ಶುಭನಾಮಾನ: ದ್ವೀಪಸಮುದ್ರಾಃ ॥ ೭ ॥**

ಈ ಮಧ್ಯಮ ಲೋಕದಲ್ಲಿ ಶುಭವಾದ ಹೆಸರುಳ್ಳ ಜಂಬೂ ಮೊದಲಾದ ದ್ವೀಪಗಳೂ, ಮತ್ತು ಲವಣಸಮುದ್ರ ಮೊದಲಾದ ಸ ಗಳೂ ಇವೆ. ಅಂದರೆ ಮಧ್ಯಮ ಲೋಕದಲ್ಲಿ ಅಸಂಖ್ಯಾತ ದ್ವೀಪ ಸ ಗಳಿವೆ.

ಭಾವಾರ್ಥ– ಮಧ್ಯಮಲೋಕದ ಸರಿಯಾದ ಮಧ್ಯ ಭಾಗದಲ್ಲಿ ಎಲ್ಲಾ ದ್ವೀಪ ಮತ್ತು ಸಮುದ್ರಗಳ ಮಧ್ಯದಲ್ಲಿ ತಟ್ಟೆಯ ಆಕಾರದ ಜಂಬೂದ್ವೀಪವೆಂಬ ದ್ವೀಪವಿದೆ. ಇದನ್ನು ನಾಲ್ಕುಕಡೆಯಿಂದಲೂ ಸುತ್ತ ಲವಣಸಮುದ್ರವಿದೆ. ಇದರ ನಂತರ ಧಾತಕೀಖಂಡವೆಂಬ ದ್ವೀಪವೂ, ಕಾಲೋದಧಿ ಸಮುದ್ರವೂ ಇದೆ. ಇದನ್ನು ಸುತ್ತುಗಟ್ಟಿ ಪುಷ್ಕರವರ ದ್ವೀಪವೂ ಮತ್ತು ಪುಷ್ಕರವರ ಸಮುದ್ರ ವೂ ಇವೆ. ಇವೆಲ್ಲಾಸೇರಿ ವರೆ ದ್ವೀಪವೆಂದು ಹೇಳಲ್ಪಡುತ್ತವೆ. ಇದರ ನಂತರದಲ್ಲಿರುವ ೮ ನೇ ದ್ವೀ ನಂದೀಶ್ವರದ್ವೀಪವೆಂದೂ, ೧೧ ನೇ ದ್ವೀಪವು ರುಚಕವರದ್ವೀಪವೆಂದೂ ಲಾಗುತ್ತದೆ. ಹಾಗೇನೆಯೇ ಐದನೇ ಸಮುದ್ರವು ಕ್ಷೀರೋದ ಸಮುದ್ರ ತ್ತದೆ. ಹೀಗೆ ಅಸಂಖ್ಯಾತ ದ್ವೀಪ ಸಮುದ್ರಗಳಿಂದ ಮಧ್ಯಮ ಲೋ ಕಂಗೊಳಿಸುತ್ತದೆ. ಮಧ್ಯಮ ಲೋಕದ ಕೊನೆಯ ದ್ವೀಪವು ಸ್ವಯಂ ರಮಣ ದ್ವೀಪವೆಂದೂ ಸಮುದ್ರವು ಸ್ವಯಂಭೂರಮಣ ಸಮುದ್ರ ಹೆಸರುವಾಸಿಯಾಗಿರುವುದು.

### ದ್ವೀಪ ಮತ್ತು ಸಮುದ್ರಗಳ ವಿಸ್ತಾರ ಮತ್ತು ಆಕಾರ

**ದ್ವಿರ್ದ್ವಿರ್ವಿಷ್ಕಂಭಾಃ ಪೂರ್ವಪೂರ್ವಪರಿಕ್ಷೇಪಿಣೋ ವಲಯಾಕೃತಯಃ ॥ ೮ ॥**

ಅರ್ಥ— ಪ್ರತಿಯೊಂದು ದ್ವೀಪ ಮತ್ತು ಸಮುದ್ರಗಳು ದ್ವೀಪ ಮತ್ತು ಸಮುದ್ರಗಳಿಂದ ಎರಡರಷ್ಟು ವಿಸ್ತಾರವಾಗಿಯೂ

ಕ್ಕೊಂದು ಸುತ್ತು ಹಾಕಲ್ಪಟ್ಟಿದ್ದಾಗಿಯೂ, ಹಾಗೇನೆಯೇ ಬಳೆಯಂತೆ ದುಂಡಾಕಾರವಾಗಿಯೂ ಇರುವವು. ಅಂದರೆ ಮೊದಲಿನ ದ್ವೀಪದ ವಿಸ್ತಾರದಿಂದ ಎರಡನೆಯ ದ್ವೀಪದ ಸಮುದ್ರದ ವಿಸ್ತಾರವು ದ್ವಿಗುಣಿತವಾಗಿದೆ. ಹಾಗೇನೆಯೇ ಮುಂದಿನ ದ್ವೀಪದ ವಿಸ್ತಾರವು ಅವರಿಂದ ದ್ವಿಗುಣಿತವಾಗಿದೆ.

### ಜಂಜೂದ್ವೀಪದ ವಿಸ್ತಾರ ಮತ್ತು ಆಕಾರ

## ತನ್ಮಧ್ಯೇ ಮೇರುನಾಭಿರ್ವೃತ್ತೋ ಯೋಜನಶತಸಹಸ್ರವಿಷ್ಕಂಭೋ ಜಂಬೂದ್ವೀಪಃ ॥ ೯ ॥

ಅರ್ಥ—ಮೇಲೆ ಬರೆದ ಅಸಂಖ್ಯಾತ ದ್ವೀಪ ಮತ್ತು ಸಮುದ್ರಗಳ ಮಧ್ಯದಲ್ಲಿ ಸುದರ್ಶನ ಎಂಬ ಮೇರು ಪರ್ವತವೇ ನಾಭಿಯಂತಿದ್ದು, ದುಂಡಾಕಾರವಾದ ಮತ್ತು ೧ ಲಕ್ಷ ಯೋಜನ ವಿಸ್ತಾರವಾಹ ಜಂಬೂದ್ವೀಪವಿದೆ.

ಭಾವಾರ್ಥ—ಜಂಬೂದ್ವೀಪದ ಮಧ್ಯದಲ್ಲಿ ಎಲ್ಲಾ ಮೇರು ಪರ್ವತಗಳಿಗಿಂತಲೂ ದೊಡ್ಡದಾದ "ಸುದರ್ಶನ" ಎಂಬ ಹೆಸರುಳ್ಳ ಮೇರು ಪರ್ವತವಿದೆ. ಈ ಪರ್ವತದ ಅಡಿಯು ೧ ಸಾವಿರ ಯೋಜನ ಪ್ರಮಾಣವು. ಇದು ರತ್ನ ಪ್ರಭೆ ಎಂಬ ಮೊದಲಿನ ನರಕಭೂಮಿಯು ಪರ್ಯಂತರವಿದೆ. ಈ ಭೂಮಿಯು ಚಿತ್ರು ಭೂಮಿ ಎಂದು ಕರೆಯಲಾಗುತ್ತದೆ. ಮತ್ತು ಇದು ೯೯ ಸಾವಿರ ಯೋಜನ ಎತ್ತರವಾಗಿಯೂ ಹಾಗೇನೆಯೇ ೪೦ ಯೋಜನ ವಿಸ್ತಾರವುಳ್ಳ ಚೂಲಿಕೆ [ ತುದಿ] ಯಿಂದ ಕೂಡಿಯೂ ಇದೆ. ಅಕೃತ್ರಿಮ ವಸ್ತುಗಳ ಪ್ರಮಾಣ ಮಹಾಯೋಜನದಿಂದ ಆಳೆಯುಬೇಕಾಗುವುದು. ಜಂಬೂದ್ವೀಪದ ಪರಿಧಿಯು [ ಸಂತ್ತಳತೆಯು ] ೩ ಲಕ್ಷ ೧೬ ಸಾವಿರ ೨೨೭ ಯೋಜನ ಮೂರು ಕ್ರೋಶ ೧೨೮ ಧನುಸ್ಸು ಮತ್ತು ೧೩॥ ಅಂಗುಲಕ್ಕಿಂತಲೂ ಸ್ವಲ್ಪ ಹೆಚ್ಚಾಗಿರುವುದು "ತ್ರಿಗುಣಾಃ ಪರಿಧಿಃ" ಎಂಬ ಉಲ್ಲೇಖವಿದೆ.

ಜಂಬೂದ್ವೀಪದ ಮಧ್ಯದಲ್ಲಿರುವ ಕ್ಷೇತ್ರವು ವಿದೇಹ ಕ್ಷೇತ್ರವು, ಇದೇ ಕ್ಷೇತ್ರದ ಮಧ್ಯದಲ್ಲಿ ಮೇರುಪರ್ವತವಿರುವದು. ಈ ಪರ್ವತದ ಉತ್ತರದಿಕ್ಕಿನ ಕಡಗ ದೇವಕುರು ಎಂಬ ಭೋಗಭೂಮಿಯಲ್ಲಿ ಅನಾದಿ ನಿಧನವಾದ ಪೃಥ್ವೀ

ಕಾಯಿಕವು ಮತ್ತು ಅಕೃತ್ರಿಮ ರೂಪವೂ ಆದ ಜಂಬೂ [ನೇರಳೆ]
ವಿಶಾಲವಾದ ವೃಕ್ಷವಿದೆ. ಇದರಿಂದಲೇ ಈ ದ್ವೀಪದ ಹೆಸರು "ಜಂಬೂ
ಎಂದು ಕರೆಯಲಾಗುತ್ತದೆ. ಈ ದ್ವೀಪದಲ್ಲಿ ಭರತಮೊದಲಾದ ೭
ಗಳೂ, ಗಂಗಾ-ಸಿಂಧು ಮೊದಲಾದ ೧೪ ನದಿಗಳೂ, ಹಿಮಾಲಯ
ಲಾದ ೬ ಕುಲಾಚಲ ಪರ್ವತಗಳೂ, ಪದ್ಮ ಮೊದಲಾದ ಆರು ಸ
ಗಳೂ ಅಕೃತ್ರಿಮ ರೂಪವಾಗಿ ನಿರಂತರವೂ ಇರುತ್ತವೆ. ಭರತ
ಮತ್ತು ವಿದೇಹಕ್ಷೇತ್ರ ಅಂದರೆ ಪೂರ್ವ ವಿದೇಹ ಮತ್ತು ಅಪರ ವಿದೇ
೯ ದೇವಕುರು ಉತ್ತರಕುರುಗಳೆಂಬ ಭೋಗಭೂಮಿಗಳ ಭಾಗವನ್ನು
ಕರ್ಮ ಭೂಮಿಗಳಾಗಿವೆ. ಹೈಮವತ ಮತ್ತು ಹೈರಣ್ಯ ಕ್ಷೇತ್ರಗಳು
ಭೋಗ ಭೂಮಿಗಳೂ, ಹರಿ ಮತ್ತು ರಮ್ಯಕ ಕ್ಷೇತ್ರಗಳು ಮಧ್ಯಮ
ಭೂಮಿಗಳಾಗಿಯೂ, ಮತ್ತು ದೇವಕುರು ಉತ್ತರ ಕುರುಗಳು
ಭೋಗಭೂಮಿಗಳಾಗಿಯೂ ಇವೆ. ಭರತ ಕ್ಷೇತ್ರವು ಗಂಗಾ ಸಿಂಧು
ಳಿಂದಾಗಿ ಆರು ಖಂಡಗಳಲ್ಲಿ ವಿಭಾಗಿಸಲ್ಪಟ್ಟಿದೆ. ಈ ಕ್ಷೇತ್ರದ ಮ
ವಿಜಯಾರ್ಧ ಎಂಬ ಪರ್ವತವಿದೆ. ಇದು ಕೂಡ ಅಕೃತ್ರಿಮ ಪರ್ವ
ಇದರ ಮೇಲುಗಡೆ ಅಕೃತ್ರಿಮ ಜಿನ ಚೈತ್ಯಾಲಯಗಳಿವೆ. ಭರತ ಕ್ಷೇ
ವಿಸ್ತಾರವು ೫೨೬ ಯೋಜನ ಮತ್ತು ೧ ಯೋಜನದ ೧೯ನೆಯ ಭಾ
ಆರು ಭಾಗವಾಗಿದೆ. ಇದರ ಆಕಾರ ಅರ್ಧಚಂದ್ರಾಕಾರವಿದೆ. ಮ
ಕಡೆಯೂ ಲವಣ ಸಮುದ್ರವಿದೆ. ಉತ್ತರದಲ್ಲಿ ಹಿಮಾಲಯ ಪರ್ವ
ಮಧ್ಯದಲ್ಲಿ ಆರ್ಯ ಖಂಡವಿದೆ. ಇಂದು ನಮ್ಮೆಲ್ಲರ ನಿವಾಸವು ಈ
ಖಂಡದಲ್ಲಿಯೇ ಇರುವುದು. ಇಲ್ಲಿಯೇ ತೀರ್ಥಂಕರ ಚಕ್ರವರ್ತಿ
ಲಾದ ಮಹಾಪುರುಷರ ಜನ್ಮವಾಗುತ್ತದೆ. ಉಳಿದ ೫ ಖಂಡಗಳು ಮ್ಲೇ
ಖಂಡಗಳು. ಈ ಆರು ಖಂಡಗಳನ್ನು ಯಾರು ಜಯಿಸುವರೋ
ಚಕ್ರವರ್ತಿಗಳು. ಮೊದಲನೇ ಚಕ್ರವರ್ತಿಯ ಹೆಸರು ಭರತ ಚಕ್ರ
ಎಂದಿರುವುದರಿಂದ ಈ ಕ್ಷೇತ್ರದ ಹೆಸರೂ ಕೂಡ ಭರತಕ್ಷೇತ್ರವೆಂದು
ವಾಗಿದೆ. ಈ ಕ್ಷೇತ್ರವು ಕರ್ಮಭೂಮಿಯಾಗಿರುವುದರಿಂದ ಇಲ್ಲಿರುವ
ಷ್ಯರು ೭ ನೇ ನರಕಪರ್ಯಂತದವರೆಗೆ ಹೋಗುವ ಪಾಪ ಕರ್ಮ
ಮತ್ತು ಸಿದ್ಧಶಿಲೆ ಅಂದರೆ ಮೋಕ್ಷಸ್ಥಾನವನ್ನು ಪಡೆಯುವ ಸಂಪೂರ್ಣ
ನಾಶವನ್ನು ಈ ಕ್ಷೇತ್ರದಲ್ಲಿ ಮಾಡುತ್ತಾರೆ. ಮತ್ತು ಕಾಲಾನು

ಈ ಕ್ಷೇತ್ರದ ಉತ್ಕರ್ಷ ಮತ್ತು ಅಪಕರ್ಷಗಳಾಗುತ್ತವೆ. ಮುಖ್ಯವಾಗಿ ಕಾಲಭೇದವು ಉತ್ಸರ್ಪಿಣೀ ಮತ್ತು ಅವಸರ್ಪಿಣೀ ಎಂಬುದಾಗಿದೆ. ಈಗ ಅವಸರ್ಪಿಣಿ ಕಾಲವು ನಡೆಯುತ್ತಿದೆ. ಅದರಲ್ಲಿ ಸುಷಮಾ ಮೊದಲಾದ ಆರು ಭೇದಗಳಲ್ಲಿ ಈಗ ೫ ನೇ ಭೇದವಾದ ದುಃಷಮ ಎಂಬ ಕಾಲವು ನಡೆಯುತ್ತಿದೆ. ಈ ಕಾಲವು ೨೧ ಸಾವಿರ ವರ್ಷಗಳ ಪರಿಯಂತರ ಇರುವದು, ಕಾಲಚಕ್ರಕ್ಕೆ ಅನುಸಾರವಾಗಿ ತೀರ್ಥಂಕರ ಮೊದಲಾದ ಮಹಾ ಪುರುಷರ ಜನ್ಮವಾಗುತ್ತದೆ. ಅಂತಿಮ ತೀರ್ಥಂಕರರು ಮುಕ್ತಿನಂದಿ. ಈ ವರೆಗೆ ಸುಮಾರು ಎರಡೂವರೆ ಸಾವಿರ ವರ್ಷಗಳಾಗುತ್ತಾ ಬಂದಿವೆ. ತೀರ್ಥಂ ಕರರು ಧರ್ಮೋಪದೇಶ ಮಾಡುವವರಾಗಿದ್ದು ಅವರು ಸಂಸಾರಿ ಜೀವಗಳ ಹಿತವನ್ನು ಬಯಸುತ್ತಾರೆ. ಈಗ ಮಹಾವೀರ ಸ್ವಾಮಿಯ ತೀರ್ಥ [ಉಪ ದೇಶ] ವು ಭರತಕ್ಷೇತ್ರದಲ್ಲಿ ಪ್ರಚಲಿತವಾಗಿರುವುದು. ನಾವೆಲ್ಲ ಭರತಕ್ಷೇತ್ರದಲ್ಲಿ ರುವುದರಿಂದ ಆ ಉಪದೇಶಾನುಸಾರ ನಡೆದು ತನ್ನ ಹಿತವನ್ನು ಮಾಡಿ ಕೊಂಡು ಆ ಮೂಲಕ ಕ್ಷೇತ್ರದ ಹಿತವನ್ನು ಬಯಸಬೇಕು.

ಜಂಬೂದ್ವೀಪದಲ್ಲಿರುವ ಏಳು ಕ್ಷೇತ್ರಗಳ ಹೆಸರು

**ಭರತಹೈಮವತಹರಿವಿದೇಹರಮ್ಯಕಹೈರಣ್ಯವತೈರಾವ ತವರ್ಷಾಃ ಕ್ಷೇತ್ರಾಣಿ ॥ ೧೦ ॥**

ಅರ್ಥ—ಈ ಜಂಬೂದ್ವೀಪದಲ್ಲಿ ಭರತ, ಹೈಮವತ, ಹರಿ, ವಿದೇಹ, ರಮ್ಯಕ, ಹೈರಣ್ಯವತ, ಮತ್ತು ಐರಾವತಗಳೆಂಬ ಏಳು ಕ್ಷೇತ್ರಗಳಿವೆ.

ಈ ಕ್ಷೇತ್ರಗಳ ವಿಭಾಗವನ್ನು ಮಾಡುತ್ತಿರುವ ಆರು ಕುಲಾಚಲ ಪರ್ವತಗಳ ಹೆಸರು.

**ತದ್ವಿಭಾಜಿನಃ ಪೂರ್ವಾಪರಾಯತಾ ಹಿಮ ವನ್ಮಹಾಹಿಮವನ್ನಿಷಧನೀಲರುಕ್ಮಿಶಿಖರಿಣೋ ವರ್ಷ ಧರಪರ್ವತಾಃ ॥ ೧೧ ॥**

ಅರ್ಥ—ಈ ಮೇಲೆಬರೆದ ಏಳು ಕ್ಷೇತ್ರಗಳನ್ನು ವಿಂಗಡಿಸುವ ಮತ್ತು ಪೂರ್ವ-ಪಶ್ಚಿಮಗಳ ದಿಕ್ಕುಗಳ ಕಡೆಗೆ ಉದ್ದಾಕಾರವಾಗಿ ವ್ಯಾಪಿಸಿರುವ ಹಿಮ

ವನ್, ಮಹಾಹಿಮವನ್, ನಿಷಧ, ನೀಲ, ರುಕ್ಮಿ ಮತ್ತು ಶಿಖರಿ ಎಂಬ
ಕುಲಾಚಲ ಪರ್ವತಗಳಿವೆ. ಸೂತ್ರದಲ್ಲಿರುವ ವರ್ಷಶಬ್ದದ ಅರ್ಥವು
ವೆಂದು ತಿಳಿಯಬೇಕು.

ಕುಲಾಚಲ ಪರ್ವತಗಳ ವರ್ಣ

ಹೇಮಾರ್ಜುನತಪನೀಯವೈಡೂರ್ಯರಜತ
ಹೇಮಮಯಾಃ ॥ ೧೨ ॥

ಅರ್ಥ—ಮೇಲೆ ಬರೆದ ಪರ್ವತಗಳು ಕ್ರಮವಾಗಿ ಹಿಂದಿನ ಹಿಮ
ಪರ್ವತವು ಬಂಗಾರದ ವರ್ಣಮಯವೂ, ಮಹಾಹಿಮವಾನ್ ಪ
ಬೆಳ್ಳಿಯರೂಪವೂ, ನಿಷಧ ಪರ್ವತವು ಪುತ್ಥಳಿ ಬಂಗಾರದ ವರ್ಣದಂ
ನೀಲ ಪರ್ವತವು ವಜ್ರದ ಹೊಳಪಿನಂತೆಯೂ, ರುಕ್ಮಿ ಪರ್ವತವು ಬೆ
ಕಾಂತಿಯಂತೆಯೂ ಮತ್ತು ಶಿಖರಿ ಪರ್ವತವು ಬಂಗಾರದ ಕಾಂತಿಯಂ
ಇದೆ.

ಕುಲಾಚಲ ಪರ್ವತದ ಆಕಾರ

ಮಣಿವಿಚಿತ್ರಪಾರ್ಶ್ವಾ ಉಪರಿ ಮೂಲೇ
ತುಲ್ಯವಿಸ್ತಾರಾಃ ॥ ೧೩ ॥

ಅರ್ಥ—ಈ ಪರ್ವತಗಳ ಬುಡ, ಮಧ್ಯ ಮತ್ತು ಮೇಲು ಭಾ
ಗೋಡೆಯಂತೆ ಸಮಾನ ಆಕಾರದಲ್ಲಿವೆ.

ಕುಲಾಚಲ ಪರ್ವತದಲ್ಲಿರುವ ಸರೋವರಗಳ ಹೆಸರು

ಪದ್ಮಮಹಾಪದ್ಮತಿಗಿಂಛಕೇಸರಿಮಹಾಪುಂಡ
ಪುಂಡರೀಕಾ ಹ್ರದಾಸ್ತೇಷಾಮುಪರಿ ॥ ೧೪ ॥

ಅರ್ಥ- ಮೇಲೆ ಬರೆದ ಪರ್ವತಗಳ ಮೇಲೆ ಕ್ರಮವಾಗಿ, ಪದ್ಮ,
ಪದ್ಮ, ತಿಗಿಂಛ, ಕೇಸರಿ, ಮಹಾಪುಂಡರೀಕ ಮತ್ತು ಪುಂಡರೀಕಗಳೆಂ
ಸರೋವರಗಳು ಇವೆ.

## ಮೊದಲನೇ ಸರೋವರದ ಪ್ರಮಾಣ

### ಪ್ರಥಮೋ ಯೋಜನಸಹಸ್ರಾಯಾಮಸ್ತದರ್ಧ-ವಿಷ್ಕಂಭೋ ಹ್ರದಃ ॥ ೧೫ ॥

ಅರ್ಥ—ಮೊದಲನೆಯ ಪದ್ಮ ಸರೋವರವು ಒಂದು ಸಾವಿರ ಯೋಜನ ಉದ್ದವೂ ಮತ್ತು ಅದರ ಅರ್ಧ ಅಂದರೆ ಐನೂರು ಯೋಜನ ಅಗಲವೂ ಇರುವುದು.

ಇದರ ಆಳವೆಷ್ಟು ?

### ದಶಯೋಜನಾವಗಾಹಃ ॥ ೧೬ ॥

ಅರ್ಥ:—ಪದ್ಮ ಸರೋವರದ ಆಳವು ೧೦ ಯೋಜನವಾಗಿದೆ.

### ತನ್ಮಧ್ಯೇ ಯೋಜನಂ ಪುಷ್ಕರಂ ॥ ೧೭ ॥

ಅರ್ಥ—ಆ ಪದ್ಮಸರೋವರದ ಮಧ್ಯದಲ್ಲಿ ೧ ಯೋಜನ ವಿಸ್ತಾರವುಳ್ಳ ಕಮಲದ ಪುಷ್ಪವು ಇದೆ.

## ಮಹಾಪದ್ಮ ಮೊದಲಾದ ಸರೋವರಗಳೂ ಮತ್ತು ಅವುಗಳಲ್ಲಿರುವ ಕಮಲಗಳ ಪ್ರಮಾಣಗಳು

### ತದ್ವಿಗುಣದ್ವಿಗುಣಾ ಹ್ರದಾಃ ಪುಷ್ಕರಾಣಿ ಚ ॥ ೧೮ ॥

ಅರ್ಥ—ಮುಂದಿರುವ ಮಹಾಪದ್ಮ ಮತ್ತು ತಿಗಿಂಛ ಸರೋವರಗಳೂ ಮತ್ತು ಅದರಲ್ಲಿರುವ ಕಮಲಗಳೂ ಎರಡೆರಡು ಪಾಲು ಹೆಚ್ಚು ವಿಸ್ತಾರವಾಗಿವೆ. ಈ ಕ್ರಮವು ಮೇಲೆ ಬರೆದ ಸರೋವರದವರೆಗೇನೆಯೇ ಇದೆ. ಉತ್ತರ ಕಡೆಯಲ್ಲಿ ಐರಾವತ ಕ್ಷೇತ್ರದ ಹತ್ತಿರವಿರುವ [illegible] ಪರ್ವತದಿಂದ ತಿಳಿಯಬೇಕು.

ಕಮಲಗಳಲ್ಲಿರುವ ದೇವಿಗಳು.

ತನ್ನಿವಾಸಿನ್ಯೋ ದೇವ್ಯಃ ಶ್ರೀಹ್ರೀಧೃತಿಕೀರ್ತಿ
ಲಕ್ಷ್ಮ್ಯಃ ಪಲ್ಯೋಪಮಸ್ಥಿತಯಃ ಸಸಾಮಾ
ಪರಿಷತ್ಕಾಃ ॥ ೧೯ ।

ಅರ್ಥ—ಒಂದು ಪಲ್ಯ ಆಯುಷ್ಯದಿಂದ ಕೂಡಿದವರಾಗಿ ಸಾ
ಮತ್ತು ಪಾರಿಷದ ಜಾತಿಯ ದೇವತೆಗಳೊಡನೆ ಶ್ರೀ, ಹ್ರೀ, ಧೃತಿ,
ಬುದ್ಧಿ ಮತ್ತು ಲಕ್ಷ್ಮಿ ಎಂಬ ದೇವಿಗಳೂ ಆ ಪದ್ಮ ಮೊದಲಾದ
ವರಗಳಲ್ಲಿರುವ ಕಮಲದಲ್ಲಿ ನಿವಾಸ ಮಾಡುತ್ತಿರುವರು.

೧೪ ಮಹಾನದಿಗಳ ಹೆಸರು.

ಗಂಗಾಸಿಂಧುರೋಹಿದ್ರೋಹಿತಾಸ್ಯಾಹರಿ
ಕಾಂತಾಸೀತಾಸೀತೋದಾನಾರೀನರಕಾಂತಾ ಸು
ರೂಪ್ಯಕೂಲಾರಕ್ತಾರಕ್ತೋದಾಃ ಸರಿತಸ್ತನ್ಮಧ್ಯಗಾ

ಅರ್ಥ—ಗಂಗಾ, ಸಿಂಧು, ರೋಹಿತ, ರೋಹಿತಾಸ್ಯಾ, ಹರಿ
ಕಾಂತಾ, ಸೀತಾ, ಸೀತೋದಾ, ನಾರೀ, ನರಕಾಂತಾ, ಸುವರ್ಣಕೂಲಾ,
ಕೂಲಾ ಮತ್ತು ರಕ್ತಾರಕ್ತೋದಗಳೆಂಬ ೧೪ ಮಹಾನದಿಗಳು ಜಂಬೂ
ದಲ್ಲಿರುವ ಏಳು ಕ್ಷೇತ್ರಗಳ ಮಧ್ಯದಲ್ಲಿ ಹರಿಯುತ್ತಿವೆ. ಪದ್ಮ ಮತ್ತು
ರೀಕ ಸರೋವರಗಳಿಂದ ಮೂರು ಮೂರು ನದಿಗಳೂ ಉಳಿದ ಸ
ಗಳಿಂದ ಎರಡೆರಡು ನದಿಗಳೂ ಹೊರಟಿವೆ. ವಿಶೇಷ ರೂಪವಾ
ಕ್ಷೇತ್ರದಲ್ಲಿ ಗಂಗಾ, ಸಿಂಧೂ, ಹೈಮವತದಲ್ಲಿ ರೋಹಿತ ರೋಹಿತಾ
ಹರಿಕ್ಷೇತ್ರದಲ್ಲಿ ಹರಿತ್-ಹರಿಕಾಂತವೂ, ವಿದೇಹದಲ್ಲಿ ಸೀತಾ-ಸೀ
ನದಿಯೂ, ರಮ್ಯಕದಲ್ಲಿ ಸುವರ್ಣಕೂಲಾ, ಮತ್ತು ರೂಪ್ಯಕೂಲಾ ನದಿ
ಮತ್ತು ಐರಾವತದಲ್ಲಿ, ರಕ್ತಾ ಮತ್ತು ರಕ್ತೋದಾ ನದಿಗಳೂ ಹರಿಯು

## ಸರೋವರಗಳ ಪರಿಚಯದ ಚಿತ್ರ.

| ಕ್ರಮ ಸಂಖ್ಯೆ | ಸರೋವರಗಳ ಹೆಸರು | ಸರೋವರವಿರುವ ಸ್ಥಾನ | ಉದ್ದ | ಅಗಲ | ಆಳ | ಕಮಲ | ದೇವಿ |
|---|---|---|---|---|---|---|---|
| ೧ | ಪದ್ಮ | ಹಿಮವನ್ | ೧೦೦೦ ಯೋಜನ | ೫೦೦ ಯೋಜನ | ೧೦ ಯೋಜನ | ೧ ಯೋಜನ | ಶ್ರೀ |
| ೨ | ಮಹಾಪದ್ಮ | ಮಹಾಹಿಮವನ್ | ೨೦೦೦ ಯೋಜನ | ೧೦೦೦ ಯೋಜನ | ೨೦ ಯೋಜನ | ೨ ಯೋಜನ | ಹ್ರೀ |
| ೩ | ತಿಗಿಂಛ | ನಿಷಧ | ೪೦೦೦ ಯೋಜನ | ೨೦೦೦ ಯೋಜನ | ೪೦ ಯೋಜನ | ೪ ಯೋಜನ | ಧೃತಿ |
| ೪ | ಕೇಸರಿ | ನೀಲ | ೪೦೦೦ ಯೋಜನ | ೨೦೦೦ ಯೋಜನ | ೪೦ ಯೋಜನ | ೪ ಯೋಜನ | ಕೀರ್ತಿ |
| ೫ | ಮಹಾಪುಂಡರೀಕ | ರುಕ್ಮಿ | ೨೦೦೦ ಯೋಜನ | ೧೦೦೦ ಯೋಜನ | ೨೦ ಯೋಜನ | ೨ ಯೋಜನ | ಬುದ್ಧಿ |
| ೬ | ಪುಂಡರೀಕ | ಶಿಖರಿ | ೧೦೦೦ ಯೋಜನ | ೫೦೦ ಯೋಜನ | ೧೦ ಯೋಜನ | ೧ ಯೋಜನ | ಲಕ್ಷ್ಮೀ |

ನದಿಗಳ ಹರಿಯುವಿಕೆಯು ಹೇಗೆ ?

## ದ್ವಯೋರ್ದ್ವಯೋಃ ಪೂರ್ವಾಃ ಪೂರ್ವಗಾಃ ||

ಅರ್ಥ— ಮೇಲಿನ ಎರಡೆರಡು ನದಿಗಳಲ್ಲಿ ಮೊದಲು ಹೆಸರಿರು
ಗಳು ಪೂರ್ವದಿಕ್ಕಿಗೆ ಹರಿಯುತ್ತವೆ. ಉದಾಹರಣೆಗಾಗಿ -ಗಂಗಾ-ಸಿಂ
ಗಂಗಾನದಿಯು. ಹಾಗೆಯೇ ಮೊದಲಿನ ಹೊಳೆಯು ಪೂರ್ವಸಮು
ಹೊಂದುತ್ತದೆ.

ಮತ್ತು

## ಶೇಷಾಸ್ತ್ವಪರಗಾಃ || ೨೨ ||

ಅರ್ಥ—ಉಳಿದ ಏಳು ನದಿಗಳು ಪಶ್ಚಿಮ ದಿಕ್ಕಿನೆಡೆಗೆ ಹರಿ
ಉದಾಹರಣೆಗಾಗಿ—ಗಂಗಾ ಸಿಂಧುಗಳಲ್ಲಿ ಸಿಂಧು ನದಿಯು. ಅಂದು
ಮೊದಲಾದ ಎರಡನೆ ನದಿಗಳು ಪಶ್ಚಿಮ ಸಮುದ್ರವನ್ನು ಕೂಡುತ್ತವ

ಈ ಮಹಾನದಿಗಳ ಪರಿವಾರ ನದಿಗಳು

## ಚತುರ್ದಶನದೀಸಹಸ್ರಪರಿವೃತಾ ಗಂಗಾ-ಸಿಂಧ್ವಾದಯೋ ನದ್ಯಃ || ೨೩ ||

ಅರ್ಥ—ಗಂಗಾ-ಸಿಂಧು ಮೊದಲಾದ ನದಿಗಳು ೧೪ ಸಾವಿರ ಸ
ನದಿಗಳಿಂದ ಕೂಡಿರುತ್ತವೆ. ಈ ಸಹಾಯಕ ನದಿಗಳ ಕ್ರಮವು
ಕ್ಷೇತ್ರದವರೆಗಿರುವುದು. ಈ ಕೆಳಗೆ ಕೊಟ್ಟಿರುವ ಪಟ್ಟಿಯಿಂದ ಸ್ಪಷ್ಟ
ಬೇಕು. ಗಂಗಾ-ಸಿಂಧು ನದಿಗಳಿಗೆ ೧೪ ಸಾವಿರ ಸಹಾಯಕ ನ
ರೋಹಿತ್-ರೋಹಿತಾಸ್ಯಾ ನದಿಗಳಿಗೆ ೨೮ ಸಾವಿರ ನದಿಗಳೂ, ಹ
ಕಾಂತಾ ನದಿಗಳಿಗೆ ೫೬ ಸಾವಿರ ನದಿಗಳೂ. ಸೀತಾ ಸೀತೋದಾ ನದಿ
ಲಕ್ಷ ೧೨ ಸಾವಿರ ನದಿಗಳೂ, ನಾರಿ ನರಕಾಂತಗಳಿಗೆ ೫೬ ಸಾವಿರ ನ
ಸುವರ್ಣಕೂಲಾ ರೂಪ್ಯಕೂಲಾ ನದಿಗಳಿಗೆ ೨೮ ಸಾವಿರ ನದಿಗಳು
ರಕ್ತೋದಾ ನದಿಗಳಿಗೆ ೧೪ ಸಾವಿರ ನದಿಗಳೂ ಪರಿವಾರ ನದಿಗಳಾಗಿ

ಭರತಕ್ಷೇತ್ರದ ವಿಸ್ತಾರ.

## ಭರತಃ ಷಡ್ವಿಂಶತಿಪಂಚಯೋಜನಶತವಿಸ್ತಾರಃ ಷಟ್‌ಚೈಕೋನವಿಂಶತಿಭಾಗಾ ಯೋಜನಸ್ಯ ॥ ೨೪ ॥

ಅರ್ಥ—ಭರತ ಕ್ಷೇತ್ರದ ವಿಸ್ತಾರವು ೫೨೬ ಯೋಜನವೂ ಒಂದು ಯೋಜನದ ೧೯ ನೇ ಭಾಗದಲ್ಲಿ ೬ ಭಾಗದಷ್ಟೂ ಇದೆ.

ಮುಂದಿನ ಕ್ಷೇತ್ರಗಳೂ ಮತ್ತು ಪರ್ವತಗಳು

## ತದ್ದ್ವಿಗುಣದ್ವಿಗುಣವಿಸ್ತಾರಾ ವರ್ಷಧರವರ್ಷಾ ವಿದೇಹಾಂತಾಃ ॥ ೨೫ ॥

ಅರ್ಥ—ವಿದೇಹ ಕ್ಷೇತ್ರದ ವರೆಗಿರುವ ಪರ್ವತ ಮತ್ತು ಕ್ಷೇತ್ರಗಳು ಭರತ ಕ್ಷೇತ್ರದಿಂದ ಎರಡೆರಡು ಪಾಲು ಹೆಚ್ಚೆಚ್ಚು ವಿಸ್ತಾರಗಳುಳ್ಳದ್ದಾಗಿವೆ.

ಭರತಕ್ಷೇತ್ರದ ಉತ್ತರದಿಕ್ಕಿನಕಡೆಯ ಪರ್ವತಗಳೂ ಮತ್ತು ಕ್ಷೇತ್ರಗಳು.

## ಉತ್ತರಾ ದಕ್ಷಿಣತುಲ್ಯಾಃ ॥ ೨೬ ॥

ಅರ್ಥ—ವಿದೇಹಕ್ಷೇತ್ರದ ಉತ್ತರ ದಿಕ್ಕಿನ ಕಡೆಗಿರುವ ನೀಲ ರುಕ್ಮಿ ಮತ್ತು ಶಿಖರಿ ಪರ್ವತಗಳೂ, ರಮ್ಯಕ, ಹೈರಣ್ಯವತ ಮತ್ತು ಐರಾವತ ಕ್ಷೇತ್ರಗಳೂ ಕ್ರಮಾನುಸಾರ ದಕ್ಷಿಣ ದಿಕ್ಕಿನ ಕ್ಷೇತ್ರ ಮತ್ತು ಪರ್ವತಗಳಿಗೆ ಸರಿ ಸಮಾನವಾದ ವಿಸ್ತಾರದಿಂದ ಕೂಡಿದ್ದಾಗಿವೆ.

ಇದರ ಸ್ಪಷ್ಟತೆಯು ಈ ಕೆಳಗಿನಂತಿದೆ.

| ಕ್ಷೇತ್ರ ಮತ್ತು ಪರ್ವತ | ವಿಸ್ತಾರ | ಎತ್ತರ | ಆ[illegible] |
| --- | --- | --- | --- |
| ಭರತ ಕ್ಷೇತ್ರ | ೫೨೬ ೬/೧೯ | × | x |
| ಹಿಮವಾನ್ ಪರ್ವತ | ೧೦೫೨ ೧೨/೧೯ | ೧೦೦ ಯೋಜನ | ೨೫ ಯೋ |
| ಹೈಮವತ ಕ್ಷೇತ್ರ | ೨೧೦೫ ೫/೧೯ | × | x |
| ಮಹಾಹಿಮವಾನ್ | ೪೨೧೦ ೧೦/೧೯ | ೨೦೦ ಯೋಜನ | ೫೦ ಯೋ |
| ಹರಿಕ್ಷೇತ್ರ | ೮೪೨೧ ೧/೧೯ | × | x |
| ನಿಷಧ ಪರ್ವತ | ೧೬೮೪೨ ೨/೧೯ | ೪೦೦ ಯೋಜನ | ೧೦೦ ಯೋ |
| ವಿದೇಹ ಕ್ಷೇತ್ರ | ೩೩೬೮೪ ೪/೧೯ | × | x |
| ನೀಲ ಪರ್ವತ | ೧೬೮೪೨ ೨/೧೯ | ೪೦೦ ಯೋಜನ | ೧೦೦ ಯೋ |
| ರಮ್ಯಕ ಕ್ಷೇತ್ರ | ೮೪೨೧ ೧/೧೯ | × | x |
| ರುಕ್ಮಿ ಪರ್ವತ | ೪೨೧೦ ೧೦/೧೯ | ೨೦೦ ಯೋಜನ | ೫೦ ಯೋ |
| ಹೈರಣ್ಯವತ ಪರ್ವತ | ೨೧೦೫ ೫/೧೯ | × | + |
| ಶಿಖರಿ ಪರ್ವತ | ೧೦೫೨ ೧೨/೧೯ | ೧೦೦ ಯೋಜನ | ೨೫ ಯೋ |
| ಐರಾವತ ಕ್ಷೇತ್ರ | ೫೨೬ ೬/೧೯ | + | + |

## ಭರತ ಮತ್ತು ಐರಾವತ ಕ್ಷೇತ್ರಗಳ ಕಾಲಪರಿವರ್ತನೆ.

# ಭರತೈರಾವತಯೋರ್ವೃದ್ಧಿಹ್ರಾಸೌ ಷಟ್ಸಮಯಾಭ್ಯಾಮುತ್ಸರ್ಪಿಣ್ಯವಸರ್ಪಿಣೀಭ್ಯಾಂ ॥ ೨೭ ॥

ಪ್ರತ್ಯೇಕ ಪ್ರತ್ಯೇಕವಾಗಿ ಆರು ಆರು ವಿಭಾಗಗಳುಳ್ಳ ಉತ್ಸರ್ಪಿಣೀ ಮತ್ತು ಅವಸರ್ಪಿಣೀ ಕಾಲಗಳ ಮೂಲಕ ಭರತ ಮತ್ತು ಐರಾವತಕ್ಷೇತ್ರಗಳಲ್ಲಿ ಜೀವರುಗಳ ಅನುಭವ ಮೊದಲಾದುವುಗಳಲ್ಲಿ ಉನ್ನತಿ ಮತ್ತು ಅವನತಿಗಳು ಆಗುತ್ತವೆ,

ಭಾವಾರ್ಥ— ಇಪ್ಪತ್ತು ಕೋಟಾಕೋಟಿ ಸಾಗರಕ್ಕೆ ಒಂದು ಕಲ್ಪಕಾಲವೆಂದು ಹೆಸರು. ಈ ಕಲ್ಪಕಾಲದಲ್ಲಿ ಉತ್ಸರ್ಪಿಣೀ ಮತ್ತು ಅವಸರ್ಪಿಣೀ ಎಂಬ ಎರಡು ಕಾಲಭೇದವು. ಯಾವ ಕಾಲದಲ್ಲಿ ಭರತಾದಿಕ್ಷೇತ್ರಗಳಲ್ಲಿರುವ ಜೀವಗಳ ಅನುಭವ ಆಯುಷ್ಯ ಶರೀರ ಪ್ರಮಾಣ ಮತ್ತು ಜ್ಞಾನ ಮೊದಲಾದುವುಗಳ ಉನ್ನತಿಯಾಗುವದೋ ಅದು ಉತ್ಸರ್ಪಿಣೀ ಕಾಲವು. ಯಾವ ಕಾಲದಲ್ಲಿ ಮೇಲೆ ಬರೆದ ವಿಷಯುಗಳು ಅವನತಿಯನ್ನು ಹೊಂದುತ್ತವೆಯೋ ಆ ಕಾಲವು ಅವಸರ್ಪಿಣಿಯು. ಈ ಅವಸರ್ಪಿಣಿಯಲ್ಲಿ ಆರು ಭೇದವಿದೆ. ೧ ಸುಷಮಸುಷಮಾ, ೨ ಸುಷಮಾ, ೩ ಸುಷಮದುಃಷಮ, ೪ ದು:ಷಮಸುಷಮಾ, ೫ ದುಃಷಮಾ, ಮತ್ತು ೬ ಅತಿದುಃಷಮಾ ಎಂದು ಆರು ಭೇದಗಳು.ಇದರಂತೆಯೇ ಉತ್ಸರ್ಪಿಣೀ ಕಾಲದಲ್ಲಿ ಅತಿ ದು:ಷಮಾದಿಂದ ಹಿಡಿದು ಆರುಭೇದಗಳ ಎಣಿಕೆಯನ್ನು ಮಾಡಬೇಕು.

ಸುಷಮಸುಷಮಾ ಎಂಬುದು ೪ ಕೋಟಾಕೋಟಿ ಸಾಗರವೂ, ಸುಷಮವು ೩ ಕೋಟಾಕೋಟಿ ಸಾಗರವೂ, ಸುಷಮದುಃಷಮಾವು ೨ ಕೋಟಾಕೋಟಿ ಸಾಗರವೂ, ದುಃಷಮಸುಷಮಾವು ೪೨ ಸಾವಿರ ವರ್ಷಗಳಿಂದ ನ್ಯೂನವಾಗಿರುವ ೧ ಕೋಟಾಕೋಟಿ ಸಾಗರವೂ, ದು:ಷಮಾವು ೨೧ ಸಾವಿರ ವರ್ಷವೂ, ಅತಿ ದುಃಷಮಾವು ೨೧ ಸಾವಿರ ವರ್ಷವೂ ಆಗಿರವುವು. ಇದರ ನಂತರ ಪ್ರಲಯ ಘಟಿಸುತ್ತದೆ. ಗಾಳಿ ಮತ್ತು ಮಳೆ ವೇಗದಿಂದ

ಪರ್ವತಗಳು ಚೂರುಚೂರಾಗಿ ಒಡೆಯುತ್ತವೆ. ಮನುಷ್ಯರು ಸಾಮ್ಯ… ಅನೇಕ ಪರ್ವತಗಳ ಗುಹೆಗಳಲ್ಲಿ ತಮ್ಮನ್ನು ರಕ್ಷಿಸಿಕೊಳ್ಳುತ್ತಾರೆ. … ರಿಂದ ಮುಂದಿನ ಬೆಳವಣಿಗೆಯಾಗುತ್ತದೆ. ಈ ಕಾಲಗಳ ಮೂಲಕ … ಮತ್ತು ಐರಾವತ ಕ್ಷೇತ್ರಗಳಲ್ಲಿ ಬದಲಾವಣೆಯಾಗುತ್ತದೆ. ಅಸಂಖ್ಯಾತ ಅ… ಣೀಕಾಲವು ಕಳೆಯುತ್ತಿರಲು ಹುಂಡಾವಸರ್ಪಿಣೀ ಎಂಬ ಕಾಲವು ಬರು… ಈಗ ಹುಂಡಾವಸರ್ಪಿಣಿಯ ೫ ನೇ ಭೇದ ವಾ ದುಃಷಮಾ ಎಂಬ ಕಾ… ಇದು ೨೧ ಸಾವಿರ ವರ್ಷಗಳ ಕಾಲವು. ಭರತ ಮತ್ತು ಐರಾವತ ಕ್ಷೇತ್ರದಲ್ಲಿ… ಮ್ಲೇಚ್ಛಖಂಡ ಮತ್ತು ವಿಜಯಾರ್ಧಪರ್ವತಗಳಲ್ಲಿ ಈ ಕಾಲಾನುಗು… ಪರಿವರ್ತನೆಯಾಗುವುದಿಲ್ಲ.

ಭರತ ಮತ್ತು ಐರಾವತ ಕ್ಷೇತ್ರಗಳನ್ನು ಬಿಟ್ಟು ಉಳಿದ ಕ್ಷೇತ್ರಗಳು

**ತಾಭ್ಯಾಮಪರಾ ಭೂಮಯೋಽವಸ್ಥಿತಾಃ ॥ ೨೮**

ಅರ್ಥ— ಭರತ ಮತ್ತು ಐರಾವತ ಕ್ಷೇತ್ರಗಳನ್ನು ಬಿಟ್ಟು ಉಳಿದ ಕ್ಷೇತ್ರಗಳು ಇದ್ದಕ್ಕಿದ್ದಂತೆಯೇ ಇರುತ್ತವೆ. ಅಂದರೆ ಅವುಗಳಲ್ಲಿ ಕಾಲದ ಬ… ಬದಲಾವಣೆಯಾಗುವುದಿಲ್ಲ.

ಹೈಮವತ ಮೊದಲಾದ ಕ್ಷೇತ್ರಗಳಲ್ಲಿರುವವರ ಆಯುಷ್ಯ

**ಏಕದ್ವಿತ್ರಿಪಲ್ಯೋಪಮಸ್ಥಿತಯೋ ಹೈಮವತ… ಹಾರಿವರ್ಷಕದೈವಕುರವಕಾಃ ॥ ೨೯ ॥**

ಅರ್ಥ— ಹೈಮವತ, ಹರಿಕ್ಷೇತ್ರ ಮತ್ತು ದೇವಕುರುಗಳೆಂಬ … ಮಧ್ಯಮ ಮತ್ತು ಉತ್ತಮ ಭೋಗಭೂಮಿಗಳಲ್ಲಿರುವ ಮನುಷ್ಯ … ತಿರ್ಯಂಚಗಳ ಆಯುಷ್ಯವು ೧ ಪಲ್ಯ ೨ ಪಲ್ಯ ಮತ್ತು ೩ ಪಲ್ಯಗಳ… ಕ್ರಮವಾಗಿ ಮೇಲೆ ಬರೆದ ೧, ೨ ಮತ್ತು ೩ ಕೋಶಗಳ ಶರೀರವೂ ಹಾಗೆ… ಹೈಮವತ ಕ್ಷೇತ್ರದ ಮನುಷ್ಯರ ಶರೀರದ ವರ್ಣವು ನೀಲವೂ, ಹರಿಕ್ಷೇ… ರುವವರ ವರ್ಣವು ಬಿಳಿಯೂ ಮತ್ತು ದೇವಕುರುವಿನಲ್ಲಿರುವವರ … ವರ್ಣವು … ಆಗಿರುವವು. ಇವುಗಳಲ್ಲಿ ಜೀವಿಗಳೂ …

ಭೂಮಿಯ ಅವಸ್ಥೆಯು ಇರುತ್ತದೆ. ಇವುಗಳಲ್ಲಿ ಮನುಷ್ಯರು ಯಾವಾಗಲೂ ಯುವಕರಂತೆ ಇರುತ್ತಾರೆ. ಸಮ್ಯಕ್ತ್ವವನ್ನು ಅಲ್ಲಿ ಪ್ರಾಪ್ತಮಾಡಬಹುದು. ಯಾವಾಗಲೂ ಸುಖದಲ್ಲಿ ಇರುತ್ತಾನೆ. ಸಮ್ಯಗ್ದೃಷ್ಟಿ ಸತ್ತು ಸೌಧರ್ಮಾದಿ ಸ್ವರ್ಗಗಳನ್ನು ಪಡೆಯುತ್ತಾನೆ. ಪುಣ್ಯಪಾಪಗಳ ಸಂಬಂಧವಿಲ್ಲದಿರುವುದರಿಂದ ಅಲ್ಲಿಂದ ಸ್ವರ್ಗಲೋಕದಲ್ಲಿ ದೇವತೆಗಳಾಗಿ ಹುಟ್ಟುತ್ತಾರೆ. ಅಲ್ಲಿ ಪರಸ್ಪರ ಈರ್ಷ್ಯಾ ದ್ವೇಷಗಳು, ಮಳೆಬೆಳೆಗಳೂ, ಇರುವುದಿಲ್ಲ. ಕಲ್ಪವೃಕ್ಷದಿಂದ ಪ್ರಾಪ್ತ ಮಾಡಿದ ವಸ್ತುಗಳನ್ನು ಅವರು ಉಪಭೋಗಿಸುತ್ತಾರೆ.

### ಉತ್ತರ ದಿಕ್ಕಿನ ಕ್ಷೇತ್ರಗಳ ವಿಷಯ

## ತಥೋತ್ತರಾಃ || ೩೦ ||

ಅರ್ಥ—ವಿದೇಹ ಕ್ಷೇತ್ರದ ಉತ್ತರದಿಕ್ಕಿನಲ್ಲಿರುವ ಕ್ಷೇತ್ರದ ಆಯುಷ್ಯ ಮೊದಲಾದವುಗಳು ಹೈಮವತ ಮೊದಲಾದ ಕ್ಷೇತ್ರಗಳಂತೆಯೇ ಇರುತ್ತವೆ, ಎಂದು ತಿಳಿಯಬೇಕು, ಜಂಬೂದ್ವೀಪದಲ್ಲಿರುವ ಆರು ಭೋಗಭೂಮಿಗಳನ್ನು ಲೆಕ್ಕಿಸಿ, ಇಡಿಯ ಎರಡೂವರೆ ದ್ವೀಪಗಳಲ್ಲಿ ೩೦ ಭೋಗಭೂಮಿಗಳೂ ಮತ್ತು ಭರತ ಕ್ಷೇತ್ರಗಳನ್ನು ಹಿಡಿದು ೧೫ ಕರ್ಮಭೂಮಿಗಳೂ ಆಗುತ್ತವೆ.

### ವಿದೇಹ ಕ್ಷೇತ್ರದ ಆಯುಷ್ಯ

## ವಿದೇಹೇಷು ಸಂಖ್ಯೇಯಕಾಲಾಃ || ೩೧ ||

ಅರ್ಥ — ವಿದೇಹ ಕ್ಷೇತ್ರದಲ್ಲಿರುವ ಮನುಷ್ಯ ಮತ್ತು ತಿರ್ಯಂಚ ಆಯುಷ್ಯವು + ಸಂಖ್ಯಾತ ವರ್ಷಗಳು.

ಐದು ವಿದೇಹಗಳಲ್ಲಿಯೂ ಭೋಗಭೂಮಿಯ ಅವಸ್ಥೆ ಇರುವುದರಿಂದ ಅವರ ಶರೀರದ ಎತ್ತರವು ಹೆಬ್ಬೆರಳಿನಿಂದ ಹೆಚ್ಚು ಐನೂರು ಧನುಷ್ಯ ಪ್ರಮಾ ವಿರುವುದಲ್ಲಿ ಉತ್ಕೃಷ್ಟ ಆಯುಷ್ಯವು 1 ಕೋಟಿವರ್ಷಪೂರ್ವದ್ದು ಇರುತ್ತದೆ.

---

+ ವಿದೇಹ ಕ್ಷೇತ್ರದಲ್ಲಿರುವ ಮನುಷ್ಯರ ಶರೀರ ಪ್ರಮಾಣವೂ, ೫೦೦ ಧನುಸ್ಸು ಮತ್ತು ಆಯುಷ್ಯವೂ ೧ ಕೋಟಿ ವರ್ಷಪೂರ್ವವಾಗಿದೆ.

ಪರ್ವತಗಳು ಚೂರುಚೂರಾಗಿ ಒಡೆಯುತ್ತವೆ. ಮನುಷ್ಯರು ಸಾಯುತ್ತಾ ಅನೇಕ ಪರ್ವತಗಳ ಗುಹೆಗಳಲ್ಲಿ ತಮ್ಮನ್ನು ರಕ್ಷಿಸಿಕೊಳ್ಳುತ್ತಾರೆ. ಅ ರಿಂದ ಮುಂದಿನ ಬೆಳವಣಿಗೆಯಾಗುತ್ತದೆ. ಈ ಕಾಲಗಳ ಮೂಲಕ ಭ ಮತ್ತು ಐರಾವತ ಕ್ಷೇತ್ರಗಳಲ್ಲಿ ಬದಲಾವಣೆಯಾಗುತ್ತದೆ. ಅಸಂಖ್ಯಾತ ಅವ ಣೀಕಾಲವು ಕಳೆಯುತ್ತಿರಲು ಹುಂಡಾವಸರ್ಪಿಣೀ ಎಂಬ ಕಾಲವು ಬರು ಈಗ ಹುಂಡಾವಸರ್ಪಿಣಿಯ ೫ ನೇ ಭೇದ ಪಾ ದುಃಷಮಾ ಎಂಬ ಕಾ ಇದು ೨೧ ಸಾವಿರ ವರ್ಷಗಳ ಕಾಲವು. ಭರತ ಮತ್ತು ಐರಾವತ ಕ್ಷೇತ್ರದಲ್ಲಿ ಮ್ಲೇಚ್ಛಖಂಡ ಮತ್ತು ವಿಜಯಾರ್ಧಪರ್ವತಗಳಲ್ಲಿ ಈ ಕಾಲಾನುಗು ಪರಿವರ್ತನೆಯಾಗುವುದಿಲ್ಲ.

ಭರತ ಮತ್ತು ಐರಾವತ ಕ್ಷೇತ್ರಗಳನ್ನು ಬಿಟ್ಟು ಉಳಿದ ಕ್ಷೇತ್ರಗಳು

**ತಾಭ್ಯಾಮಪರಾ ಭೂಮಯೋಽವಸ್ಥಿತಾಃ ॥ ೨೮**

ಅರ್ಥ— ಭರತ ಮತ್ತು ಐರಾವತ ಕ್ಷೇತ್ರಗಳನ್ನು ಬಿಟ್ಟು ಉಳಿದ ಕ್ಷೇ ಗಳು ಇದ್ದಕ್ಕಿದ್ದಂತೆಯೇ ಇರುತ್ತವೆ. ಅಂದರೆ ಅವುಗಳಲ್ಲಿ ಕಾಲದ ಬ ಬದಲಾವಣೆಯಾಗುವುದಿಲ್ಲ.

ಹೈಮವತ ಮೊದಲಾದ ಕ್ಷೇತ್ರಗಳಲ್ಲಿರುವವರ ಆಯುಷ್ಯ

**ಏಕದ್ವಿತ್ರಿಪಲ್ಯೋಪಮಸ್ಥಿತಯೋ ಹೈಮವತ ಹಾರಿವರ್ಷಕದೈವಕುರವಕಾಃ ॥ ೨೯ ॥**

ಅರ್ಥ— ಹೈಮವತ, ಹರಿಕ್ಷೇತ್ರ ಮತ್ತು ದೇವಕುರುಗಳೆಂಬ ಮಧ್ಯಮ ಮತ್ತು ಉತ್ತಮ ಭೋಗಭೂಮಿಗಳಲ್ಲಿರುವ ಮನುಷ್ಯ ತಿರ್ಯಂಚಗಳ ಆಯುಷ್ಯವು ೧ ಪಲ್ಯ ೨ ಪಲ್ಯ ಮತ್ತು ೩ ಪಲ್ಯಗ ಕ್ರಮವಾಗಿ ಮೇಲೆ ಬರೆದ ೧, ೨ ಮತ್ತು ೩ ಕೋಶಗಳ ಶರೀರವೂ ಹಾಗ ಹೈಮವತ ಕ್ಷೇತ್ರದ ಮನುಷ್ಯರ ಶರೀರದ ವರ್ಣವು ನೀಲವೂ, ಹರಿಕ್ಷೇ ರುವವರ ವರ್ಣವು ಬಿಳಿಯೂ ಮತ್ತು ದೇವಕುರುವಿನಲ್ಲಿರುವವರ ವರ್ಣವು [illegible] ಆಗಿರುವುದು. [illegible] ಇವುಗಳೂ

ಭೂಮಿಯ ಅವಸ್ಥೆಯು ಇರುತ್ತದೆ. ಇವುಗಳಲ್ಲಿ ಮನುಷ್ಯರು ಯಾವಾಗಲೂ ಯುವಕರಂತೆ ಇರುತ್ತಾರೆ. ಸಮ್ಯಕ್ತ್ವವನ್ನು ಅಲ್ಲಿ ಪ್ರಾಪ್ತಮಾಡಬಹುದು. ಯಾವಾಗಲೂ ಸುಖದಲ್ಲಿ ಇರುತ್ತಾರೆ. ಸಮ್ಯಗ್ದೃಷ್ಟಿ ಸತ್ತು ಸೌಧರ್ಮಾದಿ ಸ್ವರ್ಗಗಳನ್ನು ಪಡೆಯುತ್ತಾನೆ. ಪುಣ್ಯಪಾಪಗಳ ಸಂಬಂಧವಿಲ್ಲದಿರುವುದರಿಂದ ಅಲ್ಲಿಂದ ಸ್ವರ್ಗಲೋಕದಲ್ಲಿ ದೇವತೆಗಳಾಗಿ ಹುಟ್ಟುತ್ತಾರೆ. ಅಲ್ಲಿ ಪರಸ್ಪರ ಈರ್ಷ್ಯಾ ದ್ವೇಷಗಳು, ಮಳೆಬೆಳೆಗಳೂ, ಇರುವುದಿಲ್ಲ. ಕಲ್ಪವೃಕ್ಷದಿಂದ ಪ್ರಾಪ್ತ ಮಾಡಿದ ವಸ್ತುಗಳನ್ನು ಅವರು ಉಪಭೋಗಿಸುತ್ತಾರೆ.

### ಉತ್ತರ ದಿಕ್ಕಿನ ಕ್ಷೇತ್ರಗಳ ವಿಷಯ

## ತಥೋತ್ತರಾಃ ॥ ೩೦ ॥

ಅರ್ಥ—ವಿದೇಹ ಕ್ಷೇತ್ರದ ಉತ್ತರದಿಕ್ಕಿನಲ್ಲಿರುವ ಕ್ಷೇತ್ರದ ಆಯುಷ್ಯ ಮೊದಲಾದವುಗಳು ಹೈಮವತ ಮೊದಲಾದ ಕ್ಷೇತ್ರಗಳಂತೆಯೇ ಇರುತ್ತವೆ, ಎಂದು ತಿಳಿಯಬೇಕು. ಜಂಬೂದ್ವೀಪದಲ್ಲಿರುವ ಆರು ಭೋಗಭೂಮಿಗಳನ್ನು ಲೆಕ್ಕಿಸಿ, ಇಡಿಯ ಎರಡೂವರೆ ದ್ವೀಪಗಳಲ್ಲಿ ೩೦ ಭೋಗಭೂಮಿಗಳೂ ಮತ್ತು ಭರತ ಕ್ಷೇತ್ರಗಳನ್ನು ಹಿಡಿದು ೧೫ ಕರ್ಮಭೂಮಿಗಳೂ ಆಗುತ್ತವೆ.

### ವಿದೇಹ ಕ್ಷೇತ್ರದ ಆಯುಷ್ಯ

## ವಿದೇಹೇಷು ಸಂಖ್ಯೇಯಕಾಲಾಃ ॥ ೩೧ ॥

ಅರ್ಥ — ವಿದೇಹ ಕ್ಷೇತ್ರದಲ್ಲಿರುವ ಮನುಷ್ಯ ಮತ್ತು ತಿರ್ಯಂಚ ಆಯುಷ್ಯವು + ಸಂಖ್ಯಾತ ವರ್ಷಗಳು.

ಐದು ವಿದೇಹಗಳಲ್ಲಿಯೂ ಭೋಗಭೂಮಿಯ ಅವಸ್ಥೆ ಇರುವುದರಿಂದ ಅವರ ಶರೀರದ ಎತ್ತರವು ಹೆಚ್ಚೆಂದರೆ ಐನೂರು ಧನುಷ್ಯ ಪ್ರಮಾಣವಿರುವುದಲ್ಲಿ ಉತ್ಕೃಷ್ಟ ಆಯುಷ್ಯವು 1 ಕೋಟಿವರ್ಷಪೂರ್ವದಷ್ಟು ಇರುತ್ತದೆ.

---

+ ವಿದೇಹ ಕ್ಷೇತ್ರದಲ್ಲಿರುವ ಮನುಷ್ಯರ ಶರೀರ ಪ್ರಮಾಣವೂ, ೫೦೦ ಧನುಸ್ಸು ಮತ್ತು ಆಯುಷ್ಯವೂ ೧ ಕೋಟಿ ವರ್ಷಪೂರ್ವವಾಗಿದೆ.

ಜಘನ್ಯ ಆಯುಷ್ಯವು ಅಂತರ್ಮುಹೂರ್ತ. ಮಧ್ಯಮ ಆಯುಷ್ಯ ಅನೇಕ ಪ್ರಕಾರವಾಗಿದೆ.

ಭರತ ಕ್ಷೇತ್ರದ ವಿಸ್ತಾರ.

## ಭರತಸ್ಯ ವಿಷ್ಕಂಭೋ ಜಂಬೂದ್ವೀಪಸ್ಯ ನವತಿ ಶತಭಾಗಃ ॥ ೩೨ ॥

ಅರ್ಥ—ಭರತ ಕ್ಷೇತ್ರದ ವಿಸ್ತಾರವು ಜಂಬೂದ್ವೀಪದ ೧೯೦ ಭಾಗಗಳಲ್ಲಿ ಒಂದು ಭಾಗದಷ್ಟು ಇದೆ.

ಈ ಮೊದಲು ಭರತ ಕ್ಷೇತ್ರದ ವಿಸ್ತಾರವು ಹೇಳಲಾಗಿದೆ. ಜಂಬೂ ದ್ವೀಪದ ವಿಸ್ತಾರವನ್ನು ನಾವು ಆದರಲ್ಲಿರುವ ಕ್ಷೇತ್ರ ಮತ್ತು ಪರ್ವತದ ಪ್ರಕಾರ ವಿಭಾಗಿಸಬೇಕಾಗಿದೆ.

ಧಾತಕೀಖಂಡ ದ್ವೀಪ,

## ದ್ವಿರ್ಧಾತಕೀಖಂಡೇ ॥ ೩೩ ॥

ಅರ್ಥ—ಧಾತಕೀ ಖಂಡ ದ್ವೀಪದಲ್ಲಿರುವ ಭರತಾದಿ ಕ್ಷೇತ್ರಗಳೂ, ಹಿಮವದಾದಿ ಕುಲಾಚಲಪರ್ವತಗಳೂ, ಗಂಗಾ ಮೊದಲಾದ ನದಿಗಳೂ ಜಂಬೂ ದ್ವೀಪದಿಂದ ಎರಡರಷ್ಟು ಹೆಚ್ಚು ಹೆಚ್ಚು ಇವೆ.

## ಪುಷ್ಕರಾರ್ಧೇ ಚ ॥ ೩೪ ॥

ಅರ್ಥ — ಪುಷ್ಕರಾರ್ಧ ದ್ವೀಪದಲ್ಲಿಯೂ ಧಾತಕೀ ಖಂಡದಷ್ಟೇ ರಚನೆಯೇ ಇದೆ.

ವಿಶೇಷ—ಪುಷ್ಕರಾರ್ಧ ದ್ವೀಪದ ವಿಸ್ತಾರವು ೧೬ ಲಕ್ಷ ಯೋಜನ. ಇದರ ಮಧ್ಯದಲ್ಲಿ ದುಂಡಾಕಾರವಾಗಿರುವ ಮಾನುಷೋತ್ತರ ಎಂಬ ಪರ್ವತ ಇದೆ. ಇಲ್ಲಿಯವರೆಗೇನೆಯೇ ಮನುಷ್ಯರ ನಿವಾಸವಿರುತ್ತದೆ. ಇದನ್ನು ಮುಂದಿನ ಸೂತ್ರದಲ್ಲಿ ಸ್ಪಷ್ಟಪಡಿಸಲಾಗುತ್ತದೆ.

ಮನುಷ್ಯಕ್ಷೇತ್ರ

## ಪ್ರಾಙ್ಮಾನುಷೋತ್ತರಾನ್ಮನುಷ್ಯಾಃ || ೩೫ ||

ಅರ್ಥ—ಮಾನುಷೋತ್ತರ ಪರ್ವತದ ಮೊದಲು ಅಂದರೆ ಎರಡುವರೆ ದ್ವೀಪಗಳಲ್ಲಿ ಮನುಷ್ಯರ ನಿವಾಸವಿರುತ್ತದೆ. ಅಂದರೆ ಪುಷ್ಕರ ದ್ವೀಪದ ಅರ್ಧಭಾಗದಲ್ಲಿ ಮಾತ್ರ ಮನುಷ್ಯರಿರುತ್ತಾರೆ. ಮಾನುಷೋತ್ತರ ಪರ್ವತವನ್ನು ದಾಟಿ ಋದ್ಧಿಪಡೆದ ಮುನಿಗಳೂ ಮತ್ತು ವಿದ್ಯಾಧರರೂ ಹೋಗುವುದಿಲ್ಲ.

ಮನುಷ್ಯರುಗಳ ಭೇದ

## ಆರ್ಯಾ ಮ್ಲೇಚ್ಛಾಶ್ಚ || ೩೬ ||

ಅರ್ಥ—ಆರ್ಯ ಮತ್ತು ಮ್ಲೇಂಛರುಗಳೆಂದು ಮನುಷ್ಯರಲ್ಲಿ ಎರಡು ಭೇದವಿದೆ. ಯಾವ ಮನುಷ್ಯರು ಹುಟ್ಟಿದಂದಿನಿಂದ ಮರಣಪರ್ಯಂತರದ ವರೆಗಿನ ಷೋಡಶ ಸಂಸ್ಕಾರಗಳಿಗೆ ಅಧಿಕಾರಿಗಳೋ ಅವರನ್ನು ಆರ್ಯರೆಂದೂ, ಈ ಸಂಸ್ಕಾರಗಳಿಗೆ ಅಧಿಕಾರವಿಲ್ಲದವರನ್ನು ಮ್ಲೇಂಛರೆಂದೂ ತಿಳಿಯಬೇಕು.

ವಿಶೇಷಾರ್ಥ—ಎರಡು ಪ್ರಕಾರದ ಆರ್ಯರಿರುತ್ತಾರೆ. ಋದ್ಧಿಪ್ರಾಪ್ತ ಆರ್ಯರು, ಋದ್ಧಿಪ್ರಾಪ್ತರಿಲ್ಲದ ಆರ್ಯರು. ಋದ್ಧಿಪ್ರಾಪ್ತರಲ್ಲದ ಆರ್ಯರು ಕ್ಷೇತ್ರ, ಜಾತಿ, ಕರ್ಮ, ಚಾರಿತ್ರ ಮತ್ತು ದರ್ಶನದ ಭೇದದಿಂದ ಯುಕ್ತರಾಗಿದ್ದಾರೆ. ಋದ್ಧಿಪ್ರಾಪ್ತ ಆರ್ಯರು ಬುದ್ಧಿ, ವಿಕ್ರಿಯ, ತಪಸ್ಸು, ಬಲ, ಔಷಧ, ರಸ, ಅಕ್ಷೀಣ ಭೇಧಗಳಿಂದ ಏಳು ವಿಧ. ಆರ್ಯಕ್ಷೇತ್ರದಲ್ಲಿ ಜನ್ಮವೆತ್ತುವವರು ಕ್ಷೇತ್ರ ಆರ್ಯರು ಇಕ್ಷ್ವಾಕು ಮೊದಲಾದ ಉತ್ತಮ ವಂಶದಲ್ಲಿ ಜನ್ಮವೆತ್ತುವವರು ಜಾತಿ ಆರ್ಯರು. ತನ್ನ ಜೀವಿತಕ್ಕೋಸ್ಕರ ಹಿಂಸಾದಿ ಕೃತಿಗಳನ್ನು ಮಾಡುವವರು ಕರ್ಮಆರ್ಯರು. ಚಾರಿತ್ರವನ್ನು ಪಾಲನೆ ಮಾಡುವವರು ಚಾರಿತ್ರ ಆರ್ಯರು. ಹಾಗೆಯೇ ಸಮ್ಯಗ್ದರ್ಶನವನ್ನು ಪಾಲಿಸುವವರು ದರ್ಶನ ಆರ್ಯರು.

ಹಾಗೆಯೇ ಮ್ಲೇಚ್ಛರ ಭೇದವನ್ನು ತಿಳಿಯಬೇಕು. ಅವರಲ್ಲಿ ವಿಶೇಷತಃ ಕ್ಷೇತ್ರದ ಅಪೇಕ್ಷೆಯಿಂದ ಅಂತರ್ದ್ವೀಪದಲ್ಲಿರುವವರು ಕರ್ಮಭೂಮಿಜರೆಂದು ಎರಡು ಭೇದವಿದೆ. ಹೀಗೆ ಮನುಷ್ಯರ ಭೇದವನ್ನು ಗ್ರಂಥಾಂತರಗಳಿಂದ ತಿಳಿಯಬೇಕು.

## ಕರ್ಮಭೂಮಿಯ ವರ್ಣನೆ

ಭರತೈರಾವತವಿದೇಹಾಃ ಕರ್ಮಭೂಮಯೋನ್ಯ
ದೇವಕುರೂತ್ತರಕುರುಭ್ಯಃ || ೩೭ ||

ಅರ್ಥ—ವಿದೇಹ ಕ್ಷೇತ್ರದಲ್ಲಿರುವ ದೇವಕುರು ಮತ್ತು ಉತ್ತರ ಕು
ಳೆಂಬ ಉತ್ತಮ ಭೋಗಭೂಮಿಗಳನ್ನು ಬಿಟ್ಟು ಪೂರ್ವವಿದೇಹ ವ
ಪಶ್ಚಿಮ ವಿದೇಹಗಳೆಂಬ ಭೇದವುಳ್ಳ ವಿದೇಹಕ್ಷೇತ್ರ ಭರತ ಮತ್ತು ಐ
ಕ್ಷೇತ್ರಗಳು ೧೫ ಕರ್ಮಭೂಮಿಗಳು. ಅಸಿ, ಮಸಿ, ಕೃಷಿ, ವಾಣಿಜ್ಯ
ಮತ್ತು ಶಿಲ್ಪಗಳೆಂಬ ಕರ್ಮಗಳ ಪ್ರವೃತ್ತಿ ಇರುವ ಭೂಮಿಗೆ ಕರ್ಮಭೂ
ಎಂದು ಹೆಸರು. ದೇವಕುರು ಉತ್ತರಕುರುಗಳೆಂಬ ಕರ್ಮಭೂಮಿ
ಯಾವಾಗಲೂ ಭೋಗಭೂಮಿಯ ವ್ಯವಸ್ಥೆ ಇರುತ್ತದೆ.

ಈ ಕರ್ಮಭೂಮಿಗಳಲ್ಲಿ ಹುಟ್ಟುವ ಜೀವಗಳು ಈ ೧೫ ಕರ್ಮಭೂ
ಗಳಲ್ಲಿ ಹೆಚ್ಚಿನಿಂದ ಹೆಚ್ಚು ಪುಣ್ಯ ಪಾಪಗಳನ್ನು ಆರ್ಜಿಸಿ ಉತ್ತಮ ಸ್ವರ್ಗ
ಏಳನೆಯ ನರಕಕ್ಕೂ ಹೋಗಬಹುದು.

### ಮನುಷ್ಯರ ಉತ್ತಮ ಮತ್ತು ಕನಿಷ್ಟ ಆಯುಷ್ಯವೆಷ್ಟು ?

ನೃಸ್ಥಿತೀ ಪರಾವರೇ ತ್ರಿಪಲ್ಯೋಪಮಾಂತ
ರ್ಮುಹೂರ್ತೇ || ೩೮ ||

ಅರ್ಥ ಮನುಷ್ಯರ ಉತ್ಕೃಷ್ಟ ಸ್ಥಿತಿ ಮೂರು ಪಲ್ಯವೂ ಮತ್ತು ಜ
ಸ್ಥಿತಿಯೂ ಅಂತರ್ಮುಹೂರ್ತವೂ ಆಗಿದೆ.

### ತಿರ್ಯಂಚಗಳ ಸ್ಥಿತಿ

ತಿರ್ಯಗ್ಯೋನಿಜಾನಾಂಚ || ೩೯ ||

ಅರ್ಥ—ತಿರ್ಯಂಚಗಳ ಉತ್ಕೃಷ್ಟಸ್ಥಿತಿ ೩ ಪಲ್ಯವೂ ಜಘನ್ಯ ಸ್ಥಿ
ಅಂತರ್ಮುಹೂರ್ತವೂ ಆಗಿದೆ.

ವಿಶೇಷಾರ್ಥ–ಪೃಥ್ವಿಕಾಯಿಕ ಜೀವನ ಆಯು, ೧೨ ಸಾವಿರ ವರ್ಷ ಖರಪೃಥ್ವಿಯಲ್ಲಿರುವ ಜೀವನ ಆಯು, ೨೨ ಸಾವಿರವರ್ಷ, ಜಲಕಾಯಿಕ ಜೀವನ್ನ ಆಯು ೭ ಸಾವಿರವರ್ಷ, ವಾಯುಕಾಯಿಕ ೩ ಸಾವಿರವರ್ಷ, ಅಗ್ನಿಕಾಯಿಕ ೨ ಸಾವಿರವರ್ಷ, ಮತ್ತು ವನಸ್ಪತಿ ಕಾಯಿಕನ ಆಯುಷ್ಯ ೧೦ ಸಾವಿರವರ್ಷ. ಇಂದು ಉತ್ಕೃಷ್ಟ ಆಯುಷ್ಯ. ಜಘನ್ಯ–ಏಕೇಂದ್ರಿಯ ಅಗ್ನಿಕಾಯ ಮೂರು ಮತ್ತು ಇತರರ ಆಯುಷ್ಯ ಅಂತರ್ಮುಹೂರ್ತವೆಂದು ಹೇಳಿದ್ದಾರೆ.

ದ್ವಿಂದ್ರಿಯಕ್ಕೆ ಹನ್ನೆರಡು ವರ್ಷ, ಮೂರು ಇಂದ್ರಿಯಕ್ಕೆ ನಲ್ವತ್ತೊಂಭತ್ತುದಿನ ರಾತ್ರಿ ನಾಲ್ಕು ಇಂದ್ರಿಯ ಜೀವಗಳಿಗೆ ಆರುತಿಂಗಳು ಹೆಚ್ಚಿನಿಂದ ಹೆಚ್ಚು ಆಯುಷ್ಯವಿದೆ. ಪಂಚೇಂದ್ರಿಯದಲ್ಲಿ ಜಲಚರಜೀವಗಳಿಗೆ ಒಂದು ವರ್ಷ:—ಕೋತಿ—ಮುಂಗಸೀ ಮೊದಲಾದವುಗಳಿಗೆ ಒಂಭತ್ತು ವರ್ಷ, ಸರ್ಪಗಳಿಗೆ ನಲ್ವತ್ತೆರಡು ಸಾವಿರವರ್ಷ, ಪಕ್ಷಿಗಳಿಗೆ ಎಪ್ಪತ್ತೆರಡು ಸಾವಿರವರ್ಷ, ನಾಲ್ಕು ಕಾಲು ಉಳ್ಳ ಪ್ರಾಣಗಳಿಗೆ ಮೂರುಪಲ್ಯವಿರುತ್ತದೆ. ಇದು ಉತ್ಕೃಷ್ಟ ಸ್ಥಿತಿ. ಜಘನ್ಯ ಸ್ಥಿತಿ ಎಲ್ಲಜೀವಿಗಳಿಗೆ ಅಂತರ್ಮುಹೂರ್ತವೆಂದು ತಿಳಿಯಬೇಕು.

ವಿಶೇಷಾರ್ಥ-ಅಳತೆಯು ಎರಡು ಪ್ರಕಾರವಾಗಿದೆ. ಒಂದು ಸಂಖ್ಯಾರೂಪ, ಇನ್ನೊಂದು ಪ್ರಮಾಣರೂಪ. ಯಾವುದನ್ನು ನಾವು ಲೆಕ್ಕದಿಂದ ಎಣಿಸಲಿಕ್ಕೆ ಆಗುವುದಿಲ್ಲವೋ ಅದನ್ನು ಪ್ರಮಾಣವೆಂದು ತಿಳಿಯಬೇಕು. ಪಲ್ಯ ಇದರಲ್ಲಿ ಮೂರು ಭೇದ. ವ್ಯವಹಾರಪಲ್ಯ, ಉದ್ಧಾರಪಲ್ಯ ಮತ್ತು ಅದ್ಧಾಪಲ್ಯ.

ಕಲ್ಪನೆಯಿಂದ ಹತ್ತುಯೋಜನ ಮತ್ತು ಅಗಲದ ಹೊಂಡವನ್ನು ಗೋಳಾಕಾರವಾಗಿರಿಸಿ ಅದರಲ್ಲಿ ಒಂದು ದಿವಸದಿಂದ ಏಳು ದಿವಸಗಳವರೆಗೆ ಹುಟ್ಟಿದ ಕುರಿಯ ರೋಮವನ್ನು ಕತ್ತರಿಸಿ (ಪುನಃ ಕತ್ತರಿಗೆ ಬರದಂತೆ) ಹಾಕಿ ಅದನ್ನು ತುಂಬುವುದಕ್ಕೆ ಎಷ್ಟು ಸಮಯ ಹಿಡಿಯುತ್ತದೆಯೋ ಅದಕ್ಕೆ ವ್ಯವಹಾರ ಪಲ್ಯವೆಂದು ಹೆಸರು- ಅದರಿಂದ ೧೦೦–೧೦೦ ವರ್ಷಗಳಿಗೆ ಒಂದೊಂದು ರೋಮವನ್ನು ತೆಗೆದರೆ, ತೆಗೆಯುವ ಎಷ್ಟು ಸಮಯ ಹಿಡಿಯುವುದೋ ಅದಕ್ಕೆ ವ್ಯವಹಾರ ಪಲ್ಯೋಪಮವೆಂದು ಹೆಸರು. ವ್ಯವಹಾರ ಪಲ್ಯೋಪಮದ ರೋಮಗಳನ್ನು ಅಸಂಖ್ಯಾತ ಕೋಟಿ ಪಲ್ಯಗಳಲ್ಲಿ ಆಗುವ ಸಮಯದಷ್ಟು ವಿಭಾಗಿಸಿರಿ, ಆ ರೋಮಗಳನ್ನು ಒಂದು ಯೋಜನದ ಹೊಂಡದಲ್ಲಿ

ತುಂಬುವುದಕ್ಕೆ ಉದ್ಧಾರ ಪಲ್ಯವೆಂದು ಹೇಳುತ್ತಾರೆ. ಅದರಿಂ
ಸಮಯ ಒಂದೊಂದು ರೋಮವನ್ನು ತೆಗೆಯುವುದು, ಆ ಸಮ
ಉದ್ಧಾರ ಪಲ್ಯೋಪಮವೆಂದು ಹೆಸರು. ಹಾಗೆ ಉದ್ಧಾರ ಪಲ್ಯದ
ಸಾವಿರಕೋಟಿಗಳು ಅಂದರೆ ಉದ್ಧಾರಸಾಗರೋಪಮವು ಎರಡುವರೆ
ಸಾಗರೋಪಮದಲ್ಲಿ ಎಷ್ಟು ರೋಮದ ತುಂಡುಗಳಾಗುತ್ತವೆಯೋ
ದ್ವೀಪ ಸಮುದ್ರಗಳು. ಹಾಗೆ ಉದ್ಧಾರ ಪಲ್ಯದ ರೋಮಗಳನ್ನು
೧೦೦ ವರ್ಷಗಳ ಹಿಡಿತದಿಂದಾಗುವ ಆ ಹೊಂಗವನ್ನು ತುಂಬು
ಸಮಯ ಹಿಡಿಯುತ್ತದೆಯೋ ಅದಕ್ಕೆ ಅದ್ಧಾಪಲ್ಯವೆಂದು ಹೇಳು
ಅದರಿಂದ ಪ್ರತಿಸಮಯದಲ್ಲಿ ಒಂದು ರೋಮವನ್ನು ತೆಗೆಯಲು ಎಷ್ಟು
ಯದಲ್ಲಿ ಅದು ಭಾವಿಯಾಗುತ್ತದೆಯೋ ಅದಕ್ಕೆ ಅದ್ಧಾಪಲ್ಯೋಪಮ
ಹೆಸರು. ಉದ್ಧಾರಪಲ್ಯದಿಂದ ನಾವು ದ್ವೀಪ ಸಮುದ್ರಾದಿಗಳ ಸಂಖ್ಯೆ
ತಿಳಿಯಬಹುದು ೧೦ ಕೋಟಾ ಕೋಟಿ ಅದ್ಧಾಪಲ್ಯವೇ ೧ ಸಾಗರೋ
ವೆಂದು ತಿಳಿಯಬೇಕು ೧೦ ಅದ್ಧಾ ಸಾಗರ ಒಂದು ಉತ್ಸರ್ಪಿಣಿ ಅವಸರ್ಪಿ
ವಾಗುತ್ತದೆ ಹೀಗೆ ಮನುಷ್ಯ ಮತ್ತು ಇತರ ಜೀವಿಗಳ ಆಯುಷ್ಯವನ್ನು
ಬೇಕು.

## ಪ್ರ ಶ್ನೆ ಗ ಳು

೧ ನಾರಕೀಯರ ದುಃಖವರ್ಣನೆಯನ್ನು ಮಾಡಿ ಅವರ ಉತ್ಕೃಷ್ಟ ಆಯುಷ್ಯ ಎಷ್ಟೆಂಬುದನ್ನು ತಿಳಿಸಿರಿ.

೨ ಜಂಬೂದ್ವೀಪದ ಪರಿಧಿ ಎಷ್ಟು ?

೩ ಭೋಗಭೂಮಿ ಮತ್ತು ಕರ್ಮಭೂಮಿಗಳ ಹೆಸರು ಬರೆಯಿರಿ.

೪ ಧಾತಕೀ ಖಂಡದ್ವೀಪದ ಚಿತ್ರ ಮಾಡಿ ತೋರಿಸಿರಿ.

೫ ಗಂಗಾ, ಸೀತೋದಾ ಮತ್ತು ಹರಿಕಾಂತ ನದಿಗಳು ಹುಟ್ಟಿರುವ ಮತ್ತು ಹರಿಯುತ್ತಿರುವ ಸ್ಥಾನಗಳನ್ನು ಬರೆಯಿರಿ.

೬ ಮಾನುಷೋತ್ತರ ಪರ್ವತ ಎಲ್ಲಿದೆ ?

೭ ಮನುಷ್ಯರ ಭೇದವನ್ನು ಬರೆದು, ಅವರ ಉತ್ಕೃಷ್ಟ ಮತ್ತು ಜಘನ್ಯ ಆಯುಷ್ಯವನ್ನು ಬರೆಯಿರಿ.

೮ ನೀವು ಇರುವ ಕ್ಷೇತ್ರದ ಹೆಸರೇನು ?

೯ ಜಂಬೂದ್ವೀಪದ ನಕ್ಷೆ ಬಿಡಿಸಿರಿ.

೧೦ ತೀರ್ಥಂಕರರು ಯಾವ ಯಾವ ಕ್ಷೇತ್ರಗಳಲ್ಲಿ ಜನ್ಮವೆತ್ತುತ್ತಾರೆ ?

  

 



# ನಾಲ್ಕನೇ ಅಧ್ಯಾಯ

## ದೇವತೆಗಳ ಭೇದ

### ದೇವಾಶ್ಚತುರ್ನಿಕಾಯಾಃ ॥ ೧ ॥

ಅರ್ಥ ದೇವತೆಗಳಲ್ಲಿ ನಾಲ್ಕು ನಿಕಾಯಗಳಿವೆ, ಅಂದರೆ ಭವನವಾ ವ್ಯಂತರ, ಜ್ಯೋತಿಷೀ ಮತ್ತು ವೈಮಾನಿಕರೆಂಬ ನಾಲ್ಕು ಜಾತಿಯ ದೇವ ಇದ್ದಾರೆ. ದೇವತೆ–ದೇವಗತಿ ನಾಮಕರ್ಮದ ಉದಯದ ಸಾಮರ್ಥ್ಯ ಅನೇಕ ದ್ವೀಪಸಮುದ್ರ, ನದೀಕಿನಾರೆ ಪರ್ವತ ಮೊದಲಾದ ರಮಣ ಸ್ಥಾನಗಳಲ್ಲಿ ಅನೇಕ ಬಗೆಯ ಕ್ರೀಡೆ [ ಆಟ ] ಗಳನ್ನು ಮಾಡುವರೋ ರಿಗೆ ದೇವತೆಗಳೆಂದು ಹೆಸರು.

#### ಭವನತ್ರಯ ದೇವತೆಗಳಲ್ಲಿರುವ ಲೇಶ್ಯೆ.

### ಆದಿತಸ್ತ್ರಿಷು ಪೀತಾಂತಲೇಶ್ಯಾಃ ॥ ೨ ॥

ಅರ್ಥ–ಮೊದಲನೆಯ ಮೂರು ನಿಕಾಯದ ದೇವತೆಗಳಲ್ಲಿ ಕೃಷ್ಣ, ಕಾಪೋತ ಮತ್ತು ಪೀತ ಲೇಶ್ಯೆಗಳಿರುತ್ತವೆ.

#### ನಾಲ್ಕು ನಿಕಾಯದ ದೇವತೆಗಳ ಒಳಭೇದ

### ದಶಾಷ್ಟಪಂಚದ್ವಾದಶವಿಕಲ್ಪಾಃ ಕಲ್ಪೋಪಪ ಪರ್ಯಂತಾಃ ॥ ೩ ॥

ಅರ್ಥ— ಕಲ್ಪವೆಂಬ ಸಂಜ್ಞೆಯ ವರೆಗಿರುವ ದೇವತೆಗಳಲ್ಲಿ ಎಂಟು, ಐದು ಮತ್ತು ಹನ್ನೆರಡು ಭೇದಗಳಿವೆ.

## ನಾಲ್ಕು ಜಾತಿಯ ದೇವತೆಗಳ ಸಾಮಾನ್ಯ ಭೇದ.

**ಇಂದ್ರಸಾಮಾನಿಕತ್ರಾಯಸ್ತ್ರಿಂಶ ಪಾರಿಷದಾತ್ಮರಕ್ಷ ಲೋಕಪಾಲಾನೀಕಪ್ರಕೀರ್ಣಕಾಭಿಯೋಗ್ಯಕಿಲ್ಬಿಷಿ – –ಕಾಶ್ಚೈಕಶಃ ॥ ೪ ॥**

ಅರ್ಥ— ಮೇಲೆ ಬರೆದ ನಾಲ್ಕು ಜಾತಿಯ ದೇವತೆಗಳಲ್ಲಿ ಇಂದ್ರ, ಸಾಮಾನಿಕ, ತ್ರಾಯಸ್ತ್ರಿಂಶ, ಪಾರಿಷದ, ಆತ್ಮರಕ್ಷ, ಲೋಕಪಾಲ, ಅನೀಕ ಪ್ರಕೀರ್ಣಕ, ಅಭಿಯೋಗ್ಯ ಇವೆ. ಮತ್ತು ಕಿಲ್ಬಿಷಿಕ ಎಂಬುದಾಗಿ ಹತ್ತು ಭೇದಗಳು □ ಇಂದ್ರ–ಯಾವ ದೇವತೆಗಳು ಬೇರೆ ದೇವತಗಳಲ್ಲಿ ಇಲ್ಲದಿರುವ ಅಣಮಾ–ಮಹಿಮಾ ಮೊದಲಾದ ಋದ್ಧಿಗಳಿಂದ ಕೂಡಿರುತ್ತಾರೋ ಅವರು ಇಂದ್ರದೇವತೆಗಳು. ಅಂದರೆ ಲೋಕದಲ್ಲಿರುವ ರಾಜರಿಗೆ ಸಮಾನರಾದವರು.

ಸಾಮಾನಿಕ—ಸಾಮಾನಿಕ ದೇವತೆಗಳ ಆಯುಷ್ಯ, ವೀರ್ಯ ಮತ್ತು ಭೋಗಗಳು ಇಂದ್ರನಿಗೆ ಸಮಾನವಾಗಿರುವವು. ಆದರೆ ಇಂದ್ರನಿಗಿರುವ ಆಜ್ಞೆ ಮತ್ತು ಐಶ್ವರ್ಯಗಳಿರುವುದಿಲ್ಲ. ಈ ದೇವತೆಗಳು ವ್ಯವಹಾರದಲ್ಲಿರುವ ತಂದೆ–ಗುರು ಮೊದಲಾದಂತಿರುವರು.

ತ್ರಾಯಸ್ತ್ರಿಂಶ— ಯಾವ ದೇವತೆಗಳು ಮಂತ್ರೀ ಪುರೋಹಿತರಿಗೆ, ಸಮಾನರಾಗಿರುವರೋ ಅವರು ತ್ರಾಯಸ್ತ್ರಿಂಶ ದೇವತೆಗಳು. ಹೆಚ್ಚಾಗಿ ಇವರು ಇಂದ್ರ ಸಭೆಯಲ್ಲಿರುವರು. ಒಬ್ಬ ಇಂದ್ರನ ಸಭೆಯಲ್ಲಿ ೩೩ ತ್ರಾಯಸ್ತ್ರಿಂಶ ದೇವತೆಗಳಿರುವರು.

ಪಾರಿಷದ—ಇವರು ಇಂದ್ರನ ಸಭೆಯನ್ನಲಂಕರಿಸುವುದರಿಂದ ಇವರಿಗೆ ಪಾರಿಷದ ದೇವತೆಗಳೆಂದು ಕರೆಯುವುದಾಗಿದೆ.

ಆತ್ಮರಕ್ಷ— ಈ ದೇವತೆಗಳು ಅಂಗರಕ್ಷಕರಂತಿರುವುದರಿಂದ ಇವರಿಗೆ ಆತ್ಮರಕ್ಷಕರೆಂದು ಕರೆಯಲಾಗುವುದು.

ಅನೀಕ—ಯಾವ ದೇವತೆಗಳು ಕಾಲಾಳು ಮೊದಲಾದ ಏಳು ಪ್ರ
ಸೇನೆಯ ವ್ಯವಹಾರವನ್ನು ಮಾಡುತ್ತಾರೋ ಅವರು ಅನೀಕ ಜಾತಿಯ ದೇವ
ತೆಗಳು.

ಪ್ರಕೀರ್ಣಕ—ಯಾವ ದೇವತೆಗಳು ನಾಗರಿಕರಂತಿರುವರೋ ಅವ
ಪ್ರಕೀರ್ಣಕ ಜಾತಿಯ ದೇವತೆಗಳು.

ಲೋಕಪಾಲ—ಯಾರು ನಗರ ಪಾಲಕನಂತೆ ಜನರ ಪಾಲನೆಯ
ಮಾಡುತ್ತಾರೋ ಆ ದೇವತೆಗಳು ಲೋಕಪಾಲಜಾತಿಯ ದೇವತೆಗಳು.

ಆಭಿಯೋಗ್ಯ— ಯಾವ ದೇವತೆಗಳು ಸೇವಕರಂತಿರುವರೋ ಅವ
ಆಭಿಯೋಗ್ಯ ಜಾತಿಯ ದೇವತೆಗಳು

ಕಿಲ್ಬಿಷಿಕ— ಯಾವ ದೇವತೆಗಳು ಚಾಂಡಾಲರಂತೆ ಕೀಳು ತರಹದ ಕೆ
ಮಾಡುವವರೋ ಅವರು ಕಿಲ್ಬಿಷಜಾತಿಯ ದೇವತೆಗಳು.

ವ್ಯಂತರ ಮತ್ತು ಜ್ಯೋತಿಷ್ಯ ದೇವತೆಗಳಲ್ಲಿರುವ ವ್ಯವಸ್ಥೆ.

## ತ್ರಾಯಸ್ತ್ರಿಂಶಲ್ಲೋಕಪಾಲವರ್ಜ್ಯಾ ವ್ಯಂ ಜ್ಯೋತಿಷ್ಕಾಃ ॥ ೫ ॥

ಅರ್ಥ— ವ್ಯಂತರ ಮತ್ತು ಜ್ಯೋತಿಷ ಜಾತಿಯ ದೇವತೆಗಳಲ್ಲಿ ತ್ರಾ
ತ್ರಿಂಶ ಮತ್ತು ಲೋಕಪಾಲರುಗಳೆಂಬ ಭೇದವಿಲ್ಲದೆ ಬೇರೆ ಜಾತಿಯ ಎ
ದೇವತೆಗಳಿರುವರು.

ದೇವತೆಗಳಲ್ಲಿ ಇಂದ್ರರ ವಿಚಾರ

## ಪೂರ್ವಯೋರ್ದ್ವೀಂದ್ರಾಃ ॥ ೬ ॥

ಅರ್ಥ— ಭವನವಾಸೀ ವ್ಯಂತರ ದೇವತೆಗಳ ಪ್ರತ್ಯೇಕ ವಿಭಾಗದ ಪ್ರ
ಗಳಲ್ಲಿ ಎರಡೆರಡು ಇಂದ್ರರು ಇರುತ್ತಾರೆ. ಹತ್ತು ಭೇದಗಳುಳ್ಳ ಭವನ
ಳಲ್ಲಿ ೨೦ ಇಂದ್ರರೂ, ಎಂಟು ಭೇದಗಳುಳ್ಳ ವ್ಯಂತರ ದೇವತೆಗಳಲ್ಲಿ
ಇಂದ್ರರೂ ಇರುವರಲ್ಲದೆ ಇಷ್ಟೇ ಪ್ರತೀಂದ್ರರುಗಳೂ ಇರುತ್ತಾರೆ.

ದೇವತೆಗಳಿಗಿರುವ ಸ್ತ್ರೀಸುಖ

## ಕಾಯಪ್ರವೀಚಾರಾ ಆ ಐಶಾನಾತ್ ॥ ೭ ॥

ಅರ್ಥ— ಈಶಾನ ಸ್ವರ್ಗಪರ್ಯಂತರಗಿರುವ ದೇವತೆಗಳು ಅಂದರೆ ಭವನ ವಾಸೀ. ವ್ಯಂತರ ಮತ್ತು ಜ್ಯೋತಿಷಿ ದೇವತೆಗಳೂ ಹಾಗೇನೆಯೇ ಸೌಧರ್ಮ ಮತ್ತು ಈಶಾನಸ್ವರ್ಗಡವರೆಗಿರುವ ದೇವತೆಗಳು ಮನುಷ್ಯರಂತೆ ಕಾಮಸುಖ ವನ್ನು ಅನುಭವಿಸುತ್ತಾರೆ.

## ಶೇಷಾಃಸ್ಪರ್ಶರೂಪಶಬ್ದಮನಃಪ್ರವೀಚಾರಾಃ ॥ ೮ ॥

ಅರ್ಥ— ಉಳಿದ ಸ್ವರ್ಗಗಳ ದೇವತೆಗಳು ಸ್ತ್ರೀಯರ ಸ್ಪರ್ಶ ದಿಂದಲೂ, ಅವರ ಸುಂದರ ರೂಪವನ್ನು ನೋಡುವುದರಿಂದಲೂ, ಅವರ ಮಧುರ ಶಬ್ದವನ್ನು ಕೇಳುವುದರಿಂದಲೂ ಹಾಗೇನೆಯೇ ಅವರನ್ನು ಮನಸ್ಸಿನಲ್ಲಿ ನೆನಸುವಿಕೆಯಿಂದಲೂ ತೃಪ್ತಿಹೊಂದುತ್ತಾರೆ. ಅಂದಕೆ ೩ ನೇ ಮತ್ತು ೪ ನೇ ಸ್ವರ್ಗಗಳ ದೇವತೆಗಳು ದೇವಾಂಗನೆಯವರ ಕೋಮಲ ಶರೀರದ ಸ್ಪರ್ಶನ ದಿಂದಲೂ, ೫-೬-೭ ಮತ್ತು ೮ ನೇ ಸ್ವರ್ಗಗಳಲ್ಲಿರುವ ದೇವತೆಗಳು ಅವುಗಳಲ್ಲಿ ರುವ ದೇವಿಯರ ಸುಂದರರೂಪವನ್ನು ನೋಡುವುದರಿಂದಲೂ, ೮-೧೦-೧೧ ಮತ್ತು ೧೨ ನೇ ಸ್ವರ್ಗಗಳಲ್ಲಿರುವ ದೇವತೆಗಳು ಆಯಾಯ ಸ್ವರ್ಗಗಳಲ್ಲಿರುವ ದೇವಾಂಗನೆಯರ ಮಧುರ ಶಬ್ದವನ್ನು ಕೇಳುವುದರಿಂದಲೂ, ಹಾಗೇನೆಯೇ ೧೩, ೧೪, ೧೫ ಮತ್ತು ೧೬ ನೇ ಸ್ವರ್ಗಗಳಲ್ಲಿರುವ ದೇವತೆಗಳು ಅಲ್ಲಿರುವ ದೇವಿಯರನ್ನು ಮನಸ್ಸಿನಲ್ಲಿ ನೆನಸುವ ಮಾತ್ರದಿಂದಲೇ ತೃಪ್ತರಾಗುತ್ತಾರೆ.

## ಪರೇಽಪ್ರವಿಚಾರಾಃ ॥ ೯ ॥

ಅರ್ಥ— ೧೬ ನೇ ಸ್ವರ್ಗದ ಮೇಲಣ ದೇವತೆಗಳು ಕಾಮಸೇವನೆ ಇಲ್ಲದ ವರು. [ಅಪ್ರವೀಚಾರ ಎಂಬುದಾಗಿ ಶಾಸ್ತ್ರ ಸಂಜ್ಞೆಯು.] ಆ ದೇವತೆಗಳಲ್ಲಿ ಕಾಮಪೀಡೆಯೇ ಇಲ್ಲದಿರುವುದರಿಂದ ಅವರು ಸುಖಿಗಳೆಂದು ತಿಳಿಯಬೇಕು.

ಭವನವಾಸಿ ದೇವತೆಗಳ ಭೇದ.

**ಭವನವಾಸಿನೋಽಸುರನಾಗವಿದ್ಯುತ್ಸುಪರ್ಣಾ
ವಾತಸ್ತನಿತೋದಧಿದ್ವೀಪದಿಕ್ಕುಮಾರಾ: ॥ ೧೦ ॥**

ಅರ್ಥ--ಭವನವಾಸಿ ದೇವತೆಗಳಲ್ಲಿ ಅಸುರಕುಮಾರ, ನಾಗಕು ವಿದ್ಯುತ್‌ಕುಮಾರ, ಸುಪರ್ಣಕುಮಾರ, ಅಗ್ನಿಕುಮಾರ, ವಾತಕು ಸ್ತನಿತ್ತಕುಮಾರ, ಉದಧಿಕುಮಾರ, ದ್ವೀಪಕುಮಾರ ಮತ್ತು ದಿಕ್ಕುಮಾ ೧೦ ಭೇದವಿದೆ.

ಜನ್ಮದಿಂದ ಮರಣದವರೆಗೆ ಒಂದು ರೂಪದಲ್ಲಿ ಇದ್ದರೂ ಇವರ ಭೂಷಣ ಭಾವ ಮತ್ತು ಆಟಗಳು ಎಲ್ಲಾ ಕುಮಾರರಂತೆ ಇರುವ ಇವರಿಗೆ ಕುಮಾರರೆಂತ ಹೇಳಲಾಗಿದೆ.

ವ್ಯಂತರರ ಭೇದ

**ವ್ಯಂತರಾ: ಕಿನ್ನರಕಿಂಪುರುಷಮಹೋರಗಗಂಧ
ಯಕ್ಷರಾಕ್ಷಸಭೂತಪಿಶಾಚಾ: ॥ ೧೧ ॥**

ಅರ್ಥ— ವ್ಯಂತರ ದೇವತೆಗಳಲ್ಲಿ ಕಿನ್ನರ, ಕಿಂಪುರುಷ, ಮಹೋ ಗಂಧರ್ವ, ಯಕ್ಷ, ರಾಕ್ಷಸ, ಭೂತ ಮತ್ತು ಪಿಶಾಚಗಳೆಂದು ೮ ಭೇದವಿ

ಜ್ಯೋತಿಷ್ಕ ದೇವತೆಗಳ ಭೇದ.

**ಜ್ಯೋತಿಷ್ಕಾ: ಸೂರ್ಯಾಚಂದ್ರಮಸೌ ಗ್ರಹನಕ್ಷ
ಪ್ರಕೀರ್ಣಕತಾರಕಾಶ್ಚ ॥ ೧೨ ॥**

ಅರ್ಥ—ಜ್ಯೋತಿಷ್ಕ ದೇವತೆಗಳ ಸೂರ್ಯ, ಚಂದ್ರ, ಗ್ರಹ, ನ ಮತ್ತು ಪ್ರಕೀರ್ಣಕ ತಾರೆಗಳ ಭೇದದಿಂದ ೫ ಭೇದಗಳಿವೆ. ಜ್ಯೋತಿಷ್ಕ ತೆಗಳ ನಿವಾಸವು ಈ ಮಧ್ಯಮಲೋಕದಿಂದ ೭೯೦ ಯೋಜನದ ಮೇಲೆ ಯೋಜನದ ಕೆಳಗಣ ಭಾಗದೊಳಗೆ ಇರುವದು.

## ಜ್ಯೋತಿಷ್ಕ ದೇವತೆಗಳ ವಿಶೇಷ.

## ಮೇರುಪ್ರದಕ್ಷಿಣಾ ನಿತ್ಯಗತಯೋ ನೃಲೋಕೇ ॥ ೧೩ ॥

ಅರ್ಥ— ಜ್ಯೋತಿಷ್ಕದೇವತೆಗಳು ಮನುಷ್ಯಲೋಕದಲ್ಲಿ (ಎರಡೂವರೆ ದ್ವೀಪಗಳಲ್ಲಿ) ಮೇರುವಿನ ಪ್ರದಕ್ಷಿಣೆಯನ್ನು ಮಾಡುತ್ತಾ ನಿತ್ಯವೂ ಗತಿಶೀಲರಾಗಿರುವರು. ಈ ದೇವತೆಗಳ ಕರ್ಮವು ಗತಿಶೀಲರೂಪದಿಂದಲೇ ನಾಶವಾಗುವುದು. ಅಂದರೆ ಮನುಷ್ಯಲೋಕದವರೆಗಿನ ಸೂರ್ಯ ಚಂದ್ರರು ಮೇರುಪರ್ವತಕ್ಕೆ ೧೧೨೧ ಯೋಜನ ದೂರದಿಂದ ಭ್ರಮಣೆ ಮಾಡುತ್ತಿರುತ್ತಾರೆ. ಹೀಗೆ ಜಂಬೂ ದ್ವೀಪದಲ್ಲಿ ೨ ಲವಣ ಸಮುದ್ರದಲ್ಲಿ ೪ ಧಾತಕೀ ಖಂಡದಲ್ಲಿ ೧೨ ಕಾಲೋದಧಿಯಲ್ಲಿ ೪೨ ಪುಷ್ಕರಾರ್ಧದಲ್ಲಿ ೭೨ ಚಂದ್ರರಿರುತ್ತಾರೆ. ಒಬ್ಬ ಚಂದ್ರನ ವಿಚಾರದಲ್ಲಿ ೧ ಸೂರ್ಯ ೮೮ ಗ್ರಹಗಳ ನಕ್ಷತ್ರಗಳು, ೬೯೭೫೦ ಕೋಟಾಕೋಟಿ ತಾರೆಗಳಿರುತ್ತವೆ.

— ಮತ್ತು —

## ತತ್ಕೃತ: ಕಾಲವಿಭಾಗಃ ॥ ೧೪ ॥

ಅರ್ಥ— ಕಾಲಚಕ್ರದ ಭೇದಗಳಾದ ಕ್ಷಣ, ಘಳಿಗೆ, ದಿನರಾತ್ರಿ ಮೊದಲಾದ ವ್ಯವಹಾರಕಾಲವು ಈ ಜ್ಯೋತಿಷ್ಕದೇವತೆಗಳ ಗತಿಶೀಲತೆಯಿಂದಲೇ ಆಗುತ್ತದೆ. ಇದರಿಂದ ವ್ಯವಹಾರ ಮತ್ತು ನಿಶ್ಚಯ ಕಾಲದ ಜ್ಞಾನವಾಗುತ್ತದೆ.

— ಮತ್ತು —

## ಬಹಿರವಸ್ಥಿತಾಃ ॥ ೧೫ ॥

ಅರ್ಥ—ಮನುಷ್ಯ ಲೋಕದ ಹೊರಗಿರುವ ಜ್ಯೋತಿಷ್ಕ ದೇವತೆಗಳು ಸ್ಥಿರವಾಗಿರುತ್ತಾರೆ. ಈ ಸೂತ್ರವನ್ನು ಹೇಳುವ ಪ್ರಯೋಜನವೆಂದರೆ ಹೊರಗೆಯೂ ಗ್ರಹಗಳಿರುತ್ತವೆ. ಆದರೆ ಅವು ಸ್ಥಿರವಾಗಿರುತ್ತವೆ.

## ವೈಮಾನಿಕ ದೇವತೆಗಳು.

## ವೈಮಾನಿಕಾಃ ॥ ೧೬ ॥

ಅರ್ಥ— ಈ ಸೂತ್ರದಿಂದ ಹಿಡಿದು ವೈಮಾನಿಕದೇವತೆಗಳ ವರ್ಣನೆಯು ಮಾಡಲಾಗುತ್ತದೆ.

ವಿಮಾನ:— ಇವುಗಳಲ್ಲಿರುವ ದೇವತೆಗಳು ತಮ್ಮನ್ನು ಹೆಚ್ಚಾದ ಸ್ಥಾ
ತ್ರರೆಂದು ತಿಳಿಯುವುದರಿಂದ ವಿಮಾನವೆಂಬ ಹೆಸರು. ಈ ವಿಮಾ
ರುವವರು ವೈಮಾನಿಕರು.

ವೈಮಾನಿಕ ದೇವತೆಗಳ ಭೇದ,

## ಕಲ್ಪೋಪಪನ್ನಾಃ ಕಲ್ಪಾತೀತಾಶ್ಚ ॥ ೧೭ ॥

ಅರ್ಥ—ವೈಮಾನಿಕ ದೇವತೆಗಳಲ್ಲಿ ಕಲ್ಪೋಪಪನ್ನ ಮತ್ತು ಕಲ್ಪಾ
ರೆಂದು ಎರಡು ಭೇದವಿದೆ. ಮೇಲೆ ಬರೆದ ಇಂದ್ರ, ಸಾಮಾನಿಕ ಮೊ
ಭೇದವಿಭಾಗ ಎಲ್ಲಿಯವರೆಗೆ ಇರುವದೋ ಅಂತಹ ೧೬ ಸ್ವರ್ಗಗಳಿಗೆ
ಎಂದು ಹೆಸರು. ಇದರಲ್ಲಿ ಹುಟ್ಟುವವರಿಗೆ ಕಲ್ಪೋಪನ್ನರೆಂದು ಹೆ
ಯಾವ ದೇವತೆಗಳು ೧೬ ಸ್ವರ್ಗದಿಂದಲೂ ಮೇಲಿರುವ ಅನುದಿಶೆ ಮೊ
ವಿಮಾನಗಳಲ್ಲಿ ಹುಟ್ಟುವರೋ ಆ ದೇವತೆಗಳಿಗೆ ಕಲ್ಪಾತೀತ ದೇವತೆ
ಹೆಸರು.

ಕಲ್ಪವಿಮಾನಗಳ ರಚನೆ.

## ಉಪರ್ಯುಪರಿ ॥ ೧೮ ॥

ಅರ್ಥ— ೧೬ ಸ್ವರ್ಗಗಳ ಎಂಟು ಜೋಡುಗಳೂ, ನವಗ್ರೈವೇಯಕ
ನವಾನುದಿಶೆಗಳೂ, ಮತ್ತು ಪಂಚಾನುತ್ತರ ವಿಮಾನಗಳೂ ಒಂದರಿಂದ
ವಿಮಾನಗಳು ಮೇಲೆ ಮೇಲೆ ಇವೆ.

ವೈಮಾನಿಕ ದೇವತೆಗಳಿರುವ ಸ್ಥಾನ

## ಸೌಧರ್ಮೈಶಾನಸಾನತ್ಕುಮಾರಮಾಹೇಂದ್ರ-
## ಬ್ರಹ್ಮಬ್ರಹ್ಮೋತ್ತರಲಾಂತವಕಾಪಿಷ್ಟಶುಕ್ರಮಹಾ-
## ಶುಕ್ರಶತಾರಸಹಸ್ರಾರೇಷ್ವಾನತಪ್ರಾಣತಯೋರಾರ
## -ಚ್ಯುತಯೋರ್ನವಸು ಗ್ರೈವೇಯಕೇಷು
## ವಿಜಯವೈಜಯಂತಜಯಂತಾಪರಾಜಿತೇ
## ಸರ್ವಾರ್ಥಸಿದ್ಧೌ ಚ ॥ ೧೯ ॥

ಅರ್ಥ— ಸೌಧರ್ಮ-ಈಶಾನ, ಸಾನತ್ಕುಮಾರ-ಮಾಹೇಂದ್ರ, ಬ್ರ
ಬ್ರಹ್ಮೋತ್ತರ, ಲಾಂತವ-ಕಾಪಿಷ್ಟ, ಶುಕ್ರ-ಮಹಾಶುಕ್ರ, ಸತಾರ-ಸಹ

ಎಂಬ ಆರು ಯುಗಲಗಳಲ್ಲಿ, ಆನತ-ಪ್ರಾಣತಗಳಲ್ಲಿ, ಆರಣ-ಅಚ್ಯುತ ಸ್ವರ್ಗಗಳಲ್ಲಿ, ನವಗ್ರೈವೇಕ ವಿಮಾನಗಳಲ್ಲಿ, ನವಾನುದಿಶೆ ವಿಮಾನಗಳಲ್ಲಿ ಮತ್ತು ವಿಜಯ, ವೈಜಯಂತ, ಜಯಂತ, ಅಪರಾಜಿತ ಮತ್ತು ಸರ್ವಾರ್ಥಸಿದ್ಧಿಗಳೆಂಬ ಪಂಚಾನುತ್ತರ ವಿಮಾನಗಳಲ್ಲಿ ವೈಮಾನಿಕ ದೇವತೆಗಳಿರುತ್ತಾರೆ. ಈ ಸೂತ್ರದಲ್ಲಿ ಅನುದಿಶೆಗಳನ್ನು ತಿಳಿಸುವ ಶಬ್ದವಿಲ್ಲದಿದ್ದರೂ "ನವಸು" ಎಂಬ ಸೂತ್ರವಿಭಾಗದಿಂದ ಅನುದಿಶೆ, ವಿಮಾನಗಳೂ ಇವೆ ಎಂಬುದನ್ನು ಅರಿಯಬೇಕು.

ವೈಮಾನಿಕ ದೇವತೆಗಳಲ್ಲಿರುವ ವಿಶೇಷತೆ.

ಸ್ಥಿತಿಪ್ರಭಾವಸುಖದ್ಯುತಿಲೇಶ್ಯಾವಿಶುದ್ಧೀಂದ್ರಿಯಾವಧಿವಿಷಯತೋऽಧಿಕಾಃ || ೨೦ ||

ಅರ್ಥ— ವೈಮಾನಿಕ ದೇವತೆಗಳು, ಆಯು, ಪ್ರಭಾವ, ಸುಖ, ದ್ಯುತಿ, ಲೇಶ್ಯೆಗಳ ಪರಿಶುದ್ಧತೆ, ಇಂದ್ರಿಯ ಸುಖ, ಮತ್ತು ಅವಧಿಜ್ಞಾನದ ವಿಷಯಗಳಿಂದ ಕೆಳಗಿನ ದೇವತೆಗಳಿಂದ ಮೇಲೆ ಮೇಲೆ ಇರುವ ದೇವತೆಗಳು ಹೆಚ್ಚಿನವರು.

ವೈಮಾನಿಕರಲ್ಲಿರುವ ಹೀನತೆ.

ಗತಿಶರೀರಪರಿಗ್ರಹಾಭಿಮಾನತೋ ಹೀನಾಃ || ೨೧ ||

ಅರ್ಥ— ಮೇಲೆ ಮೇಲೆ ಇರುವ ವೈಮಾನಿಕರು ಗತಿ, ಶರೀರ, ಪರಿಗ್ರಹ ಮತ್ತು ಅಭಿಮಾನಗಳಿಂದ ಕಮ್ಮಿಯಾಗಿರುವರು. ಹದಿನಾರನೆಯ ಸ್ವರ್ಗದ ಮೇಲಿರುವ ವೈಮಾನಿಕರು ತಮ್ಮ ವಿಮಾನಗಳನ್ನು ಬಿಟ್ಟು ಬೇರೆ ಕಡೆಗೆ ಹೋಗುವುದಿಲ್ಲ. ಮೇಲೆ ಹೋದಂತೆ ವೈಭವಗಳು ಹೆಚ್ಚು. ಅವರಲ್ಲಿ ಗಮನಾಗಮನ ಪರಿಗ್ರಹ ಅಭಿಮಾನಗಳು ಕಮ್ಮಿ ಇರುತ್ತವೆ.

### ವೈಮಾನಿಕ ದೇವತೆಗಳ ಶರೀರದ ಪ್ರಮಾಣವು.

| ಸ್ವರ್ಗ | ಶರೀರ ಪ್ರಮಾಣ | ಸ್ವರ್ಗ | ಶರೀರ ಪ್ರಮಾಣ |
|---|---|---|---|
| ೧—೨ | ೭ ಹಸ್ತ | ೩—೪ | ೬ ಹಸ್ತ |
| ೫—೮ | ೫ " | ೯—೧೨ | ೪ " |
| ೧೩—೧೪ | ೩॥ " | ೧೫—೧೬ | ೩ " |
| ಕೆಳಗಿನ ಗ್ರೈವೇಯಕ | ೨॥ " | ಮಧ್ಯ ಗ್ರೈವೇಯಕ | ೨ " |
| ಉಪರಿಮ ಗ್ರೈವೇಯಕ ಮತ್ತು ಅನುದಿಶೆ | — ೧॥ | ಅನುತ್ತರ ವಿಮಾನ | ೧ " |

### ವೈಮಾನಿಕರಲ್ಲಿರುವ ಲೇಶ್ಯೆಗಳು.

## ಪೀತಪದ್ಮಶುಕ್ಲಲೇಶ್ಯಾ ದ್ವಿತ್ರಿಶೇಷೇಷು ॥ ೨೨ ॥

ಅರ್ಥ—ವೈಮಾನಿಕರ ಎರಡು ಯುಗಲಗಳಲ್ಲಿ, ಮೂರು ಯುಗಲಗಳಲ್ಲಿ ಮತ್ತು ಉಳಿದ ಎಲ್ಲಾ ವಿಮಾನಗಳಲ್ಲಿ ಕ್ರಮದಿಂದ ಪೀತ-ಪದ್ಮ ಮತ್ತು ಶುಕ್ಲ ಲೇಶ್ಯೆಗಳಿರುತ್ತವೆ. ಅಂದರೆ ೧ ನೇ ಮತ್ತು ೨ ನೇ ಸ್ವರ್ಗಗಳಲ್ಲಿ ಪೀತಲೇಶ್ಯೆಯೂ, ೩—೪ ನೆಯದರಲ್ಲಿ ಪೀತ ಪದ್ಮಲೇಶ್ಯೆಗಳೂ, ೫ ರಿಂದ ಹಿಡಿದು ೮ ನೆಯ ಸ್ವರ್ಗಗಳವರೆಗೆ ಪದ್ಮಲೇಶ್ಯೆಯೂ, ೯ ರಿಂದ ಹಿಡಿದು ೧೨ ನೇ ಸ್ವರ್ಗಗಳ ವರೆಗೆ ಪದ್ಮ ಮತ್ತು ಶುಕ್ಲ ಲೇಶ್ಯೆಯೂ ಮತ್ತು ಉಳಿದ ಎಲ್ಲಾ ವಿಮಾನಗಳಲ್ಲಿ ಶುಕ್ಲಲೇಶ್ಯೆ ಇರುತ್ತದೆ. ಅನುದಿಶೆ ಮತ್ತು ಅನುತ್ತರಗಳ ವಿಮಾನಗಳಲ್ಲಿ ಪರಮ ಶುಕ್ಲ ಲೇಶ್ಯೆ ಇರುತ್ತದೆ.

### ಕಲ್ಪಸಂಜ್ಞೆಯು ಎಲ್ಲಿಯುವರೆಗೆ ?

## ಪ್ರಾಗ್ಗ್ರೈವೇಯಕೇಭ್ಯಃ ಕಲ್ಪಾಃ ॥ ೨೩ ॥

ಅರ್ಥ—ಗ್ರೈವೇಯಕಗಳ ಮೊದಲು ಅಂದರ ೧೬ ನೇ ಸ್ವರ್ಗಗಳವರೆಗೆ ಕಲ್ಪವೆಂಬ ಸಂಜ್ಞೆ ಇದೆ, ಇವುಗಳ ಮೇಲಿರುವ ವಿಮಾನಗಳು ಕಲ್ಪಾತೀತಗಳೆಂದು ಕರೆಯಲ್ಪಡುತ್ತವೆ. ಇವುಗಳಲ್ಲಿರತಕ್ಕ ದೇವತೆಗಳು ಒಂದೇ ಸರಿಸಮಾನವಾದ ವೈಭವಧಾರಿಗಳಾಗಿರುತ್ತಾರೆ. ಮತ್ತು ಇವರಿಗೆ ಅಹಮಿಂದ್ರರೆಂಬ ಅಭಿದಾನವು

ಲೌಕಾಂತಿಕ ದೇವತೆಗಳು

## ಬ್ರಹ್ಮಲೋಕಾಲಯಾ ಲೌಕಾಂತಿಕಾಃ ॥ ೨೪ ॥

ಅರ್ಥ—ಬ್ರಹ್ಮಲೋಕವೇ ಆವಾಸವಾಗಿರುವವರು ಲೌಕಾಂತಿಕ ದೇವತೆಗಳು. ಬ್ರಹ್ಮಲೋಕವೆಂಬ ಐದನೇ ಸ್ವರ್ಗದ ಅಂತಿಮಭಾಗದಲ್ಲಿರುವುದರಿಂದಲೂ ಹಾಗೇನೆಯೇ ಒಂದೇ ಭವಾವತಾರಿಗಳಾಗಿರುವುದರಿಂದಲೂ, [ ಇಲ್ಲಿ ಲೋಕ ಅಂದರೆ ಸಂಸಾರ. ಅದರ ಅಂತ ಅಂದರೆ ಕೊನೆಯಲ್ಲಿರುವವರು ಲೌಕಾಂತಿಕರೆಂದು ಸಂಜ್ಞೆಯು. ] ಲೌಕಾಂತಿಕರೆಂದು ಹೇಳಲ್ಪಡುತ್ತಾರೆ. ಇವರು ದ್ವಾದಶಾಂಗ ಶಾಸ್ತ್ರಗಳನ್ನು ಬಲ್ಲವರೂ, ಬ್ರಹ್ಮಚಾರಿಗಳೂ, ಹಾಗೇನೆಯೇ ತೀರ್ಥಂಕರರ ತಪಃಕಲ್ಯಾಣದಲ್ಲಿಯೇ ಭೂಸಂಚಾರಿಗಳೂ ಆಗಿರುವರು. ಇವರಿಗೆ "ದೇವರ್ಷಿ" ಗಳೆಂದು ಹೇಳುತ್ತಾರೆ.

ಲೌಕಾಂತಿಕ ದೇವತೆಗಳ ವಿಶೇಷ ಭೇದ.

## ಸಾರಸ್ವತಾದಿತ್ಯವಹ್ನ್ಯರುಣಗರ್ದತೋಯತುಷಿತಾ-ನ್ಯಾಬಾಧಾರಿಷ್ಟಾಶ್ಚ ॥ ೨೫ ॥

ಅರ್ಥ-ಸಾರಸ್ವತ, ಆದಿತ್ಯ, ವಹ್ನಿ, ಅರುಣ, ಗರ್ದತೋಯ, ತುಷಿತ, ಅವ್ಯಾಬಾಧ ಮತ್ತು ಅರಿಷ್ಟರೆಂಬ ಎಂಟು ಲೌಕಾಂತಿಕ ದೇವತೆಗಳು. ಇವರು ಬ್ರಹ್ಮಲೋಕ ಎಂಬ ೫ ನೇ ಸ್ವರ್ಗದ ಈಶಾನ ಮೊದಲಾದ ಎಂಟು ದಿಕ್ಕುಗಳಲ್ಲಿರುವರು. ಇವರಲ್ಲಿ ಸಣ್ಣವರು ದೊಡ್ಡವರೆಂಬ ಭೇದವಿಲ್ಲ. ಎಲ್ಲರೂ ಸರಿಸಮಾನರಾಗಿರುತ್ತಾರೆ. ಇವರಲ್ಲಿ ಇಂದ್ರಪದವಿ ಇರುವುದಿಲ್ಲ. ಇವರಹೊರತಾಗಿ ಮತ್ತೆ ಬೇರೆ ಲೌಕಾಂತಿಕ ದೇವತೆಗಳಲ್ಲಿ ಹದಿನಾರು ಪ್ರಕಾರಗಳಿರುತ್ತವೆ.

ಅನುದಿಶೆ ಮತ್ತು ಅನುತ್ತರ ವಿಮಾನವಾಸಿಗಳ ಮುಂದಿನ ಭವಗಳೆಷ್ಟು ?

## ವಿಜಯಾದಿಷು ದ್ವಿಚರಮಾಃ ॥ ೨೬ ॥

ಅರ್ಥ—ವಿಜಯ, ವೈಜಯಂತ, ಜಯಂತ, ಅಪರಾಜಿತ ಮತ್ತು ಅನುದಿಶ ವಿಮಾನವಾಸಿಗಳಾದ ವೈಮಾನಿಕರು, ಎರಡು ಚರಮ ಶರೀರಧಾರಿಗಳಾಗಿ

ರುವರು. ಅಂದರೆ ಎರಡು ಮನುಷ್ಯ ಜನ್ಮವನ್ನು ಪಡೆದು ಮೋಕ್ಷವ
ಹೊಂದುತ್ತಾರೆ. ಆದರೆ ಸರ್ವಾರ್ಥಸಿದ್ಧಿಯಲ್ಲಿರುವ ಅಹಮಿಂದ್ರರು ಒ
ಮನುಷ್ಯಭವವನ್ನು ಪಡೆದು ಮೋಕ್ಷ ಸುಖಕ್ಕೆ ಭಾಗಿಯಾಗುತ್ತಾರೆ.

ತಿರ್ಯಂಚಗಳು ಯಾವುವು ?

**ಔಪಪಾದಿಕಮನುಷ್ಯೇಭ್ಯಃ ಶೇಷಾಸ್ತಿರ್ಯ-**
**ಗ್ಯೋನಯಃ ॥ ೨೭ ॥**

ಅರ್ಥ—ಉಪಪಾದ ಜನ್ಮವನ್ನು ಪಡೆದ ದೇವ ಮತ್ತು ನಾರಕೀಯ
ಮತ್ತು ಮನುಷ್ಯರನ್ನು ಬಿಟ್ಟು ಉಳಿದ ಜೀವಗಳು ತಿರ್ಯಂಚಗಳು ಆ
ವವು. ತಿರ್ಯಂಚ ವರ್ಗವು ತ್ರಸನಾಡಿಯಲ್ಲಿ ಸರ್ವತ್ರ ಇದೆ.

ಭವನವಾಸಿಗಳ ಉತ್ಕೃಷ್ಟ ಆಯು

**ಸ್ಥಿತಿರಸುರನಾಗಸುಪರ್ಣದ್ವೀಪಶೇಷಾಣಾಂ ಸಾ-**
**ರೋಪಮತ್ರಿಪಲ್ಯೋಪಮಾರ್ಧಹೀನಮಿತಾಃ ॥೨೮॥**

ಅರ್ಥ—ಭವನವಾಸಿ ದೇವತೆಗಳಲ್ಲಿರುವ ಅಸುರಕುಮಾರ, ನಾಗಕುಮಾ
ಸುಪರ್ಣಕುಮಾರ ಮತ್ತು ದ್ವೀಪಕುಮಾರ ಮತ್ತು ಉಳಿದ ಆರು ಪ್ರಕಾ
ಕುಮಾರರ ಆಯುಷ್ಯವು ಅನುಕ್ರಮದಿಂದ ೧ ಸಾಗರ, ೩ ಪಲ್ಯ ೨॥ ಪಲ್ಯ
ಪಲ್ಯ ಮತ್ತು ೧॥ ಪಲ್ಯವಾಗಿದೆ.

ವೈಮಾನಿಕ ದೇವತೆಗಳ ಉತ್ಕೃಷ್ಟ ಆಯು.

**ಸೌಧರ್ಮೈಶಾನಯೋಃ ಸಾಗರೋಪಮೇ**
**ಅಧಿಕೇ ॥ ೨೯ ॥**

ಅರ್ಥ—ಸೌಧರ್ಮ ಮತ್ತು ಈಶಾನ ಸ್ವರ್ಗಗಳಲ್ಲಿರುವ ದೇವತೆ
ಉತ್ಕೃಷ್ಟ ಆಯುಷ್ಯವು ಎರಡು ಸಾಗರದಿಂದಲೂ ಸ್ವಲ್ಪ ಹೆಚ್ಚಾಗಿದೆ. ಸೂತ್ರ
ದಲ್ಲಿರುವ " ಸಾಗರೋಪಮೇ " ಎಂಬ ದ್ವಿವಚನ ಪದದಿಂದ ಎರಡು ಸಾಗರ
ಎಂದು ತಿಳಿಯಬೇಕು. ಅದರಿಂದ ಸ್ವಲ್ಪಹೆಚ್ಚೆಂದು ತಿಳಿಯಬೇಕು.

— ಮತ್ತು —

**ಸಾನತ್ಕುಮಾರಮಾಹೇಂದ್ರಯೋಃ ಸಪ್ತ ॥ ೩೦ ॥**

ಅರ್ಥ — ಸಾನತ್ಕುಮಾರ ಮತ್ತು ಮಾಹೇಂದ್ರ ಸ್ವರ್ಗಗಳಲ್ಲಿರುವ ದೇವತೆಗಳ ಆಯುಷ್ಯವು ೭ ಸಾಗರಕ್ಕಿಂತಲೂ ಸ್ವಲ್ಪ ಅಧಿಕವಾಗಿದೆ. ಹಿಂದಿನ ಸೂತ್ರದಿಂದ ಅಧಿಕ ಶಬ್ದದ ಅನುವೃತ್ತಿಯು ಬರುತ್ತದೆ.

—ಮತ್ತು—

**ತ್ರಿಸಪ್ತನವೈಕಾದಶತ್ರಯೋದಶಪಂಚದಶಭಿರಧಿಕಾನಿ×ತು ॥ ೩೧ ॥**

ಅರ್ಥಃ—ಮುಂದಿನ ಯುಗಲಗಳಲ್ಲಿ ೭ ಸಾಗರದಿಂದ ಹಿಡಿದು ೩, ೭, ೯, ೧೧, ೧೩ ಮತ್ತು ೧೫ ಸಾಗರ ಆಯುಷ್ಯವು ಹೆಚ್ಚಾಗಿರುವದೆಂದು ತಿಳಿಯಬೇಕು. ಅಂದರೆ ಬ್ರಹ್ಮ ಮತ್ತು ಬ್ರಹ್ಮೋತ್ತರ ಸ್ವರ್ಗಗಳಲ್ಲಿ ೧೦ ಸಾಗರಕ್ಕಿಂತಲೂ ಸ್ವಲ್ಪ ಅಧಿಕವೂ, ಲಾಂತವ ಮತ್ತು ಕಾಪಿಷ್ಟ ಸ್ವರ್ಗಗಳಲ್ಲಿ ೧೪ ಸಾಗರಕ್ಕಿಂತಲೂ ಸ್ವಲ್ಪ ಅಧಿಕವೂ, ಶುಕ್ರ ಮತ್ತು ಮಹಾಶುಕ್ರಗಳಲ್ಲಿ ೧೬ ಸಾಗರಕ್ಕಿಂತಲೂ ಸ್ವಲ್ಪ ಅಧಿಕವೂ, ಸತಾರ ಮತ್ತು ಸಹಸ್ರಾರ ಸ್ವರ್ಗದಲ್ಲಿ ೧೮ ಸಾಗರಕ್ಕಿಂತಲೂ ಸ್ವಲ್ಪ ಅಧಿಕವೂ ಹಾಗೇನೆಯೇ ಆನತ ಮತ್ತು ಪ್ರಾಣತ ಸ್ವರ್ಗಗಳಲ್ಲಿ ೨೦ ಸಾಗರವೂ, ಅದರಂತೆಯೇ ಆರಣ ಮತ್ತು ಅಚ್ಯುತ ಸ್ವರ್ಗಗಳಲ್ಲಿ ೨೨ ಸಾಗರ ಉತ್ಕೃಷ್ಟ ಆಯುಷ್ಯವೂ ಎಂದು ತಿಳಿಯಬೇಕು. ಸೂತ್ರದಲ್ಲಿರುವ " ತು " ಶಬ್ದದಿಂದ ೧೨ ನೇ ಸ್ವರ್ಗದ ವರೆಗೆ ಅಧಿಕ ಆಯುಷ್ಯವನ್ನು ಗ್ರಹಿಸಬೇಕು. ಯಾಕಂದರೆ ಈ ಸ್ವರ್ಗದವರೆಗೆಯೇ ಘಾತಾಯುಷ್ಕ ಜೀವರ ಉತ್ಪತ್ತಿ ಇರುವದು.

---

ಈ ಹೆಚ್ಚಿನ ಆಯುಷ್ಯವು ಘಾತಾಯುಷ್ಕ ಜೀವಗಳ ಅಪೇಕ್ಷೆಯಿಂದ ಆಗಿದೆ. ಒಂದು ವೇಳೆ ಮೇಲಿನ ಸ್ವರ್ಗದ ಬಂಧವಾಗಿ ನಿಧಾನದಿಂದ ಕೆಳಗಿನ ಸ್ವರ್ಗದಲ್ಲಿ ಬಂದರೆ ಅವರಿಗೆ ಸ್ವಲ್ಪ ಹೆಚ್ಚು ಆಯುಷ್ಯವು ಸ್ವಲ್ಪ ದೊರೆಯುತ್ತದೆ. ಅದಕ್ಕೆ ಘಾತಯುಷ್ಯವೆನ್ನುತ್ತಾರೆ.

—ಮತ್ತು—

## ಆರಣಾಚ್ಯುತಾದೂರ್ಧ್ವಮೇಕೈಕೇನ ನವಸು ಗ್ರೈವೇಯಕೇಷು ವಿಜಯಾದಿಷು ಸರ್ವಾರ್ಥಸಿದ್ಧೌ ಚ ॥೩೨॥

ಅರ್ಥ—ಆರಣ ಮತ್ತು ಅಚ್ಯುತ ಸ್ವರ್ಗಗಳ ಮೇಲಿರುವ ಒಂಭತ್ತು ಗ್ರೈವೇಯಕಗಳಲ್ಲಿಯೂ, ವಿಜಯಾದಿ ನಾಲ್ಕು ವಿಮಾನಗಳಲ್ಲಿಯೂ, ಆದಿ ಶಬ್ದದಿಂದ ಒಂಭತ್ತು ಅನುದಿಶೆ ವಿಮಾನಗಳಲ್ಲಿಯೂ, ಮತ್ತು ಸರ್ವಾರ್ಥಸಿದ್ಧಿ ಎಂಬ ವಿಮಾನದಲ್ಲಿಯೂ ಒಂದೊಂದು ಸಾಗರ ಮೇಲ್ಪಟ್ಟ ಆಯುಷ್ಯವಿದೆ. ಅಂದರೆ ಮೊದಲನೆ ಗ್ರೈವೇಯಕದಲ್ಲಿ ೨೩ ಸಾಗರ ಆಯುವಿನಿಂದ ಹಿಡಿದು ಅಂತಿಮ ಗ್ರೈವೇಯಕದಲ್ಲಿ ೩೧ ಸಾಗರ ಉತ್ಕೃಷ್ಟ ಆಯುಷ್ಯವೂ, ಒಂಭತ್ತು ಅನುದಿಶೆಗಳಲ್ಲಿ ೩೨ ಸಾಗರ ಉತ್ಕೃಷ್ಟ ಸ್ಥಿತಿಯೂ, ಹಾಗೇನೆಯೇ ವಿಜಯ ಮೊದಲುಗೊಂಡಿರುವ ಸರ್ವಾರ್ಥಸಿದ್ಧಿಯ ವರೆಗಿರುವ ಐದು ಅನುತ್ತರ ವಿಮಾನಗಳಲ್ಲಿ ೩೩ ಸಾಗರ ಉತ್ಕೃಷ್ಟ ಆಯುಷ್ಯವೂ ಇದೆ. ಸೂತ್ರದಲ್ಲಿ ಸರ್ವಾರ್ಥಸಿದ್ಧಿ ಎಂಬ ಪದವನ್ನು ಬೇರೆಯಾಗಿ ಬರೆದುದರಿಂದ ಅದರಲ್ಲಿ ಉತ್ಕೃಷ್ಟ ಸ್ಥಿತಿಯು ಹೊರತು ಜಘನ್ಯ ಸ್ಥಿತಿ (ಆಯು) ಇಲ್ಲವೆಂದು ತಿಳಿಯಬೇಕು.

ಸ್ವರ್ಗದಲ್ಲಿರುವ ಜಘನ್ಯ ಆಯು.

## ಅಪರಾ ಪಲ್ಯೋಪಮಮಧಿಕಂ ॥ ೩೩ ॥

ಅರ್ಥ—ಸೌಧರ್ಮ ಮತ್ತು ಈಶಾನ ಸ್ವರ್ಗಗಳಲ್ಲಿರುವವರಿಗೆ ಒಂದು ಪಲ್ಯಕ್ಕಿಂತಲೂ ಸ್ವಲ್ಪ ಅಧಿಕವಾದ ಜಘನ್ಯ ಆಯುಷ್ಯವಿದೆ.

— ಮತ್ತು —

## ಪರತಃ ಪರತಃ ಪೂರ್ವಾಪೂರ್ವಾಽನಂತರಾಃ ॥೩೪॥

ಅರ್ಥ—ಮೊದಲು ಮೊದಲಿರುವ ಯುಗಲ ಸ್ವರ್ಗಗಳ ಯಾವ ಉತ್ಕೃಷ್ಟ ಆಯುಷ್ಯವಿದೆಯೋ ಅದು ಅನಂತರದಲ್ಲಿರುವ ಸ್ವರ್ಗೀಯರ ಜಘನ್ಯ ಆಯುಷ್ಯವಾಗುವುದು. ಹೇಗಂದರೆ ಸೌಧರ್ಮ ಮತ್ತು ಈಶಾನ ಸ್ವರ್ಗಗಳ

ರುವ ಉತ್ಕೃಷ್ಟ ಆಯುಷ್ಯವು ಸಾನತ್ಕುಮಾರ ಮತ್ತು ಮಾಹೇಂದ್ರ ಸ್ವರ್ಗಗಳಲ್ಲಿ ಜಘನ್ಯ ಆಯುಷ್ಯವು. ಇದರಂತೆಯೇ ಮುಂದಿನ ಸ್ವರ್ಗಗಳಲ್ಲಿ ತಿಳಿಯಬೇಕು.

ನಾರಕೀಯರ ಜಘನ್ಯ ಆಯುಷ್ಯ

## ನಾರಾಕಾಣಾಂ ಚ ದ್ವಿತೀಯಾದಿಷು || ೩೫ ||

ಅರ್ಥ—ನಾರಕೀಯರ ಜಘನ್ಯ ಆಯುಷ್ಯವು ಎರಡನೆಯ ನರಕದಿಂದ ತಿಳಿಯಬೇಕು. ಅಂದರೆ ಮೊದಲನೆಯ ನರಕದ ಉತ್ಕೃಷ್ಟ ಆಯುಷ್ಯವು ಎರಡನೇ ನರಕದವರಿಗೆ ಜಘನ್ಯ ಆಯುಷ್ಯವಾಗಿರುವದು.

ಮೊದಲನೆಯ ನರಕದ ಜಘನ್ಯಆಯುಷ್ಯ

## ದಶವರ್ಷಸಹಸ್ರಾಣಿ ಪ್ರಥಮಾಯಾಂ || ೩೬ ||

ಅರ್ಥ—ಮೊದಲನೆಯ ನರಕದಲ್ಲಿರುವ ನಾರಕೀಯರ ಜಘನ್ಯ ಆಯುಷ್ಯವು ೧೦ ಸಾವಿರ ವರ್ಷವು.

ಭವನವಾಸಿಗಳ ಜಘನ್ಯಸ್ಥಿತಿ.

## ಭವನೇಷು ಚ || ೩೭ ||

ಅರ್ಥ—ಭವನವಾಸಿಗಳಲ್ಲಿಯೂ ಜಘನ್ಯ ಆಯುಷ್ಯವು ೧೦ ಸಾವಿರ ವರ್ಷಗಳು ಆಗಿರುವವು.

ವ್ಯಂತರರ ಜಘನ್ಯ ಸ್ಥಿತಿ

## ವ್ಯಂತರಾಣಾಂ ಚ || ೩೮ ||

ಅರ್ಥ—ವ್ಯಂತರ ದೇವತೆಗಳ ಜಘನ್ಯಆಯುಷ್ಯವೂ ೧೦ ಸಾವಿರ ವರ್ಷಗಳು.

ವ್ಯಂತರರ ಉತ್ಕೃಷ್ಟ ಸ್ಥಿತಿ.

## ಪರಾಪಲ್ಯೋಽಮಧಿಕಂ || ೩೯ ||

ಅರ್ಥ—ವ್ಯಂತರರ ಉತ್ಕೃಷ್ಟ ಆಯುಷ್ಯವು ೧ ಪಲ್ಯಕ್ಕಿಂತಲೂ ಸ್ವಲ್ಪ ಅಧಿಕವಾಗಿದೆ.

ಜ್ಯೋತಿಷ್ಕರ ಉತ್ಕೃಷ್ಟ ಸ್ಥಿತಿ.

## ಜ್ಯೋತಿಷ್ಕಾಣಾಂ ಚ ॥ ೪೦ ॥

ಅರ್ಥ— ಜ್ಯೋತಿಷ್ಕ ದೇವತೆಗೆಳ ಉತ್ಕೃಷ್ಟ ಆಯುಷ್ಯವೂ ೧ ಪಲ್ಯ ಕ್ಕಿಂತ ಅಧಿಕವಾಗಿರುವದು.

ಜ್ಯೋತಿಷ್ಕರ ಜಘನ್ಯ ಆಯು.

## ತದಷ್ಟಭಾಗೋಽಪರಾ ॥ ೪೧ ॥

ಅರ್ಥ— ಜ್ಯೋತಿಷ್ಕ ದೇವತೆಗಳ ಜಘನ್ಯ ಆಯುಷ್ಯವು ೧ ಪಲ್ಯದ ನೆಯ ಭಾಗದಲ್ಲೊಂದು ಭಾಗವಾಗಿದೆ.

ಲೌಕಾಂತಿಕ ದೇವತೆಗಳ ಸ್ಥಿತಿ.

## ಲೌಕಾಂತಿಕಾನಾಮಷ್ಟೌ ಸಾಗರೋಪಮಾಣಿ ಸರ್ವೇಷಾಂ ॥ ೪೨ ॥

ಅರ್ಥ—ಎಲ್ಲಾ ಲೌಕಾಂತಿಕದೇವತೆಗಳ ಜಘನ್ಯ ಮತ್ತು ಉತ್ಕೃಷ್ಟ ಆಯುಷ್ಯ ೮ ಸಾಗರ ಪ್ರಮಾಣವಾಗಿದೆ.

ಇತಿ ಶ್ರೀಮದುಮಾಸ್ವಾಮಿವಿರಚಿತೇ ಮೋಕ್ಷಶಾಸ್ತ್ರೇ

ಚತುರ್ಥೋಽಧ್ಯಾಯಃ ॥

# ಪ್ರ ಶ್ನಾ ವ ಳಿ

೧ ಭವನವಾಸಿಗಳಲ್ಲಿ ಯಾವ ಯಾವ ಲೇಶ್ಯೆಗಳಿವೆ ?

೨ ೧೬ ನೇ ಸ್ವರ್ಗದ ಮೇಲಿರುವ ದೇವತೆಗಳು ಪ್ರವೀಚಾರವಿಲ್ಲದೆ ಹೇಗೆ ಸುಖಿಗಳಾಗಿರುವರು ?

೩ ಸಾಮಾನಿಕ, ಆತ್ಮರಕ್ಷ ಮತ್ತು ಕಿಲ್ಬಿಷ ಜಾತಿಯ ದೇವತೆಗಳ ಲಕ್ಷಣ ವೇನು ?

೪ ಸ್ವರ್ಗಲೋಕದ ನಕ್ಷೆ ಬಿಡಿಸಿರಿ.

೫ ಸರ್ವಾರ್ಥಸಿದ್ಧಿಯಲ್ಲಿ ಜಘನ್ಯ ಆಯುಷ್ಯವೆಷ್ಟು ?

೬ ವ್ಯಂತರದೇವತೆಗಳೆಲ್ಲಿರುವರು ?

೭ ಎರಡುವರೆ ದ್ವೀಪಗಳಲ್ಲಿರುವ ಸೂರ್ಯಚಂದ್ರರೆಷ್ಟು ?

೮ ದಿನ ಮೊದಲಾದ ವಿಭಾಗಗಳು ಯಾರಿಂದ ಆಗುವದು ?

೯ ಸ್ವರ್ಗಗಳಲ್ಲಿ ದಿನ ರಾತ್ರಿಗಳಿವೆಯೋ ?

೧೦ ಲೌಕಾಂತಿಕ ದೇವತೆಗಳಿಗೆ ಆಯುಷ್ಯವೆಷ್ಟು ?

# ದೇವಗತಿಯ ಚಿತ್ರ.

| ದೇವ ಭವನವಾಸಿ | ನಿವಾಸ | ಭೇದ | ಇಂದ್ರ | ಲೇಶ್ಯೆ | ಶರೀರದ ಎತ್ತರ | ಉತ್ಕೃಷ್ಟ ಆಯು | ಜಘನ್ಯ ಆಯು | ಪ್ರವೀಚಾರ |
|---|---|---|---|---|---|---|---|---|
| ೧ ಅಸುರಕುಮಾರ | ರತ್ನ ಪ್ರಭೆಯ ಪಂಕ ಭಾಗ | ೧೦ | ೪೦ | ಕೃಷ್ಣ | ೨೫ ಧನು | ೧ ಸಾಗರ | ೧೦ ಸಾವಿರ ವರ್ಷ | ಕಾಯಪ್ರವೀಚಾರ |
| ೨ ನಾಗಕುಮಾರ | | | | ನೀಲ | ೧೦ ಧ. | ೩ ಪಲ್ಯ | | " |
| ೩ ವಿದ್ಯುತ್ಕುಮಾರ | | | | ಕಾಪೋತ | ೧೦ ಧ. | ೧॥ ಪಲ್ಯ | | " |
| ೪ ಸುಪರ್ಣಕುಮಾರ | | | | ಮತ್ತು | ೧೦ ಧ. | ೨॥ " | | " |
| ೫ ಅಗ್ನಿಕುಮಾರ | | | | ಜ. ಪೀತ | ೧೦ ಧ. | ೧॥ " | | " |
| ೬ ವಾತಕುಮಾರ | ಖರಭಾಗದಲ್ಲಿ | | | " | ೧೦ ಧ. | ೧॥ " | | " |
| ೭ ಸ್ತನಿತಕುಮಾರ | | | | " | ೧೦ ಧ. | ೧॥ " | | " |
| ೮ ಉದಧಿಕುಮಾರ | | | | " | ೧೦ ಧ. | ೧॥ " | | " |
| ೯ ದ್ವೀಪಕುಮಾರ | | | | " | ೧೦ ಧ. | ೨॥ ಪಲ್ಯ | | " |
| ೧೦ ದಿಕ್ಕುಮಾರ | | | | " | ೧೦ ಧ. | ೧॥ " | | " |

| ದೇವ ವ್ಯಂತರ | ನಿವಾಸ | ಭೇದ | ಇಂದ್ರ | ಲೇಶ್ಯೆ | ಶರೀರದ ಎತ್ತರ | ಉತ್ಕೃಷ್ಟ ಆಯು | ಜಘನ್ಯ ಆಯು | ಪ್ರವೀಚಾರ |
|---|---|---|---|---|---|---|---|---|
| ೧ ಕಿಂನರ | ಖರಭಾಗ | ೮ | ೩೨ | ಕೃ. ನೀ. | ೧೦ ಧ. | ೧ ಪಲ್ಯ | ೧೦ ಸಾವಿ | ಕಾಯ ಪ್ರವೀಚಾರ |
| ೨ ಕಿಂಪುರುಷ | " | | | ಕಾಪೋತ | ೧೦ ಧ. | ದಿಂದ ಸ್ವ | ರವರ್ಷ | |
| ೩ ಮಹೋರಗ | " | | | ಪ. ಪೀತ | ೧೦ ಧ. | ಲ್ಪ ಅಧಿಕ | | |
| ೪ ಗಂಧರ್ವ | " | | | " | ೧೦ ಧ. | | | |
| ೫ ಯಕ್ಷ | " | | | " | ೧೦ ಧ. | | | |
| ೬ ರಾಕ್ಷಸ | ಪಂಕಬಭಾಗ | | | " | ೧೦ ಧ. | | | |
| ೭ ಭೂತ | ಖರಭಾಗ | | | " | ೧೦ ಧ. | | | |
| ೮ ಪಿಶಾಚ | | | | " | ೧೦ ಧ. | | | |
| ಜ್ಯೋತಿಷಿ | ಸಮಭೂಮಿಯಿಂದ ೭೯೦ ಯೋಜನದಿ ಮೇಲೆ ೯೦೦ ಯೋಜನದ ಒಳಗೆ | | | " | | | | |
| ೧ ಸೂರ್ಯ | | | | " | ೭ ಧ. | ೧ ಪಲ್ಯ | ೧/೮ ಪಲ್ಯ | ಕಾಯ ಪ್ರವೀಚಾರ |
| ೨ ಚಂದ್ರ | | | | " | ೭ ಧ. | ದಿಂದ | | |
| ೩ ಗ್ರಹ | | ೫ | ೨ | " | ೭ ಧ. | ಅಧಿಕ | | |
| ೪ ನಕ್ಷತ್ರ | | | | " | ೭ ಧ. | " | | |
| ೫ ಪ್ರಕೀರ್ಣಕ | | | | " | ೭ ಧ. | " | | |

| ದೇವ ಕಲ್ಪವಾಸಿ | ನಿವಾಸ | ಭೇದ | ಇಂದ್ರ | ಲೇಶ್ಯೆ | ಶರೀರದ ಎತ್ತರ | ಉತ್ಕೃಷ್ಟ ಆಯು | ಜಘನ್ಯ ಆಯು | ಪ್ರವೀಚಾರ |
|---|---|---|---|---|---|---|---|---|
| ಸೌಧರ್ಮ-ಈಶಾನ | ಊರ್ಧ್ವ ಲೋಕ | ೧೨ | ೨೪. | ಪೀತ | ೭ ಹಸ್ತ | ಹೆಚ್ಚಾದ ೨ಸಾಗರ | ಹೆಚ್ಚಾದ ೧ಪಲ್ಯ | ಕಾಯ ಪ್ರವೀಚಾರ |
| ಸಾನತ್ಕುಮಾರಮಾಹೇಂದ್ರ | | | | ಪೀ. ಪ. | ೬ " | ,,೭,, | ,,೨ಸಾಗರ | ಸ್ಪರ್ಶ " |
| ಬ್ರಹ್ಮ-ಬ್ರಹ್ಮೋತ್ತರ | " | | | ಪದ್ಮ | ೫ " | ,,೧೦,, | ,,೭,, | ರೂಪ " |
| ಲಾಂತವ-ಕಾಪಿಷ್ಟ | " | | | ಲೇಶ್ಯಾ | ೫ " | ,,೧೪,, | ,,೧೦,, | ರೂಪ " |
| ಶುಕ್ರ-ಮಹಾಶುಕ್ರ | " | | | " | ೪ " | ,,೧೬,, | ,,೧೪,, | ಶಬ್ದ " |
| ಶತಾರ-ಸಹಸ್ರಾರ | " | | | ಪ. ಶು. | ೪ " | ,,೧೮,, | ,,೧೬,, | ಶಬ್ದ " |
| ಆನತ-ಪ್ರಾಣತ | " | | | " | ೩॥ " | ೨೦ಸಾಗರ | ,,೧೮,, | ಮನ " |
| ಆರಣ-ಅಚ್ಯುತ | " | | | ಶುಕ್ಲ | ೩ ಹಸ್ತ | ೨೨ " | ,,೨೦,, | ಮನ " |
| ಒಂಭತ್ತು ಗ್ರೈವೇಯಕ | | | | | | | | |
| ಸುದರ್ಶನ | " | | ಅಹ | " | ೨॥ ಹಸ್ತ | ೨೩ " | ೨೨ " | ಅಪ್ರವೀಚಾರ |
| ಅಮೋಘ | " | | ಮಿಂದ | " | " | ೨೪ " | ೨೩ " | " |
| ಸುಪ್ರಬುದ್ಧ | " | | " | " | " | ೨೫ " | ೨೪ " | " |
| ಯಶೋಧರ | " | | | " | " | ೨೬ " | ೨೫ " | " |
| ಸುಭದ್ರ | " | | | " | " | ೨೭ " | ೨೬ " | " |
| ವಿಶಾಲ | " | | | " | " | ೨೮ " | ೨೭ " | " |
| ಸುಮನ | " | | | " | ೧॥ | ೨೯ " | ೨೮ " | " |

| ದೇವ | ನಿವಾಸ | ಭೇದ | ಇಂದ್ರ | ಲೇಶ್ಯೆ | ಶರೀರದ ಎತ್ತರ | ಉತ್ಕೃಷ್ಟ ಆಯು | ಜಘನ್ಯ ಆಯು | ಪ್ರವೀಚಾರ |
|---|---|---|---|---|---|---|---|---|
| ಸೌಮನ | ಊರ್ಧ್ವ | | | ಶುಕ್ಲ | ೧॥ ಹಸ್ತ | ೩೦ ಸಾಗರ | ೨೯ ಸಾಗರ | ಅಪ್ರವೀಚಾರ |
| ಪ್ರೀತಿಂಕರ | ಲೋಕ | | | ” | ” | ೩೧ ” | ೩೦ ” | ” |
| ಒಂಭತ್ತು ಅನುದಿಶೆ | | | | | ” | | | |
| ಆದಿತ್ಯ | | | | ಪರಮ | ” | ೩೨ ಸಾಗರ | ೩೧ ಸಾಗರ | |
| ಅರ್ಚಿ | ” | | | ಶುಕ್ಲ | ” | ” | ” | ” |
| ಅರ್ಚಿಮಾಲೀ | ” | | | ” | ” | ” | ” | ” |
| ವೈರೋಚನ | ” | | | ” | ” | ” | ” | ” |
| ಪ್ರಭಾಸ | ” | | | ” | ” | ” | ” | ” |
| ಅರ್ಚಿಪ್ರಭ | ” | | | ” | ” | ” | ” | ” |
| ಅರ್ಚಿರ್ಮಧ್ಯ | ” | | | ” | ” | ” | ” | ” |
| ಅರ್ಚಿರಾವರ್ತ | ” | | | ” | ” | ” | ” | ” |
| ಅರ್ಚಿರ್ವಿಶಿಷ್ಟ | ” | | | ” | | | | ” |
| ಅನುತ್ತರ | ” | | | | | | | ” |
| ವಿಜಯ | ” | | | ” | ” | ೩೩ ಸಾಗರ | ೩೩ ಸಾಗರ | ” |
| ವೈಜಯಂತ | ” | | | ” | ” | ” | ” | ” |
| ಜಯಂತ | ” | | | ” | ” | ” | ” | ” |
| ಅಪರಾಜಿತ | ” | | | ” | ” | ” | ” | ” |
| ಸರ್ವಾರ್ಥಸಿದ್ಧಿ | ” | | | ” | ” | ” | ” | ” |

# ಐದನೇ ಅಧ್ಯಾಯ

## (ಪಂಚಮ ಅಧ್ಯಾಯ)

### ಅಜೀವ ತತ್ವದ ವರ್ಣನೆ

**ಅಜೀವಕಾಯಾ ಧರ್ಮಾಧರ್ಮಾಕಾಶಪುದ್ಗಲಾಃ॥೧॥**

ಅರ್ಥ— ಧರ್ಮದ್ರವ್ಯ, ಅಧರ್ಮದ್ರವ್ಯ. ಆಕಾಶದ್ರವ್ಯ ಮತ್ತು ಪುದ್ಗಲದ್ರವ್ಯ ಈ ನಾಲ್ಕು ದ್ರವ್ಯಗಳು ಅಜೀವ ಮತ್ತು ಬಹುಪ್ರದೇಶಿಗಳಾಗಿರುವವು. ಕಾಲದ್ರವ್ಯವು ಬಹು ಪ್ರದೇಶಿಯಾಗದೆ ಅಣುರೂಪವಾಗಿರುವುದರಿಂದ ಕಾಲದ್ರವ್ಯವನ್ನು ಈ ಸೂತ್ರದಲ್ಲಿ ಸೇರಿಸಲಿಲ್ಲ.

### ದ್ರವ್ಯಗಳ ಎಣಿಕೆ.

**ದ್ರವ್ಯಾಣಿ॥೨॥**

ಅರ್ಥ— ಮೇಲೆ ಬರೆದ ನಾಲ್ಕು ಅಜೀವ ವಸ್ತುಗಳು ದ್ರವ್ಯಗಳು ಎಂಬ ಸಂಜ್ಞೆಯಿಂದಲೂ ಕರೆಯಲಾಗುವದು.

—ಮತ್ತು—

**ಜೀವಾಶ್ಚ॥೩॥**

ಅರ್ಥ— ಜೀವವೂ ಒಂದು ದ್ರವ್ಯವು. ಅಂದರೆ ಜೀವಿತತ್ವವು ಜೀವದ್ರವ್ಯ ಎಂದು ಕರೆಯಲಾಗುವದು. ಸೂತ್ರದಲ್ಲಿ "ಜೀವಾಃ" ಎಂಬ ಬಹುವಚನ ಪದದಿಂದ ಜೀವರುಗಳಲ್ಲಿ ಅನೇಕ ಭೇದಗಳಿವೆ ಎಂಬುದು ಸೂಚಿತವಾಗುತ್ತದೆ. ಇದರ ಹೊರತು ಇದೇ ಅಧ್ಯಾಯದ ೩೯ನೇ ಸೂತ್ರದಲ್ಲಿ ಕಾಲದ್ರವ್ಯದ ವರ್ಣನೆ ಇರುವುದರಿಂದ, ಈ ಎಲ್ಲಾ ದ್ರವ್ಯಗಳು ಸೇರಿ ಷಡ್ದ್ರವ್ಯ, ಆಗುತ್ತವೆ, ಹೇಗೆಂದರೆ ಜೀವದ್ರವ್ಯ, ಪುದ್ಗಲದ್ರವ್ಯ, ಧರ್ಮದ್ರವ್ಯಗಳು, ಅಧರ್ಮದ್ರವ್ಯ ಆಕಾಶದ್ರವ್ಯ ಮತ್ತು ಕಾಲದ್ರವ್ಯಗಳೆಂದು ಆರು ದ್ರವ್ಯಗಳು.

### ದ್ರವ್ಯಗಳ ವಿಶೇಷತೆಯು

## ನಿತ್ಯಾವಸ್ಥಿತಾನ್ಯರೂಪಾಣಿ ॥ ೪ ॥

ಅರ್ಥ:— ಮೇಲೆ ಬರೆದ ಎಲ್ಲಾ ದ್ರವ್ಯಗಳೂ ನಿತ್ಯವೂ, ಸುಸ್ಥಿರವೂ ಮತ್ತು ಅರೂಪಿಗಳೂ ಆಗಿರುವವು. ಎಂದೂ ನಾಶವಾಗದಿರುವುದರಿಂದ ನಿತ್ಯವೂ, ದ್ರವ್ಯಗಳು ಆರೆಂಬ ಸಂಖ್ಯೆಯನ್ನು ಮೀರದಿರುವುದರಿಂದ ಅವ ಸ್ಥಿತವೂ, ರೂಪ, ರಸ, ಗಂಧ ಮತ್ತು ಸ್ಪರ್ಶಗಳಿಲ್ಲದಿರುವುದರಿಂದ ಅರೂಪಿಗಳೂ ಎಂದಾಗಿವೆ.

### ಪುದ್ಗಲ ದ್ರವ್ಯವು ರೂಪಿ ಎಂಬುದರ ನಿರ್ಧಾರ

## ರೂಪಿಣಃ ಪುದ್ಗಲಾಃ ॥ ೫ ॥

ಅರ್ಥ:— ಪುದ್ಗಲ ದ್ರವ್ಯವು ರೂಪಿ ಅಂದರೆ ಮೂರ್ತಿಕದ್ರವ್ಯವು ರೂಪವು ಯಾವುದರಲ್ಲಿರುವುದೋ ಅದು ರೂಪಿದ್ರವ್ಯವು. ಸೂತ್ರದಲ್ಲಿಪುದ್ಗಲಕ್ಕೆ ರೂಪಿ ಎಂದು ಹೇಳಿರುವುದರಿಂದ ಅದರೊಡನೆ ಇರುವ ರೂಪ, ರಸ, ಗಂಧ, ಮತ್ತು ಸ್ಪರ್ಶಗಳ ಗ್ರಹಣೆಯನ್ನು ಮಾಡಬೇಕಾಗುವುದು.

### ದ್ರವ್ಯಗಳ ಸ್ವಭೇದದ ಗಣನೆ

## ಆ ಆಕಾಶಾದೇಕದ್ರವ್ಯಾಣಿ ॥ ೬ ॥

ಅರ್ಥ:— ಆಕಾಶದ್ರವ್ಯದವರೆಗಿರುವ ದ್ರವ್ಯಗಳು ಒಂದೊಂದು ದ್ರವ್ಯಗಳು, ಅಂದರೆ ಧರ್ಮದ್ರವ್ಯ, ಅಧರ್ಮದ್ರವ್ಯ ಮತ್ತು ಆಕಾಶದ್ರವ್ಯಗಳು ಒಂದೊಂದು ದ್ರವ್ಯಗಳಾಗಿ ಅಖಂಡದ್ರವ್ಯಗಳು. ಜೀವದ್ರವ್ಯವು, ಅನಂತದ್ರವ್ಯವು, ಪುದ್ಗಲದ್ರವ್ಯವು, ಅನಂತಾನಂತವು ಮತ್ತು ಕಾಲದ್ರವ್ಯವು ಅಸಂಖ್ಯಾತವಾಗಿರುವುದು.

ಆಕಾಶದ್ರವ್ಯವು ಎಲ್ಲದರಿಂದಲೂ ದೊಡ್ಡದಾಗಿರವುದು. ಲೋಕದಲ್ಲಿಯೂ ಅಲೋಕದಲ್ಲಿಯೂ ಅದರ ಅಸ್ತಿತ್ವವಿದೆ.

ಹೀಗೆಯೇ

## ನಿಷ್ಕ್ರಿಯಾಣಿ ಚ ॥ ೭ ॥

ಅರ್ಥ— ಧರ್ಮ, ಅಧರ್ಮ ಮತ್ತು ಆಕಾಶದ್ರವ್ಯಗಳೆಂಬ ಈ ಮೂರು ದ್ರವ್ಯಗಳೂ ಹಲನ-ಚಲನ ರೂಪವಾದ ಕ್ರಿಯೆಯಿಂದ ರಹಿತವಾದವುಗಳು. ಕ್ರಿಯೆ ಎಂದರೆ ಒಂದು ಜಗಹದಿಂದ ಮತ್ತೊಂದು ಜಗಹಕ್ಕೆ ಹೋಗುವುದು. ಧರ್ಮ ಮತ್ತು ಅಧರ್ಮದ್ರವ್ಯಗಳು ಸಮಸ್ತಲೋಕಾಕಾಶದಲ್ಲಿ ವ್ಯಾಪಿಸಿರುವು ದರಿಂದಲೂ ಹಾಗೇನೆಯೇ ಆಕಾಶದ್ರವ್ಯವು ಲೋಕ ಮತ್ತು ಅಲೋಕಾಕಾಶ ಲ್ಲಿರುವುದರಿಂದಲೂ, ಬೇರೆ ಕ್ಷೇತ್ರಗಳಲ್ಲಿ ಗಮನವಿಲ್ಲದಿರುವುದರಿಂದ ಈ ದ್ರವ್ಯ ಗಳಲ್ಲಿ ಕ್ರಿಯೆ ಇರುವುದಿಲ್ಲ.

ದ್ರವ್ಯಗಳ ಪ್ರದೇಶದ ವರ್ಣನೆ

## ಅಸಂಖ್ಯೇಯಾಃ ಪ್ರದೇಶಾ ಧರ್ಮಾಧರ್ಮೈಕ ಜೀವಾನಾಂ ॥ ೮ ॥

ಅರ್ಥ –; ಧರ್ಮ, ಅಧರ್ಮ ಮತ್ತು ಒಂದು ಜೀವದ್ರವ್ಯಗಳಲ್ಲಿ ಅಸಂಖ್ಯಾತ ಪ್ರದೇಶಗಳಿರುತ್ತವೆ.

ಪ್ರದೇಶ—: ಒಂದು ಪುದ್ಗಲ ಪರಮಾಣುವು ಎಷ್ಟು ಆಕಾಶಕ್ಷೇತ್ರದಲ್ಲಿ ಹಿಡಿಯುವುದೋ ಅಷ್ಟು ಕ್ಷೇತ್ರವು ಒಂದು ಪ್ರದೇಶವೆನಿಸುತ್ತವೆ. ಎಲ್ಲಾ ಜೀವದ್ರವ್ಯಗಳಲ್ಲಿ ಅನಂತಾನಂತ ಪ್ರದೇಶಗಳಿರುತ್ರವೆ. ಆದುದರಿಂದ ಸೂತ್ರ ದಲ್ಲಿ ಒಂದು ಜೀವಪ್ರದೇಶವು ಅಸಂಖ್ಯಾತ ಪ್ರದೇಶವೆಂದು ಹೇಳಲಾಗಿದೆ.

— ಮತ್ತು —

## ಆಕಾಶಸ್ಯಾನಂತಾಃ ॥ ೯ ॥

ಅರ್ಥ— ಆಕಾಶ ದ್ರವ್ಯವು ಅನಂತಪ್ರದೇಶಿಯಾಗಿರುವುದು. ಅದು ಲೋಕಾಕಾಶವು ಅಸಂಖ್ಯಾತ ಪ್ರದೇಶಿಯು

— ಮತ್ತು —

## ಸಂಖ್ಯೇಯಾಽಸಂಖ್ಯೇಯಾಶ್ಚ ಪುದ್ಗಲಾನಾಂ ॥೧೦॥

ಅರ್ಥ;— ಪುದ್ಗಲ ದ್ರವ್ಯವು ಸಂಖ್ಯಾತ, ಅಸಂಖ್ಯಾತ ಮತ್ತು ಅನಂತ ಪ್ರದೇಶಿಯಾಗಿರುವುದು.

ಶಂಕೆ ;—ಲೋಕಾಕಾಶದ ಪ್ರದೇಶವು ಅಸಂಖ್ಯಾತವಾಗಿರುವಾಗ, ಅದರಲ್ಲಿ ಅನಂತ ಪ್ರದೇಶವುಳ್ಳ ಪುದ್ಗಲ ದ್ರವ್ಯವೂ, ಮತ್ತು ಇತರ ದ್ರವ್ಯಗಳು ಹೇಗೆ ಸಮಾವೇಶವಾಗುವುದು ?

ಸಮಾಧಾನ— ಪುದ್ಗಲ ದ್ರವ್ಯವು ಎರಡು ತರಹದಲ್ಲಿ ಪರಿಣತವಾಗುತ್ತದೆ. ಒಂದು ಸೂಕ್ಷ್ಮ ಪರಿಣತಿ ಮತ್ತೊಂದು ಸ್ಥೂಲ ಪರಿಣತಿಯು. ಯಾವಾಗ ಈ ದ್ರವ್ಯವು ಸೂಕ್ಷ್ಮ ಪರಿಣತಿಯಲ್ಲಿ ಪರಿಣತಿಯಾಗುತ್ತದೋ ಆಗ ಲೋಕಾಕಾಶದ ಒಂದು ಪ್ರದೇಶದಲ್ಲಿಯೂ ಕೂಡಾ ಅನಂತ ಪ್ರದೇಶವುಳ್ಳ ಪುದ್ಗಲಸ್ಕಂಧವು ಇರುತ್ತದೆ. ಇದರ ಹೊರತು ಎಲ್ಲಾ ದ್ರವ್ಯಗಳಲ್ಲಿಯೂ ಅವಗಾಹನೆ ಎಂಬ ಸಾಮಾನ್ಯ ಗುಣವಿರುವುದರಿಂದ ಒಂದು ಪ್ರದೇಶದಲ್ಲಿಯೂ ಎಲ್ಲಾ ದ್ರವ್ಯಗಳು ಒಟ್ಟಿಗೆ ಸೇರಿ ಬೆರಸಿರುತ್ತವೆ. ಇದರಲ್ಲಿ ಯಾವ ತೊಂದರೆಯೂ ಬರುವುದಿಲ್ಲ.

— ಆದರೆ —

## ನಾಣೋಃ ॥ ೧೧ ॥

ಅರ್ಥ—ಪುದ್ಗಲ ಪರಮಾಣುವಿಗೆ ಪ್ರದೇಶವಿಲ್ಲ. ಅಂದರೆ ಒಂದು ಪುದ್ಗಲಪರಮಾಣುವು ಬೇರೆ ಪುದ್ಗಲಪರಮಾಣುವಿನ ಪ್ರದೇಶದಲ್ಲಿರಲಾರದು. ಅದು ಇದ್ದ ಸ್ಥಾನದಲ್ಲಿಯೇ ಇರುವದು. ಅರ್ಥಾತ್ ಒಂದು ಪುದ್ಗಲ ಪರಮಾಣು ಸ್ಕಂಧವಾಗಲಾರದು.

ಎಲ್ಲಾ ದ್ರವ್ಯಗಳಿರುವ ಸ್ಥಾನ

## ಲೋಕಾಕಾಶೇಽವಗಾಹಃ ॥ ೧೨ ॥

ಅರ್ಥ— ಮೇಲೆ ಬರೆದ ಎಲ್ಲಾ ದ್ರವ್ಯಗಳು ಲೋಕಾಕಾಶದಲ್ಲಿ ಬೆರಸಿರುತ್ತವೆ.

ಪ್ರಶ್ನೆ;–ಲೋಕಾಕಾರವು ಇತರ ದ್ರವ್ಯಗಳಿಗೆ ಆಧಾರವಾದರೆ ಆಕಾ
ಅರ್ಥವೇನು? ಉತ್ತರ–ಅದು ತನ್ನ ಆಧಾರದಲ್ಲಿ ಬೇರೆ ಇರುತ್ತದೆ. ಹಾಗಾದ
ಬೇರೆ ದ್ರವ್ಯಗಳು ತಮ್ಮ ಆಕಾರದಲ್ಲಿ ಇರದಿರಲಾರವೇ ಎಂದು ಯಾರಾದ
ಕೇಳಬಹುದು, ಅದರಿಂದ ದೊಡ್ಡದು ಬೇರೆ ದ್ರವ್ಯವಿಲ್ಲ. ಇದು ವ್ಯವಹಾ
ನಯದಿಂದ ಹೇಳಲಾಗಿದೆ. ನಿಶ್ಚಯ ನಯದಿಂದ ತನ್ನ ಆಧಾರಗಳಲ್ಲಿ
ಇರುತ್ತದೆ.

ಲೋಕಾಕಾಶ— ಅನಂತಾಕಾಶದ ಯಾವ ಭಾಗದಲ್ಲಿ ಆರು ದ್ರವ್ಯಗಳಿ
ತ್ತವೆಯೋ ಆ ಭಾಗವು ಲೋಕಾಕಾಶವು. ಇವರ ಹೊರತು ಉಳಿಷ ಆಕಾ
ಪ್ರದೇಶವು ಅಲೋಕಾಕಾಶವು [ಆರು ದ್ರವ್ಯಗಳಿಲ್ಲದ ಭಾಗವು]

— ಮತ್ತು —

## ಧರ್ಮಾಧರ್ಮಯೋಃ ಕೃತ್ಸ್ನೇ ॥ ೧೩ ॥

ಅರ್ಥ— ಧರ್ಮ ಮತ್ತು ಅಧರ್ಮ ದ್ರವ್ಯಗಳ ಅವಗಾಹನೆಯು [
ಏಕೆಯು] ಸಂಪೂರ್ಣ ಲೋಕಾಕಾಶದಲ್ಲಿ ಎಂದು ತಿಳಿಯಬೇಕು.

ಹೇಗೆ ಎಳ್ಳಿನಲ್ಲಿ ಎಣ್ಣೆಯು ಎಲ್ಲಾ ಜಾಗದಲ್ಲಿ ಇರುತ್ತದೆಯೋ ಹಾ
ಗೇ ಲೋಕದಲ್ಲಿ ಈ ದ್ರವ್ಯಗಳು ತುಂಬಿವೆ.

— ಮತ್ತು —

## ಏಕಪ್ರದೇಶಾದಿಷು ಭಾಜ್ಯಃ ಪುದ್ಗಲಾನಾಂ ॥೧೪॥

---

೧ ಧರ್ಮ ಅಧರ್ಮ ಆಕಾಶ ಜೀವ, ಮತ್ತು ಪುದ್ಗಲಗಳು ಸ್ಕಂಧ
ಪಗಳಿರುವುದರಿಂದ ಅಸ್ತಿಕಾಯಗಳೆಂದೂ ಪರಿಗಣಿಸಲ್ಪಡುತ್ತವೆ. ಅಸ್ತಿಕಾಯ
ಐದಾಗಿರುವುದು. ಆದುದರಿಂದ ಜೈನಶಾಸ್ತ್ರ ಗ್ರಂಥಗಳಲ್ಲಿ ಪಂಚಾಸ್ತಿಕಾಯ
ಪ್ರಮುಖ ಸ್ಥಾನವನ್ನು ಪಡೆದಿದೆ. ಕಾಲಾಣು ಎಂದೂ ಸ್ಕಂಧವಾಗದಿರು
ರಿಂದ ಅದನ್ನು ಅಸ್ತಿಕಾಯದಲ್ಲಿ ಸೇರಿಸಲಿಲ್ಲ. ಆದುದರಿಂದಲೇ ದ್ರವ್ಯ
ಸೂತ್ರವನ್ನೆಣಿಸುವಾಗ ಕಾಲದ್ರವ್ಯವನ್ನು ಬಿಟ್ಟು ಎಣಿಸಲಾಗಿದೆ.

ಅರ್ಥ—ಪುದ್ಗಲದ್ರವ್ಯದ ಅವಗಾಹನೆಯು [ಇರುವಿಕೆಯು] ಲೋಕಾಕಾಶದ ಒಂದು ಪ್ರದೇಶದಿಂದ ಹಿಡಿದು ಸಂಖ್ಯಾತ, ಅಸಂಖ್ಯಾತ ಮತ್ತು ಅನಂತ ಪ್ರದೇಶಗಳಲ್ಲಿ ವಿಭಾಗಿಸಲ್ಪಡಬೇಕು.

ಮಧ್ಯ ಪ್ರದೇಶದಿಂದ ಹಿಡಿದು ಲೋಕದ ಸಂಖ್ಯಾತ, ಅಸಂಖ್ಯಾತ ಅನಂತ ಪ್ರದೇಶಗಳಲ್ಲಿ ಇರುತ್ತವೆ.

—ಮತ್ತು—

## ಅಸಂಖ್ಯೇಯಭಾಗಾದಿಷು ಜೀವಾನಾಂ ॥ ೧೫ ॥

ಅರ್ಥ– ಜೀವರುಗಳ ಅವಗಾಹನೆಯು [ಇರುವಿಕೆಯು] ಲೋಕಾಕಾಶದ ಅಸಂಖ್ಯಾತಭಾಗದ ಒಂದು ಭಾಗದಲ್ಲಿರುವುದು. ಆದರೆ ಸಮುದ್ಘಾತ ಅವಸ್ಥೆಯಲ್ಲಿರುವ [ಕೇವಲಿಸಮುದ್ಘಾತದಲ್ಲಿ] ಜೀವರುಗಳ ಅವಗಾಹನೆಯು ಲೋಕಾಕಾಶದ ಸಂಪೂರ್ಣ ಕ್ಷೇತ್ರದಲ್ಲಿರುವುದು.

ಜೀವದ್ರವ್ಯಕ್ಕೆ ಅಸಂಖ್ಯಾತ ಪ್ರದೇಶವಿರುವಾಗ ಅದು ಲೋಕದ
ಅಸಂಖ್ಯಾತ ಭಾಗದಲ್ಲೊಂದು ಭಾಗದಲ್ಲಿ ಹೇಗಿರುವ
ದೆಂಬ ಸಂದೇಹದ ಸಮಾಧಾನ.

## ಪ್ರದೇಶಸಂಹಾರವಿಸರ್ಪಾಭ್ಯಾಂ ಪ್ರದೀಪವತ್ ॥೧೬॥

ಅರ್ಥ—ದೀಪದ ಪ್ರಕಾಶದಂತೆ ಪ್ರದೇಶಗಳ ಸಂಕೋಚ ಮತ್ತು ವಿಸ್ತಾರಗಳು ಆಗುವುದರಿಂದ ಜೀವದ್ರವ್ಯದ ಇರುವಿಕೆಯು ಲೋಕದ ಅಸಂಖ್ಯಾತ ಭಾಗದಲ್ಲೊಂದು ಭಾಗದಲ್ಲಿ ಆಗಿದೆ. ಅಂದರೆ ಸಣ್ಣ ದೊಡ್ಡ ಶರೀರಪ್ರಮಾಣಗಳಲ್ಲಿ ಸಮಾವೇಶವಾಗಿ ಅದರಂತೆಯೇ ಜೀವದ್ರವ್ಯದ ಪ್ರದೇಶವಿರುತ್ತದೆ. ಹೇಗೆಂದರೆ ಇರುವೆಯ ಶರೀರಗಾತ್ರದಲ್ಲಿರುವ ಜೀವ ಪ್ರದೇಶವು [ಸಂಕೋಚರೂಪದಿಂದ] ಮತ್ತು ಆನೆಯ ಶರೀರದ ಗಾತ್ರದಲ್ಲಿರುವ ಜೀವ ಪ್ರದೇಶವು (ವಿಸ್ತಾರ ರೂಪದಿಂದ] ತರತಮತೆಯಲ್ಲಿ ವ್ಯತ್ಯಾಸವಿದೆ. ಆದರೆ ಸಿದ್ಧ ಅವಸ್ಥೆಯನ್ನು ಪಡೆದ ಜೀವನಲ್ಲಿ ಯಾವ ತರತಮತೆಗಳೂ ಇರುವುದಿಲ್ಲ.

## ಧರ್ಮ ಮತ್ತು ಅಧರ್ಮ ದ್ರವ್ಯಗಳ ಲಕ್ಷಣ

## ಗತಿಸ್ಥಿತ್ಯುಪಗ್ರಹೌ ಧರ್ಮಾಧರ್ಮಯೋರುಪಕಾರಃ

ಅರ್ಥ– ತನಗೆ ತಾನಾಗಿಯೇ ಹೋಗುವ ಮತ್ತು ಕೂತುಕೊಳ್ಳುವ ಜೀವ ಪುದ್ಗಲಗಳಿಗೆ ಕ್ರಮದಿಂದ ಧರ್ಮ ಮತ್ತು ಅಧರ್ಮ ದ್ರವ್ಯಗಳು ಉದಾಸೀನ ರೂಪದಿಂದ ಉಪಕಾರ ಮಾಡುತ್ತವೆ. ಸೂತ್ರದಲ್ಲಿ ಉಪಗ್ರಹ ಮತ್ತು ಉಪಕಾರಗಳೆಂಬ ಎರಡು ಪದಗಳು ಒಂದೇ ಅರ್ಥವಿರುವುದು ಇವುಗಳು ಯಾರಾದರೂ ಜೀವ ಪುದ್ಗಲಗಳು ಗಮನ ಮತ್ತು ಸ್ಥಿತಿಗೆ ಸಿದ್ಧರಾಗದಿದ್ದರೆ ಅವರನ್ನು ಬಲಾತ್ಕಾರದಿಂದ ನಡೆಸುವುದಿಲ್ಲ. ಆದುದರಿಂದ ಈ ಉಪಕಾರವು ಉದಾಸೀನ ಕಾರಣವೆಂದು ಹೇಳಲಾಗಿದೆ. ಕೊನೆಯ ಉಪಕಾರ ಶಬ್ದವು ಮುಂದೆ ಹೇಳುವ ದ್ರವ್ಯಗಳ ಉಪಕಾರ ಸೂಚನೆಗಾಗಿದೆಯೆಂದು ತಿಳಿಯಬೇಕು. ಗತಿಶೀಲರಾದ ಜೀವಪುದ್ಗಲಗಳಿಗೆ ಗತಿಪರಿಣತಿಯಲ್ಲಿ ಯಾವುದು ಸಹಕಾರಿಯೋ ಅದು ಧರ್ಮದ್ರವ್ಯವು ಸ್ಥಿತಿಶೀಲರಾದ ಜೀವ ಮತ್ತು ಪುದ್ಗಲಗಳಿಗೆ ಯಾವುದು ಸಹಕಾರಿಯಾಗಿರುವುದೋ ಅದು ಅಧರ್ಮ ದ್ರವ್ಯವು.

## ಆಕಾಶಸ್ಯಾವಗಾಹಃ ॥ ೧೮ ॥

ಅರ್ಥ—ಜೀವ ಮತ್ತು ಪುದ್ಗಲ ಮೊದಲಾದ ದ್ರವ್ಯಗಳಿಗೆ ಅವಗಾಹ ಅಂದರೆ ಸ್ಥಾನವನ್ನು ಕೊಡುವುದು ಆಕಾಶದ್ರವ್ಯದ ಉಪಕಾರವು.

### ಪುದ್ಗಲ ದ್ರವ್ಯದ ಉಪಕಾರ.

## ಶರೀರವಾಙ್ಮನಃಪ್ರಾಣಾಪಾನಾಃ ಪುದ್ಗಲಾನಾಂ॥೧೯॥

ಅರ್ಥ—ಪುದ್ಗಲ ದ್ರವ್ಯದ ಉಪಕಾರವು ಔದಾರಿಕ ಮೊದಲಾದ ಶರೀರವೂ, ವಚನವೂ ಮನವೂ, ಹಾಗೇನೆಯೇ ಶ್ವಾಸೋಚ್ಛ್ವಾಸವೂ, ಆಗಿವೆ ಅಂದರೆ ಶರೀರ ಮೊದಲಾದವುಗಳ ರಚನೆಯೂ ಪುದ್ಗಲದಿಂದಲೇ ಆಗುತ್ತದೆ.

—ಮತ್ತು—

## ಸುಖದುಃಖಜೀವಿತಮರಣೋಪಗ್ರಹಾಶ್ಚ ॥ ೨೦ ॥

ಸಾತಾ ವೇದನೀಯ ಮತ್ತು ಅಸಾತಾ ವೇದನೀಯದ ಉದಯದಿಂದ ತಮ್ಮ ಆತ್ಮನ ಪ್ರೀತಿ ತೀವ್ರತರವಾದ ಪರಿಣಾಮಕ್ಕೆ ಸುಖದುಃಖನೆಂದು ಹೆಸರು. ಭವಧಾರಣೆಯ ಕಾರಣವಾದ ಪ್ರಾಣಾಪಾನ ಕ್ರಿಯಾ ವಿಶೇಷಕ್ಕೆ ಜೀವಿತ ವೆಂದು ಹೆಸರು. ಅದರ ಛೇದವು ಮರಣ ಇವೂ ಪುದ್ಗಲಕೃತ ಪರಸ್ಪರ ಉಪ ಕಾರವೆಂದು ತಿಳಿಯಬೇಕು.

### ಜೀವರುಗಳ ಉಪಕಾರ

## ಪರಸ್ಪರೋಪಗ್ರಹೋ ಜೀವಾನಾಂ ॥೨೧॥

ಅರ್ಥ— ಜೀವರುಗಳು ಒಬ್ಬರು ಇನ್ನೊಬ್ಬರಿಗೆ ಉಪಕಾರ ಮಾಡು ತ್ತಾರೆ. ಅಂದರೆ ಗುರುವು ಶಿಷ್ಯನಿಗೂ, ಒಡೆಯನು ಸೇವಕನಿಗೂ ಉಪಕಾರ ಮಾಡುವಂತೆ, ಉಪಕಾರ ಮಾಡುವುದು ಜೀವರ ಕರ್ತವ್ಯ.

ಭಾವಾರ್ಥ— ಒಬ್ಬ ಜೀವನು ಮತ್ತೊಬ್ಬ ಜೀವನಿಗೆ ಉಪಕಾರವನು ಮಾಡದಿದ್ದರೆ ಅವನ ಅಸ್ತಿತ್ವದ ಬೆಲೆ ಏನು ! ಮಾಡಲೇಬೇಕು.

### ಕಾಲದ್ರವ್ಯದ ಉಪಕಾರವು

## ವರ್ತನಾಪರಿಣಾಮಕ್ರಿಯಾಃ ಪರತ್ವಾಪರತ್ವೇಚ ಕಾಲಸ್ಯ ೨೨

ಅರ್ಥ—ವರ್ತನೆಯೂ, ಪರಿಣಾಮವೂ, ಕ್ರಿಯೆಯೂ, ಪರತ್ವವೂ ಮತ್ತು ಅಪರತ್ವವೂ ಕಾಲದ್ರವ್ಯದ ಉಪಕಾರವು ಆಗಿರುವದು.

ವರ್ತನಾ—ಏ[illegible] ದ್ರವ್ಯಗಳ (ಪದಾರ್ಥಗಳ ಸಹಾಯದಿಂದ ಉತ್ಪಾದವ್ಯಯಾದಿಗಳ] ಬದಲ[illegible]ಯಲ್ಲಿ ಸಹಕಾರಿಯಾಗಿರುವದೋ ಅದು ವರ್ತ ನೆಯು ಪ್ರತಿಸಮಯ[illegible] ಆಗುವ ಬದಲಾವಣೆಗಳು ನಮಗೆ ಕಾಣುವು ದಿಲ್ಲ, ಆದರೆ ಆಗುತ್ತವೆ.

ಪರಿಣಾಮ— ಒಂದು ಧರ್ಮ [ಸ್ವರೂಪ] ವನ್ನು ಬಿಟ್ಟು ಇನ್ನೊಂ ಧರ್ಮವನ್ನು ಗ್ರಹಿಸುವ ಯಾವ ಪರ್ಯಾಯವಿದೆಯೋ ಅದು ಪರಿಣಾಮ ಹೇಗೆಂದರೆ ಜೀವರುಗಳಲ್ಲಿ ಜ್ಞಾನಾದಿ ಗುಣಗಳೂ ಪುದ್ಗಲಗಳಲ್ಲಿ ವರ್ಣಾ ಗಳೂ ಇವೆ. ಹೀಗೆಯೇ ಈ ಪರ್ಯಾಯಗಳಲ್ಲಿ ನಾವು ಅವುಗಳ ಪರಿವರ್ತ ಯನ್ನು ನೋಡಬಹುದು.

ಕ್ರಿಯಾ—ಹಲನಚಲನರೂಪವಾದ ಪರಿಣತಿಗೆ ಕ್ರಿಯೆ ಎಂದು ಹೆ ಇವು ಜೀವ ಮತ್ತು ಪುದ್ಗಲ ದ್ರವ್ಯಗಳಲ್ಲಿವೆ.

ಪರತ್ವಾಪರತ್ವ— ಸಣ್ಣ ದೊಡ್ಡ ವಯಸ್ಸಿನ ವ್ಯವಹಾರವು ಪ ಪರತ್ವವೆನಿಸುತ್ತದೆ. ಹೇಗೆಂದರೆ ೨೦ ವರ್ಷದ ಮನುಷ್ಯನಿಗಿಂತ ೨೫ ವರ್ಷ ಮನುಷ್ಯನು ದೊಡ್ಡವನೆಂದೂ, ಅದೇ ೨೫ ವರ್ಷದವನ ಅಪೇಕ್ಷೆಯಿಂದ ವರ್ಷದವನು ಸಣ್ಣವನೆಂದೂ ಹೇಳುವದು ಇವೆಲ್ಲಾ ಕಾಲದ್ರವ್ಯದ ವಿ ದಿಂದಾಗುತ್ತವೆ. ಇದರ ಮೇಲಿಂದ ಅಮೂರ್ತಸ್ವರೂಪವಾದ ನಿಶ್ಚಯ ಕಾ ದ್ರವ್ಯದ ಅನುಮಾನವನ್ನು ಮಾಡಬಹುದು.

## ಪುದ್ಗಲದ್ರವ್ಯದ ಲಕ್ಷಣ

## ಸ್ಪರ್ಶರಸಗಂಧವರ್ಣವಂತ: ಪುದ್ಗಲಾ: ॥೨೩॥

ಅರ್ಥ— ಸ್ಪರ್ಶವೂ, ರಸವೂ, ಗಂಧವೂ ಮತ್ತು ವರ್ಣ ಯಾವುದರಲ್ಲಿರುವುದೋ ಅದು ಪುದ್ಗಲವು, ಈ ನಾಲ್ಕು ಗುಣಗಳು ಪ್ರ ಯೊಂದೂ ಪುದ್ಗಲದಲ್ಲಿಯೂ ಇರುವುದು ಇದು ಪುದ್ಗ ಲಕ್ಷಣವು. ಸ್ಪರ್ಶದಲ್ಲಿ ಮೃದು, ಕಠೋರ, ಲಘು, ಭಾರ, ಶೀತ, ಉ ಚಿಕ್ಕಣ ( ನಯ ) ಮತ್ತು ರೂಕ್ಷ (ದೊರಗು)ಗಳೆಂದು ಎಂಟು ಭೇದಗ ರಸದಲ್ಲಿ ಹುಳಿ, ಕಹಿ, ಸಿಹಿ. ಕಾರ ಮತ್ತು ಒಗರು ಎಂಬುದಾಗಿ ೫ ಭೇದ

ಗಂಧದಲ್ಲಿ ಸುಗಂಧ ಮತ್ತು ದುರ್ಗಂಧಗಳೆಂಬ ೨ ಭೇದಗಳಿವೆ.

ವರ್ಣದಲ್ಲಿ ಕಪ್ಪು, ನೀಲಿ, ಹಳದಿ, ಕೆಂಪು ಮತ್ತು ಬಿಳಿ ಎಂಬು ೫ ಭೇದಗಳಿವೆ.ಇವೆಲ್ಲಾ ಕೂಡಿ ಪುದ್ಗಲದ ಉತ್ತರ ಗುಣಗಳು ೨೦ ಎಂಬು ತಿಳಿಯಬೇಕು.

## ಪುದ್ಗಲದ ಪರ್ಯಾಯ

**ಶಬ್ದಬಂಧಸೌಕ್ಷ್ಮಸ್ಥೌಲ್ಯಸಂಸ್ಥಾನಭೇದತಮಶ್ಛಾಯಾತಪೋದ್ಯೋತವಂತಶ್ಚ ॥೨೪॥**

ಮೇಲೆ ಬರೆದ ಪುದ್ಗಲವು ಶಬ್ದ, ಗಂಧ, ಸೂಕ್ಷ್ಮತ್ವ, ಸ್ಥೂಲತ್ವ ಸಂಸ್ಥಾನ (ಆಕಾರ ಭೇದ,) ಅಂಧಕಾರ, ಛಾಯಾ, ಆತಪ, [ಬಿಸಿಲು] ಮತ್ತು ಉದ್ಯೋತ [ಬೆಳದಿಂಗಳು] ಗಳಿಂದ ಕೂಡಿದ್ದಿವೆ ಅಂದರೆ ಇವು ಪುದ್ಗಲದ ಪರ್ಯಾಯಗಳು,

ಶಬ್ದವು ಎರಡು ಪ್ರಕಾರವಾಗಿದೆ. ಭಾವಾತ್ಮಕ ಮತ್ತು ಅಭಾವಾತ್ಮಕ ಭಾವಾತ್ಮಕ ಶಬ್ದವು ಅಕ್ಷರಾತ್ಮಕ ಮತ್ತು ಅನಕ್ಷರಾತ್ಮಕವೆಂದು ಎರಡು ಪ್ರಕಾರ ಅಕ್ಷರಾತ್ಮಕ ವಾಕ್ಯಗಳನ್ನು ಮನುಷ್ಯರಲ್ಲಿ ಕಾಣಬಹುದು. ಪಶುಪಕ್ಷಿಗಳಲ್ಲಿ ಅನಕ್ಷರಾತ್ಮಕ ಭಾಷೆಯಿದೆ. ಅಭಾವಾತ್ಮಕ ಶಬ್ದವು ಎರಡು ಪ್ರಕಾರವಾಗಿದೆ. ಒಂದು ಏರುವಾಗ ಪ್ರಯತ್ನದಿಂದ (ಪ್ರಾಯೋಗಿಕ) ಒಂದು. ನೈಸರ್ಗಿಕವಾಗಿ ಪ್ರಯತ್ನವಿಲ್ಲದೆ (ವೈಸ್ರಸಿಕ) ಪ್ರಾಯೋಗಿಕ ಶಬ್ದದ 4 ಭೇದ ತತ, ವಿತತ, ಘನ, ಸುಷಿರ ಚರ್ಮದಿಂದ ಮಂಡಿತವಾದ ವಾದ್ಯಕ್ಕೆ ತತವೆಂದೂ, ವೀಣೆ ಮೊದಲಾದ ಶಬ್ದಗಳು ವಿತತವೆಂದೂ, ಘಂಟೆ ಶಂಖ ಮೊದಲಾದ ಶಬ್ದಗಳು ಘನವೆಂದೂ, ಕೊಳಲು ಮೊದಲಾದ ಶ್ವಾಸವಾದ್ಯಕ್ಕೆ ಸುಷಿರವೆಂದುಹೇಳಲಾಗಿದೆ. ಹಾಗೆಯೇ ಬಂಧದಲ್ಲಿಯೂ ಎರಡು ಭೇದವಿದೆ. ಅಜೀವ ಸಂಬಂಧಿಜೀವ ಸಂಬಂಧಿ. ಅಜೀವ ಸಂಬಂಧವಾದ ಬಂಧದಲ್ಲಿ ಅರಗು ಮತ್ತು ಕಟ್ಟಿಗೆಯ ಬಂಧ. ಹಾಗೆಯೇ ಜೀವನೊಡನೆ ಕರ್ಮನೋಕರ್ಮದಸಂಬಂಧ ಜೀವಗೆಬಂಧ.

ಸೂಕ್ಷ್ಮತೆಯನ್ನು ತೋರಿಸುವುದು ಮತ್ತು ಸ್ಥೂಲತೆಯನ್ನು ತೋರಿಸುವುದು ಇದು ಪುದ್ಗಲ ದ್ರವ್ಯದ ಉಪಕಾರ. ಆಕಾರ-ಅನಾಕಾರದ ರೂಪದಲ್ಲಿ ಸಂಸ್ಥಾನದ ಎರಡು ಭೇದ. ಭೇಧ ಆರು ಪ್ರಕಾರವಾಗಿದೆ. ಉತ್ಕರ, ಚೂರ್ಣ,

ಖಂಡ, ಚೂರ್ಣಿಕಾ, ಪ್ರತರ, ಅಣುಚಟನ, ಭೇದವೆಂದರೆ ತುಂಡುಗಳು. ತಮ ವೆಂದರೆ ಅಂಧಕಾರ, ಛಾಯೆಯೆಂದರೆ ನೆರಳು. ಆತಪವೆಂದರೆ ಬಿಸಿಲು. ವಿದ್ಯೋತವೆಂದರೆ ಬೆಳದಿಂಗಳು. ಇವೆಲ್ಲಾ ಪುದ್ಗಲದಿಂದಲೇ ಆಗುತ್ತವೆ. ಪುದ್ಗಲದ ಪರ್ಯಾಯವೆಂದು ಇವನ್ನು ತಿಳಿಯಬೇಕು.

### ಪುದ್ಗಲದ ಭೇದ

## ಅಣವಃ ಸ್ಕಂಧಾಶ್ಚ ॥ ೨೫ ॥

ಅರ್ಥ—ಪುದ್ಗಲದ್ರವ್ಯವು ಅಣು ಮತ್ತು ಸ್ಕಂಧಗಳೆಂದು ಎರಡು ಭೇದದಿಂದ ಕೂಡಿದೆ.

ಅಣು—ಯಾವುದರಲ್ಲಿ ತಿಲಮಾತ್ರದಷ್ಟೂ ಎರಡನೇವಿಭಾಗ [ತುಂಡು] ಮಾಡಲು ಬರುವುದಿಲ್ಲವೋ ಅಂತಹ ಪುದ್ಗಲದ ಸೂಕ್ಷ್ಮಾತಿಸೂಕ್ಷ್ಮವಾದ ಭಾಗಕ್ಕೆ ಅಣು ಎಂದು ಹೆಸರು.

ಸ್ಕಂಧ—ಎರಡು, ಮೂರು, ಸಂಖ್ಯಾತ ಅಸಂಖ್ಯಾತ ಮತ್ತು ಅನಂತ ಪರಮಾಣುಗಳ ಪಿಂಡಕ್ಕೆ ಸ್ಕಂಧವೆಂದು ಹೆಸರು. ಮೇಲೆ ಹೇಳಿದ ಎಲ್ಲಾ ಪುದ್ಗಲದ ಭೇದಗಳು ಇವುಗಳಲ್ಲಿ ಸಮಾವೇಶವಾಗುತ್ತವೆ.

### ಸ್ಕಂಧದ ಉತ್ಪತ್ತಿಯು ಹೇಗೆ ?

## ಭೇದಸಂಘಾತೇಭ್ಯಃ ಉತ್ಪದ್ಯಂತೇ ॥ ೨೬ ॥

ಅರ್ಥ—ಪುದ್ಗಲ ದ್ರವ್ಯದ ಭೇದವಾದ ಸ್ಕಂಧವು ವಿಭಾಗ (ವಿಂಗಡಿಸು) ಮಾಡುವುದರಿಂದಲೂ ಮತ್ತು ಒಂದಕ್ಕೊಂದು ಪರಮಾಣುಗಳ ಪಿಂಡವು ಸೇರುವುದರಿಂದಲೂ, ಹಾಗೇನೆಯೇ ವಿಭಾಗ ಮತ್ತು ಸೇರುವಿಕೆಯಿಂದಲೂ ಸ್ಕಂಧವಾಗುತ್ತದೆ. ನೆಲಮಟ್ಟದಿಂದ ಮೇಲಕ್ಕೇರಿಸಲ್ಪಟ್ಟ ಯಾವುದಾದರೊಂದು ಗೋಡೆಯನ್ನು ಇಲ್ಲಿ ಉದಾಹರಣೆಗಾಗಿ ತೆಗೆದುಕೊಳ್ಳಬಹುದು. ಸಣ್ಣ ಅಣುವಿಗೆ ಇನ್ನು ಕೆಲವು ಅಣುಗಳು ಕೂಡಿದರೆ ಸ್ಕಂಧವಾಗುತ್ತದೆ. ಹಾಗೆಯೇ ದೊಡ್ಡ ಸ್ಕಂಧಗಳನ್ನು ವಿಂಗಡಿಸಿದರೂ ಸಣ್ಣ ಸ್ಕಂಧವಾಗುತ್ತದೆ.

ಅಣುವಿನ ಉತ್ಪತ್ತಿಯು ಹೇಗೆ ?

## ಭೇದಾದಣು: ॥ ೨೭ ॥

ಅರ್ಥ—ಅಣುವಿನ ಉತ್ಪತ್ತಿಯು ವಸ್ತುಗಳ ವಿಭಾಗದಿಂದಲೇ ಆಗುತ್ತದೆ. ಕೂಡುವುದರಿಂದ ಅಣುವಾಗವುದಿಲ್ಲ.

ಗೋಚರಕ್ಕೆ ಬರುವ ಸ್ಕಂಧದ ಉತ್ಪತ್ತಿಯು.

## ಭೇದಸಂಘಾತಾಭ್ಯಾಂ ಚಾಕ್ಷುಷ: ॥೨೮॥

ಅರ್ಥ—ನೇತ್ರ ಇಂದ್ರಿಯದಿಂದ ನೋಡಲು ಬರುವ [ಪ್ರತ್ಯಕ್ಷ ಗೋಚರವಾಗುವ] ಸ್ಕಂದವು [ಪುದ್ಗಲದ ಪಿಂಡವು] ಪದಾರ್ಥದ ವಿಭಾಗ ಮತ್ತು ಅವಿಭಾಗಗಳಿಂದಾಗುತ್ತದೆ. ಕೇವಲ ವಿಭಾಗ ಮಾತ್ರದಿಂದಲೇ ಆಗುವುದಿಲ್ಲ.

ದ್ರವ್ಯದ ಲಕ್ಷಣ

## ಸದ್ ದ್ರವ್ಯಲಕ್ಷಣಂ ॥೨೯॥

ಅರ್ಥ—ದ್ರವ್ಯದ ಲಕ್ಷಣವು ಸತ್ ಅಂದರೆ ಇರುವಿಕೆಯು ಅಸ್ತಿತ್ವ ಆಗಿದೆ ಅಸ್ತಿತ್ವಕ್ಕೆ ದ್ರವ್ಯವೆನ್ನುತ್ತಾರೆ.

ಸತ್‌ಸಂಜ್ಞೆಯ ಲಕ್ಷಣ

## ಉತ್ಪಾದವ್ಯಯ: ಧ್ರೌವ್ಯಯುಕ್ತಂ ಸತ್ ॥೩೦॥

ಅರ್ಥ—ಯಾವುದು ಉತ್ಪಾದ ವ್ಯಯ ಮತ್ತು ಧ್ರೌವ್ಯ [ನಿತ್ಯತ್ವ]ದಿಂದ ಕೂಡಿರುವುದೋ ಅದು ಸತ್ ಎಂದು ಹೇಳಲಾಗುತ್ತದೆ.

ಉತ್ಪಾದ—ದ್ರವ್ಯದಲ್ಲಿ ಹೊಸ ಪರ್ಯಾಯವಾಗುವುದಕ್ಕೆ ಉತ್ಪಾದ ಎಂದು ಹೆಸರು. ಪುದ್ಗಲದ್ರವ್ಯದ ಪರ್ಯಾಯವಾದ ಮಣ್ಣಿನ ಪಿಂಡದಿಂದ ಗಡಿಗೆ, ಇದರಲ್ಲಿ ಪೂರ್ವಪರ್ಯಾಯದ ನಾಶ, ವರ್ತಮಾನ ಪರ್ಯಾಯದ ಉತ್ಪತ್ತಿಯಾಗುವುದು. ಆದರೆ ದ್ರವ್ಯವು ಮಾತ್ರ ನಿಶ್ಚಲವಾಗಿದೆ.

# ದ್ರವ್ಯವಿಭಾಗ


ದ್ರವ್ಯ
ಜೀವ
ಅಜೀವ
ಮುಕ್ತ
ಸಂಸಾರಿ
ಪುದ್ಗಲ ಧರ್ಮ ಅಧರ್ಮ ಆಕಾಶ
ತ್ರಸ
ಸ್ಥಾವರ
ಅಣು
ಸ್ಕಂಧ
ಲೋಕ ಅಲೋಕ
ದ್ವೀಂದ್ರಿಯ ತ್ರೀಂದ್ರಿಯ
ಚತುರಿಂದ್ರಿಯ ಪಂಚೇಂದ್ರಿಯ
ನಿಶ್ಚಯ
ಪೃಥ್ವೀ ಜಲ ತೇಜ ವಾಯು
ಸಂಜ್ಞೀ ಅಸಂಜ್ಞೀ
ನರಕ
ತಿರ್ಯಂಚ
ಮನುಷ್ಯ
ದೇವ
೧ ರತ್ನಪ್ರಭಾಗತ
೨ ಶರ್ಕರಾಪ್ರಭಾಗತ
೩ ವಾಲುಕಾ ,,
೪ ಪಂಕಪ್ರಭಾಗತ
೫ ಧೂಮಪ್ರಭಾಗತ
೬ ತಮಃಪ್ರಭಾಗತ
೭ ಮಹಾತಮ ,,
ಜಲಚರ
ಸ್ಥಲಚರ
ನಭಚರ
ಆರ್ಯ
ಮ್ಲೇಂಛ
ಋದ್ಧಿಪ್ರಾಪ್ತ ಅನೃದ್ಧಿಪ್ರಾಪ್ತ
೧ ಬುದ್ಧಿ
೨ ವಿಕ್ರಿಯಾ
೩ ತಪ
೪ ಬಲ
೫ ಔಷಧಿ,
೬ ರಸ,
೭ ಅಕ್ಷೀಣ
೧ ಕ್ಷೇತ್ರಾರ್ಯ ಕ್ಷೇತ್ರಮ್ಲೇಂಛ
೨ ಜಾತ್ಯಾರ್ಯ ಕರ್ಮ ,,
೩ ಕರ್ಮಾರ್ಯ
೪ ಚಾರಿತ್ರಾರ್ಯ
೫ ದರ್ಶನಾರ್ಯ
೧ ಭವನವಾಸಿ,
೨ ವ್ಯಂತರ,
೩ ಜ್ಯೋತಿಷೀ
೪ ಕಲ್ಪವಾಸೀ

ವ್ಯಯ— ಮೊದಲಿನ ಪರ್ಯಾಯದ ವಿನಾಶಕ್ಕೆ ವ್ಯಯ ಎಂದು ಹೆಸರು. ಮೇಲಿನ ಉದಾಹರಣೆಯಲ್ಲಿ ಪಿಂಡ ಪರ್ಯಾಯದ ವಿನಾಶವು.

ಧ್ರೌವ್ಯ— ಎರಡು ಪರ್ಯಾಯಗಳಲ್ಲಿಯೂ ದ್ರವ್ಯದ ಸದ್ಭಾವವಿರುವುದಕ್ಕೆ ಧ್ರೌವ್ಯವೆಂದು ಹೆಸರು. ಮೇಲಿನ ಉದಾಹರಣೆಯಲ್ಲಿ ಪುದ್ಗಲ ದ್ರವ್ಯದ ಮಣ್ಣಿನ ಪಿಂಡ ಮತ್ತು ಗಡಿಗೆಗಳಲ್ಲಿ ಪುದ್ಗಲತನವು.

## ನಿತ್ಯದ ಲಕ್ಷಣ

## ತದ್ಭಾವಾವ್ಯಯಂ ನಿತ್ಯಂ ॥೩೧॥

ಅರ್ಥ— ಯಾವದ್ರವ್ಯವು ತದ್ಭಾವ ರೂಪದಿಂದ [ಸ್ವರೂಪದಿಂದ] ವಿನಾಶವಿಲ್ಲದಿರುವುದಕ್ಕೆ ನಿತ್ಯವೆಂದುಹೆಸರು.

ಭಾವಾರ್ಥ—ಪ್ರತ್ಯಭಿಜ್ಞಾನಕ್ಕೆ ಗೋಚರವಾಗುವ ವಸ್ತುವು ತದ್ಭಾವವು ಅಂದರೆ ನಿತ್ಯರೂಪವು. ಅಂದರೆ ಈ ಜ್ಞಾನದಲ್ಲಿ ಮೊದಲು ನೋಡಿದ [ತಿಳಿದ] ವಸ್ತುವೇ ಮರಳಿ ನೋಡಲಾಗುತ್ತದೆ. (ತಿಳಿಯಲಾಗುತ್ತದೆ] ಇದರ ಮುಖ್ಯ ವಿಷಯವು ಭೂತ ಮತ್ತು ವರ್ತಮಾನ ಕಾಲಗಳ ಜೋಡು ರೂಪವಾದ ಜ್ಞಾನವು. ಇದರ ಮೂಲಕ ವಸ್ತುವನ್ನು ತಿಳಿಯುವುದಾಗಿದೆ. ಆದರೆ ಇದು ಸಾಮಾನ್ಯ ರೂಪದಿಂದ ಆಗುತ್ತದೆ. ಆದರೆ ಪರ್ಯಾಯದಅಪೇಕ್ಷೆಯಿಂದ [ವರ್ತಮಾನ ಕಾಲದಲ್ಲಿರುವ ಪರ್ಯಾಯ ಮಾತ್ರದಿಂದ] ಅನಿತ್ಯವಾಗಿದೆ. ಈ ವಿಷಯದಲ್ಲಿ ಶಾಸ್ತ್ರಾಧಾರವು ಈ ಕೆಳಗಿನಂತಿದೆ—

ನಿತ್ಯಂತದೇವೇದಮಿತಿ ಪ್ರತೀತೇರ್ನನಿತ್ಯಮನ್ಯತ್ಪ್ರತಿಪತ್ತಿಸಿದ್ಧೇಃ ॥
ನತ ದ್ವಿರುದ್ಧಂ ಬಹಿರಂತರಂಗ ನಿಮಿತ್ತನೈಮಿತ್ತಿಕಯೋಗತಸ್ತಃ ॥
—ಸಮಂತಭದ್ರ

ಒಂದೇ ದ್ರವ್ಯವು ನಿತ್ಯವೂ ಇದೆ ಅನಿತ್ಯವೂ ಇದೆ. ಇದು ಪರಸ್ಪರ ವಿರೋಧವಲ್ಲ ನಿಮಿತ್ತ ನೈಮಿತ್ತಿಕ ಯೋಗದಿಂದ ದ್ರವ್ಯಾರ್ಥಿಕ ಮತ್ತು ಪರ್ಯಾಯಾರ್ಥಿಕನಯದ ಅಪೇಕ್ಷೆಯಿಂದ ಪರಸ್ಪರ ವಿರುದ್ಧವಾದ ಧರ್ಮಗಳನ್ನು ನಾವು ಇದನ್ನು ತಿಳಿಯಬಹುದು.

ಶಂಕೆ—ಒಂದೇ ದ್ರವ್ಯದಲ್ಲಿ ನಿತ್ಯತೆ ಮತ್ತು ಅನಿತ್ಯತೆಗಳೆಂಬ ಎರಡು ವಿರೋಧಿ ಧರ್ಮಗಳು ಹೇಗೆ ಇರುತ್ತವೆ ? ಇದರ ಸಮಾಧಾನ—

## ಅರ್ಪಿತಾನರ್ಪಿತಸಿದ್ಧೇಃ ॥ ೩೨ ॥

ಅರ್ಥ— ವಿವಕ್ಷಿತರೂಪದಿಂದಲೂ ಮತ್ತು ಅವಿವಕ್ಷಿತರೂಪದಿಂದು ಅನೇಕ ಬಗೆಯ ಧರ್ಮಗಳು ಒಂದೇ ದ್ರವ್ಯದಲ್ಲಿರುತ್ತವೆ. ಹೇಳುವವನು ವಸ್ತು ವಿನ ಯಾವ ಗುಣವನ್ನು ಹೇಳುವನೋ ಅದು ಅರ್ಪಿತ ಅಂದರೆ ವಿವಕ್ಷಿ ತವು ಅದೇ ಕಾಲದಲ್ಲಿ ಯಾವ ಗುಣವು ಹೇಳಲಾಗುವುದಿಲ್ಲವೋ ಅದು ಅ ರ್ಪಿತ ಅವಿವಕ್ಷಿತವು. ಯಾವುದಾದರೊಂದು ವಸ್ತುವನ್ನು ತೆಗೆದುಕೊಂಡು ದ್ರವ್ಯಾರ್ಥಿಕನಯದಿಂದ ಅದು ನಿತ್ಯ ಎಂದು ವಿವಕ್ಷೆ ಮಾಡುವಾಗ ಪರ್ಯಾ ಯಾರ್ಥಿಕನಯದಿಂದ ಆ ವಸ್ತುವಿನ ಪರ್ಯಾಯವು ಅವಿವಕ್ಷೆಯಾಗುವುದು ವಿವಕ್ಷೆಯು ಅರ್ಪಿತವೆಂತಲೂ ಅವಿವಕ್ಷೆಯು ಅನರ್ಪಿತವೆಂತಲೂ ತಿಳಿಯಬೇಕು ಇವೆರಡರ ಮೂಲಕ ಪದಾರ್ಥಗಳಲ್ಲಿರುವ ಅನೇಕ ಧರ್ಮಗಳ ವರ್ಣನೆಯು ವಿರೋಧವಿರುವುದಿಲ್ಲ. ಮತ್ತು ಜೈನಸಿದ್ಧಾಂತ ಗ್ರಂಥಗಳಲ್ಲಿ ಹೇಳಿದ ಎಲ್ಲಾ ವಸ್ತುಗಳು ವಿರೋಧವಿಲ್ಲದೇನೇಯೇ ಸಿದ್ಧತೆಯನ್ನು ಪಡೆಯುತ್ತವೆ. (ಈ ಅಧ್ಯಾಪಕರು ವಿದ್ಯಾರ್ಥಿಗಳಿಗೆ ಬೇಕಾದಷ್ಟು ಉದಾಹರಣೆಯನ್ನು ವಿಸ್ತಾರ ಪೂರ್ವಕ ವಿವರವಾಗಿ ತಿಳಿಸಬೇಕು. ಮಾತ್ರ ಸಿದ್ಧಾಂತ ಸೂತ್ರಕ್ಕೆ ವಿರೋಧ ಬರಬಾರದಂತೆ ನೋಡಿಕೊಳ್ಳಬೇಕು. ಉದಾಹರಣೆಗಾಗಿ ಮೊ ರನ್ನು ಕಡೆಯುವ ಗೋಪಿಕೆಯರು ಮೊಸರು ಮಾಡುವ ಹೆಂಗಸರು) ಉದಾ

> "ಏಕೇನಾಕರ್ಷಂತೀ ಶ್ಲಥಯಂತೀ ವಸ್ತು ತತ್ವಮಿತರೇಣ ।
> ಅಂತೇನ ಜಯತಿ ಜೈನೀ ನೀತಿರ್ಮಂಥಾನಮಿವ ಗೋಪಿ" ॥

ಎಂಬುದಾಗಿಯೂ ಇದರ ಹೊರತು ಈ ಕೆಳಗಿನ ಶ್ಲೋಕದಿಂದು ವಸ್ತುನಿರೂಪಣೆಯು ಹೇಗೆಂಬದು ವಿವರವಾಗಿ ತಿಳಿಯಬಹುದು.—

ವಿಧೇಯಂವಾರ್ಯಂಚಾನುಭಯಮುಭಯಂಮಿಶ್ರಮ
ತದ್ವಿಶೇಷೈಃ ಪ್ರತ್ಯೇಕಂನಿಯಮವಿಷಯೈಶ್ಚಾಪರಿಮಿತೈಃ ॥
ಸದಾನ್ಯೋನ್ಯಾಪೇಕ್ಷೈಃ ಸಕಲಭುವನಜ್ಯೇಷ್ಠ ಗುರುಣಾ
ತ್ವಯಾಗೀತಂತತ್ವಂ ಬಹುನಯವಿವಕ್ಷೇತರವಶಾತ್ ॥

ಇದರಿಂದ ವಿವಕ್ಷೆ, ಅವಿವಕ್ಷೆ, ಗೌಣತ್ವ, ಮುಖ್ಯತ್ವ, ಅಸ್ತಿತ್ವ, ವಸ್ತುತ್ವ ಸಾಮಾನ್ಯ ಮೊದಲಾದ ಗುಣಗಳಲ್ಲಿ ಇರುವ ತರತಮತೆಯನ್ನು ಕಂಡು ಕೇಳಿ ಅಥವಾ ವಿಚಾರಿಸಿ ಜೈನಸಿದ್ಧಾಂತದಲ್ಲಿ ಹೇಳಿರುವ ಪದಾರ್ಥಗಳನ್ನು ನಿರ್ಣಯಿಸಬೇಕು.

## ಪರಮಾಣುಗಳಲ್ಲಿ ಬಂಧವು ಹೇಗೆ ?

## ಸ್ನಿಗ್ಧರೂಕ್ಷತ್ವಾದ್ಬಂಧಃ॥ ೩೩ ॥

ಅರ್ಥ– ನಯ [ ಚಿಕ್ಕಣ ] ಮತ್ತು ದೊರಗು [ ರೂಕ್ಷ ]ಗಳ ಕಾರಣದಿಂದ ಎರಡು ಮೂರು ಮೊದಲಾದ ಪರಮಾಣುಗಳಲ್ಲಿ ಬಂಧವಾಗುತ್ತದೆ.

ಬಂಧ– ಅನೇಕ ಪದಾರ್ಥಗಳಲ್ಲಿ ಏಕತ್ವದ ಜ್ಞಾನವನ್ನುಂಟು ಮಾಡುವ ಸಂಬಂಧ ವಿಶೇಷವು ಬಂಧವೆನಿಸುವುದು.

— ಆದರೆ —

## ನ ಜಘನ್ಯಗುಣಾನಾಂ ॥ ೩೪ ॥

ಅರ್ಥ– ಜಘನ್ಯಗುಣವಿರುವ ಪರಮಾಣುಗಳ ಬಂಧವಾಗುವುದಿಲ್ಲ. ಇಲ್ಲಿ ಗುಣ ಎಂದರೆ ಸ್ನಿಗ್ಧ ಮತ್ತು ರೂಕ್ಷ ಗುಣಗಳ ಅವಿಭಾಗಿ ಪ್ರತಿಚ್ಛೇದ [ವಿಭಾಗಕ್ಕೆ ಬಾರದ ಅಂಶ] ಅಂದರೆ ಪುದ್ಗಲದ ಒಂದು ಪ್ರದೇಶವುಳ್ಳ ಪರಮಾಣುವು. ಇನ್ನೊಂದುಪರಮಾಣುವಿನೊಡನೆ ಇದು ಬಂಧದಿಂದ ಹೊರಗಾದುದು.

— ಮತ್ತು —

## ಗುಣಸಾಮ್ಯೇ ಸದೃಶಾನಾಂ || ೩೫ ||

ಅರ್ಥ- ಗುಣಗಳ ಸಮಾನತೆ ಇರಲು ಸಮಾನಜಾತಿಯ ಪರಮಾಣು ಗಳೊಡನೆ ಬಂಧವಾಗುವುದಿಲ್ಲ. ಎರಡು ಸ್ನಿಗ್ಧ ಪರಮಾಣು ಮತ್ತು ಬೇರೆ ಎರಡು ಸ್ನಿಗ್ಧ ಪರಮಾಣುಗಳ ಬಂಧವಾಗಲಾರದು. ಸೂತ್ರದಲ್ಲಿರುವ "ಸದೃಶಾನಾಂ" ಎಂಬ ಪದದಿಂದ ಗುಣಗಳ ತರತಮತೆಯಲ್ಲಿ ಸಮಾನ ಮತ್ತು ವಿಷಮ ಜಾತಿಯ ಪುದ್ಗಲದ ಬಂಧವಾಗುತ್ತದೆ.

ಬಂಧವು ಯಾವುದರಲ್ಲಿ ?

## ದ್ವ್ಯಧಿಕಾದಿಗುಣಾನಾಂ ತು || ೩೬ ||

ಅರ್ಥ- ಆದರೆ ಎರಡು ಗುಣ ಹೆಚ್ಚಾಗಿರುವ ಪರಮಾಣುಗಳೊಡನೆ ಬಂಧವಾಗುವುದು. ಅಂದರೆ ಒಂದು ಪರಮಾಣುವು ಎರಡು ಅಧಿಕವಾಗಿ ರುವ ಪರಮಾಣುಗಳೊಡನೆ ಬಂಧವು ಅರ್ಥಾತ್ ಎರಡು ಗುಣವುಳ್ಳ ಪರಮಾಣುಗಳ ಬಂಧವು ನಾಲ್ಕು ಗುಣವುಳ್ಳ ಪರಮಾಣುವಿನೊಡನೆಯು ಹಾಗೆ ಮೂರು ಗುಣಗಳಿರುವ ಪರಮಾಣುಗಳು ಐದು ಗುಣಗಳಿರುವ ಪರಮಾಣುಗಳೊಡನೆ ಬಂಧವಾಗುವುದು. ಇದು ಸ್ನಿಗ್ಧವು ಸ್ನಿಗ್ಧಗಳೊಡನೆಯೂ ರೂಕ್ಷವು ರೂಕ್ಷದೊಡನೆಯೂ ಮತ್ತು ಸ್ನಿಗ್ಧವು ರೂಕ್ಷದೊಡನೆಯೂ ಬಂಧವಾಗುವುದು.

— ವಿಶೇಷವಾಗಿ —

## ಬಂಧೇಽಧಿಕೌ ಪಾರಿಣಾಮಿಕೌ ಚ || ೩೭ ||

ಅರ್ಥ- ಮತ್ತು ಬಂಧದ ಅವಸ್ಥೆಯಲ್ಲಿ ಅಧಿಕ ಪರಮಾಣುಗಳ ...ವೇ ಇರುವುದು. ಅಂದರೆ ಬೆಲ್ಲದ ಮುದ್ದೆಯಲ್ಲಿ ಬೀಳುವ ಧೂಳಿನ

ಕಣಗಳು ಬೆಲ್ಲದಂತೆಯೇ ಆಗುವದು. ಉಪ್ಪಿನ ಆಗರದಲ್ಲಿ ಬಿದ್ದ ಮರದ ತುಂಡು ಉಪ್ಪಿನ ರೂಪದಲ್ಲಿ ಪರಿಣತವಾಗುವುದು. ಸ್ಪಷ್ಟವಾಗಿ ಹೇಳುವುದಾದರೆ ಹೆಚ್ಚಾದ ಪರಮಾಣುಗಳು ಕಮ್ಮಿಯಾಗಿರುವ ಪರಮಾಣುಗಳನ್ನು ತನ್ನ ರೂಪದಲ್ಲಿ ಮಾರ್ಪಡಿಸಿಕೊಳ್ಳುವವು. ೫ ರೂಕ್ಷ ಪರಮಾಣುಗಳು ೩ ಸ್ನಿಗ್ಧ ಪರಮಾಣುಗಳನ್ನುರೂಕ್ಷ ರೂಪವನ್ನಾಗಿ ಮಾರ್ಪಡಿಸುತ್ತವೆ.

## ದ್ರವ್ಯದ ಲಕ್ಷಣ

## ಗುಣಪರ್ಯಯವದ್ದ್ರವ್ಯಂ ||೩೮||

ಅರ್ಥ– ಯಾವುದರಲ್ಲಿ ಗುಣಪರ್ಯಾಯಗಳಿರುತ್ತವೆಯೋ ಅದು ದ್ರವ್ಯವು. ಇದೂ ದ್ರವ್ಯದ ಇನ್ನೊಂದು ಲಕ್ಷಣ. ಮೇಲಿನ ಲಕ್ಷಣದಲ್ಲಿ ಮತ್ತು ಇದರಲ್ಲಿ ವಿರೋಧವಿಲ್ಲ.

ಗುಣ– ದ್ರವ್ಯದ ಅನೇಕ ಪರ್ಯಾಯಗಳು ಬದಲಾವಣೆಯಾದರೂ ನಿತ್ಯವೂ ದ್ರವ್ಯದೊಡನೆ ಅಭೇದ ರೂಪದಿಂದಿರುವುದೋ ಅದು ಗುಣವು. ಜೀವನಲ್ಲಿ ಜ್ಞಾನಾದಿಗುಣವೂ ಪುದ್ಗಲದಲ್ಲಿ ರೂಪಾದಿಗುಣವೂ ಇರುವಂತೆ ಆ ಗುಣವು ನಿತ್ಯವಾಗಿರುತ್ತದೆ.

ಪರ್ಯಾಯ– ಕ್ರಮದಿಂದಾಗುವ ವಸ್ತುವಿನ ವಿಶೇಷತೆಯು ಪರ್ಯಾಯವೆನಿಸುತ್ತದೆ. ಜೀವನದಲ್ಲಿ ನರ–ನಾರಕಾದಿಪರ್ಯಾಯಾಂತರಗಳು. ಯಾವ ಪ್ರಕಾರವಾಗಿ ಆಗುತ್ತವೆಯೋ ಅದೇ ಪ್ರಕಾರವಾಗಿ ಪ್ರತಿ ಒಂದು ಪದಾರ್ಥದಲ್ಲಿಯೂ ಪರ್ಯಾಯಗಳು ಪರಿವರ್ತನೆಯಾಗುತ್ತವೆ.

## ಕಾಲ ದ್ರವ್ಯವು.

## ಕಾಲಶ್ಚ ||೩೯||

ಅರ್ಥ– ಕಾಲವೂ, ದ್ರವ್ಯವು. ಯಾಕಂದರೆ ಇದೂ ಕೂಡಾ ಉತ್ಪಾದ, ವ್ಯಯ, ಧ್ರೌವ್ಯ ಹಾಗೇನೆಯೇ ಗುಣ ಪರ್ಯಾಯಗಳಿಂದ ಕೂಡಿರುವುದಾಗಿದೆ. ಈ ಕಾಲದ್ರವ್ಯವು ರತ್ನಗಳ ರಾಶಿಯಂತೆ ಬೇರೆ ಬೇರೆಯಾಗಿ ಸಂಪೂರ್ಣ ಲೋಕಾ

ಕಾಶದ ಪ್ರದೇಶದಲ್ಲಿರುವುದು. ಕಾಲದ್ರವ್ಯವು ಕಾಲಾಣುರೂಪದಲ್ಲಿ ಒಂದು ಪ್ರದೇಶಿಯಾಗಿಯೂ ಮತ್ತು ಅಮೂರ್ತಿಕವಾಗಿಯೂ ಆಗಿರುವುದು. ಸೂತ್ರದಲ್ಲಿರುವ ಚಕಾರವು ಕಾಲವೂ ಕೂಡಾ ದ್ರವ್ಯವೆಂಬುದನ್ನಾಗಿ ತೋರಿಸುತ್ತದೆ.

## ಕಾಲದ್ರವ್ಯದ ವಿಶೇಷತೆ.

## ಸೋಽನಂತಸಮಯಃ ॥೪೦॥

ಅರ್ಥ– ಕಾಲದ್ರವ್ಯವು ಅನಂತಸಮಯದಿಂದ ಕೂಡಿದೆ. ಆದರೆ ವರ್ತಮಾನಕಾಲವು ಸಮಯ ಮಾತ್ರವಾಗಿದೆ. ಆದರೆ ಭೂತಭವಿಷ್ಯತ್ತುಗಳ ಅಪೇಕ್ಷೆಯಿಂದ ಅನಂತಸಮಯಗಳಿಂದ ಕೂಡಿರುವದು.

ಸಮಯ–ಕಾಲದ್ರವ್ಯದ ಅತಿ ಸೂಕ್ಷ್ಮ ವಿಭಾಗವು ಸಮಯವೆನಿಸುವುದು. ಮಂದ ಗತಿಯಿಂದ ಹೋಗುವ ಪರಮಾಣು ಆಕಾಶದ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶವನ್ನು ತಲುಪುವ ಕಾಲವು ಸಮಯ ವೆನಿಸುವುದು. ಈ ಸಮಯಗಳ ಸಮೂಹದಿಂದಲೇ ಕಾಲದ್ರವ್ಯದ ಭೇದಗಳಾದ ಆವಲಿ, ಘಂಟೆ ಮೊದಲಾದವುಗಳು ಆಗುತ್ತವೆ. ವ್ಯವಹಾರಕಾಲವು ನಿಶ್ಚಯ ಕಾಲದ್ರವ್ಯದ ಪರ್ಯಾಯವು. ನಿಶ್ಚಯಕಾಲವು ಲೋಕಾಕಾಶದ ಪ್ರತಿಯೊಂದು ಪ್ರದೇಶಗಳಲ್ಲಿಯೂ ರತ್ನದ ರಾಶಿಯಂತಿರುವುದು. ಇದು ಕಾಲದ್ರವ್ಯವೆನಿಸು ಹೇಳಲಾಗುತ್ತದೆ. ವರ್ತನೆಯೇ ಇದರ ಕಾರ್ಯವು.

## ಗುಣದ ಲಕ್ಷಣ

## ದ್ರವ್ಯಾಶ್ರಯಾ ನಿರ್ಗುಣಾ ಗುಣಾಃ ॥ ೪೧ ॥

ಅರ್ಥ–ಯಾವುದು ಯಾವಾಗಲೂ ದ್ರವ್ಯಗಳ ಆಶ್ರಯದಲ್ಲಿರುವದೋ ಮತ್ತು ತಾನಾಗಿ ಬೇರೆ ಗುಣಗಳಿಂದ ರಹಿತವಾದುದೋ ಅದು ಗುಣವು. ಹೇಗೆಂದರೆ ಜೀವನ ಜ್ಞಾನಾದಿಗುಣಗಳು. ಇವು ಜೀವ ದ್ರವ್ಯದಲ್ಲಿರುವವು ಮತ್ತು ಇವುಗಳಲ್ಲಿ ಬೇರೆ ಯಾವ ಗುಣಗಳಿರುವುದಿಲ್ಲ.

## ಪರ್ಯಾಯದ ಲಕ್ಷಣ.

## ತದ್ಭಾವ: ಪರಿಣಾಮಃ ॥ ೪೨ ॥

ಅರ್ಥ– ಜೀವಾದಿ ದ್ರವ್ಯವು ಯಾವ ರೂಪದಲ್ಲಿದೆಯೋ ಅದು ಅದರ ಪರಿಣಾಮವು. [ಸ್ವಭಾವವು]

ಇತಿ ಶ್ರೀಮದುಮಾಸ್ವಾಮಿವಿರಚಿತೆ ಮೋಕ್ಷಶಾಸ್ತ್ರೆ
ಪಂಚಮೋಧ್ಯಾಯಃ



## ಪ್ರಶ್ನೆಗಳು

೧ ಅಸ್ತಿಕಾಯವೆಂದರೇನು ಮತ್ತು ಅದೆಷ್ಟು ?
೨ ಜೀವವು ಅಸಂಖ್ಯಾತ ಪ್ರದೇಶಿಯಾದರೂ ಅಲ್ಪ ಸೂಕ್ಷ್ಮ ಶರೀರದಲ್ಲಿ ಹೇಗಿರುವುವು ?
೩ ಕಾಲದ್ರವ್ಯದ ಉಪಕಾರವೇನು ?
೪ ಅಲೋಕಾಕಾಶದಲ್ಲಿರುವ ಆಕಾಶದಲ್ಲಿ ಉತ್ಪಾದ ವ್ಯಯಗಳು ಹೇಗಾಗುತ್ತವೆ ?
೫ ಪುದ್ಗಲದ್ರವ್ಯದಲ್ಲಿ ಎಷ್ಟು ಪ್ರದೇಶವಿರುವುದು ?
೬ ಅರ್ಪಿತಾನರ್ಪಿತ ಸಿದ್ಧೇಃ ಎಂಬ ಸೂತ್ರದ ಅಭಿಪ್ರಾಯವೇನು ?
೭ ಜಘನ್ಯಗುಣಶಬ್ದದ ಅರ್ಥವೇನು ?
೮ ಬಂಧವು ಯಾವ ಯಾವ ಗುಣಗಳಲ್ಲಿ ಆಗುವದು ?
೯ ಯದಿ ಧರ್ಮದ್ರವ್ಯವನ್ನು ಒಪ್ಪದೆ ಅದರ ಕಾರ್ಯವನ್ನು ಆಕಾಶದ್ರವ್ಯದಿಂದ ಮಾಡಿಸಿಕೊಂಡರೆ ಹಾನಿ ಏನು ?
೧೦ ಕಾಲದ್ರವ್ಯವು ಅಜೀವವೋ ?

# ಆರನೇ ಅಧ್ಯಾಯ

## ಆಸ್ರವ ತತ್ವದ ವರ್ಣನೆ

### ಯೋಗ ವೆಂದರೇನು ?

## ಕಾಯವಾಙ್ಮನಃಕರ್ಮಯೋಗ: ॥ ೧ ॥

ಮೈ ಮಾತು ಮತ್ತು ಮನುಸ್ಸು ಇವುಗಳ ಕರ್ಮ ಅಥವಾ ಕ್ರಿಯೆ ಯೋಗವೆಂದು ಹೆಸರು. ಮೈ ಮಾತು ಮತ್ತು ಮನಸ್ಸಿನ ಮೂಲಕ ಆತ್ಮನ ಪ್ರದೇಶಗಳು ಕಂಪನವಾಗುವುದು, ಅದೇ ಯೋಗವೆಂದೆನ್ನಿಸಿ ಕೊಳ್ಳುತ್ತದೆ.

ಯೋಗವು ಕಾಯಯೋಗ, ವಚನಯೋಗ, ಮತ್ತು ಮನೋ ಯೋಗವೆಂದು ಮೂರು ವಿಧ.

ವೀರ್ಯಾಂತರಾಯ ಕರ್ಮದ ಕ್ಷಯೋಪಶಮವಾಗಲು ಔದಾರಿಕ ಶರೀರ ನಾಮ ಕರ್ಮದ ಉದಯದಿಂದ ಔದಾರಿಕ ಕಾಯಯೋಗ, ಔದಾರಿಕ ಮಿಶ್ರಕಾಯ ಯೋಗ, ವೈಕ್ರಿಯಿಕ ಕಾಯಯೋಗ, ವೈಕ್ರಿಯಿಕ ಮಿಶ್ರಕಾಯ ಯೋಗ, ಆಹಾರಕ ಕಾಯ ಯೋಗ, ಆ ಹಾರಕಮಿಶ್ರಕಾಯ ಯೋಗ ಕಾರ್ಮಾಣ ಕಾಯ ಯೋಗ, ವೆಂದು ಏಳು ವಿಧವಾಗಿದೆ.

ವೀರ್ಯಾಂತರಾಯದ ಕ್ಷಯೋಪಶಮದಿಂದ ವಚನ ವರ್ಗಗಳ ಆಲಂಬನದಿಂದ ಮತ್ಯಕ್ಷರಾದಿ ಆವರಣದ ಕ್ಷಯೋಪರಿಶಮದಿಂದ ಒಳಗಿನ ವಚನ ಲಬ್ಧಿಯು ವಚನ ರೂಪವಾಗಿ ಪರಿಣಮಿಸುತ್ತದೆ. ಹಾಗೆ ವಚನಕ್ಕೆ ಸನ್ಮುಖನಾದ ಆತ್ಮನ ಪ್ರದೇಶಗಳ ಚಲನೆಗೆ ವಚನಯೋಗವೆಂದು ಹೆಸರು.

ವೀರ್ಯಾಂತರಾಯ ಮತ್ತು ನೋಯಿಂದ್ರಿಯಾವರಣದ ಕ್ಷಯೋಪಶಮದಿಂದ ಆಂತರಿಕ ಮನೋಲಬ್ಧಿಯು ಪ್ರಾಪ್ತವಾಗಲು ಮನೋರೂಪವಾದ ವಿಚಾರಕ್ಕೆ ಸನ್ಮುಖನಾದ ಆತ್ಮನ ಪ್ರದೇಶಗಳ ಕಂಪನೆಗೆ ಮನೋಯೋಗವೆಂದು ಹೆಸರು. ಮೂರು ಯೋಗಗಳು ೧೫ ಭೇದಗಳಿಂದ ಯುಕ್ತವಾಗಿವೆ ಮಾತು, ಸತ್ಯ, ಅಸತ್ಯ, ಉಭಯ ಮತ್ತು ಅನುಭಯ ಹಾಗೆ ೪. ಮನಸ್ಸು ಸತ್ಯ ಅಸತ್ಯ, ಉಭಯ ಮತ್ತು ಅನುಭಯವೆಂದು ನಾಲ್ಕು. ಮೇಲೆ ಹೇಳಿದ ಕಾಯದ ಏಳು ಭೇದಗಳು ಒಟ್ಟು ೧೫ ಭೇದಗಳಾಗುತ್ತವೆ.

## ಸ ಆಸ್ರವಃ ॥ ೨ ॥

ಅರ್ಥ :— ಅದೇ ಆಸ್ರವವು. ಅಂದರೆ ಕರ್ಮಗಳು ಆಗಮನದದ್ವಾರ ವೆಂದು ತಿಳಿಯಬೇಕು. ಕರ್ಮಗಳು ಮನ ವಚನ ಕಾಯಗಳ ಶುಭ ಅಶುಭ ಪರಿಣತಿಯಲ್ಲಿ ಬರುತ್ತವೆ.

ಶುಭ ಅಶುಭಆಶ್ರವಗಳ ಕಾರಣ

## ಶುಭಃ ಪುಣ್ಯಸ್ಯಾಶುಭಃ ಪಾಪಸ್ಯ ॥ ೩ ॥

ಶುಭಯೋಗವು ಪುಣ್ಯಾಸ್ರವಕ್ಕೂ ಮತ್ತು ಅಶುಭಯೋಗವು ಪಾಪಾ ಸ್ರವಕ್ಕೂ ಕಾರಣವಾಗಿರುತ್ತದೆ. ಮನ ವಚನ ಕಾಯಗಳ ಸರಳತೆಯು ಶುಭ ಯೋಗವೆಂದು ಹೇಳಲ್ಪಡುತ್ತದೆ. ಮನ ವಚನ ಕಾಯಗಳ ಕುಟಿಲತೆಯು ಅಶುಭಯೋಗವೆಂದು ಹೇಳಲ್ಪಡುತ್ತದೆ.

ಸಾಂಪರಾಯಿಕ ಈರ್ಯಾಪಥ ಆಸ್ರವಗಳು

## ಸಕಷಾಯಾಕಷಾಯಯೋಃ ಸಾಂಪರಾಯಿ- ಕೇರ್ಯಾಪಥಯೋಃ ॥ ೪ ॥

ಅರ್ಥ :— ಕಷಾಯ ಸಹಿತವಾದ ಆಸ್ರವಕ್ಕೆ ಸಾಂಪರಾಯಿಕ ಆಸ್ರವ ವೆಂದು ಹೆಸರು. ಅದು ಸಂಸಾರಕ್ಕೆ ಕಾರಣವಾಗಿದೆ. ಈರ್ಯಾಪಥ ಆಸ್ರವವು ಆತ್ಮನ ಉದ್ಧಾರಕ್ಕೆ ಕಾರಣವಾಗಿದೆ. ಅದು ಆದನಂತರ ಮುಂದೆಯೇ ಹೋಗುತ್ತಾನೆ. ಹಿಂದೆ ಬರುವುದಿಲ್ಲ. ಕೇವಲಿಗಳಿಗಾಗುವ ಆಸ್ರವಕ್ಕೆ ಈರ್ಯಾಪಥ ಆಸ್ರವವೆಂದು ಹೆಸರು.

## ಸಾಂಪರಾಯಿಕಆಸ್ರವದ ಭೇದಗಳು

**ಇಂದ್ರಿಯಕಷಾಯಾವ್ರತಕ್ರಿಯಾಃಪಂಚಚತುಃ ಪಂಚಪಂಚವಿಂಶತಿಸಂಖ್ಯಾಃ ಪೂರ್ವಸ್ಯಭೇದಾಃ ||೫||**

ಇಂದ್ರಿಯಗಳು ಐದು (ಎರಡನೆ ಅಧ್ಯಾಯದಲ್ಲಿ ಹೇಳಿದೆ) ಕಷಾಯಗಳು ನಾಲ್ಕು. ಕ್ರೋಧ, ಮಾನ, ಮಾಯಾ, ಲೋಭವೆಂದು. ಅವ್ರತಗಳು ಐದು, ಹಿಂಸಾವ್ರತ, ಅಸತ್ಯಾವ್ರತ, ಚೌರ್ಯಾವ್ರತ, ಕುಶೀಲ ಅವ್ರತ, ಮತ್ತು ಪರಿಗ್ರಹ ಅವ್ರತ. ಕ್ರಿಯೆಗಳು ೨೫ಗಳೆಂದು ತಿಳಿಯಬೇಕು.

ಜಿನಮೂರ್ತಿ, ಗುರುಪ್ರವಚನ ಪೂಜಾದಿಗಳಲ್ಲಿ ತತ್ಪರನಾಗುವುದು ಸಮ್ಯಕ್ತ್ವಕ್ರಿಯೆಯು ಅನ್ಯದೇವತೆಗಳ ಸ್ತುತಿರೂಪವಾದ ಮಿಥ್ಯಾತ್ವಕ್ಕೆ ಕಾರಣವಾದ ಪ್ರವೃತ್ತಿಗೆ ಮಿಥ್ಯಾತ್ವಕ್ರಿಯೆಯೆಂದು ಹೆಸರು, ಕಾಯಾದಿಗಳಿಂದ ಗಮನ ಆಗಮನ ಮೊದಲಾದ ಕ್ರಿಯೆಗೆ ಪ್ರಯೋಗ ಕ್ರಿಯೆಯೆಂದು ಹೆಸರು. ಸಂಯಮಿಪುರುಷನು ಅವಿರತಿಯಕಡೆ ಅಭಿಮುಖನಾಗುವುದು ಸಮಾಧಾನ ಕ್ರಿಯೆಯು. ಈರ್ಯಾಪಥಕ್ಕೆ ಕಾರಣವಾದ ಕ್ರಿಯೆಗೆ ಈರ್ಯಾಪಥ ಕ್ರಿಯೆಯೆಂದು ಹೆಸರು. ಕ್ರೋಧಾವೇಶದಿಂದ ಆಗುವ ಪ್ರವೃತ್ತಿಗೆ ಪ್ರಾದೋಷಿಕೀ ಕ್ರಿಯೆ ಎಂದು ಹೆಸರು. ಕ್ರೋಧದಿಂದ ಯುಕ್ತವಾಗಲು ಕಾಯದಿಂದ ಆಗುವ ಕ್ರಿಯೆಗೆ ಕಾಯಿಕೀಕ್ರಿಯೆ ಎಂದು ಹೆಸರು. ಹಿಂಸೋಪಕರಣಗಳನ್ನು ತೆಗೆದುಕೊಳ್ಳುವುದು ಆಧಿಕರಣ ಕ್ರಿಯೆಯು. ಆಯಾ ಇಂದ್ರಿಯಬಲಗಳನ್ನು ಅಪಹರಿಸುವುದು ಪ್ರಾಣಾತಿಪಾತಿಕೀ ಕ್ರಿಯೆಯು. ರಾಗದಿಂದ ಪೀಡಿತರಾಗಿ ಸುಂದರ ರೂಪಗಳನ್ನು ನೋಡುವ ಇಚ್ಛೆಯನ್ನು ಮಾಡುವುದು ದರ್ಶನ ಕ್ರಿಯೆಯು. ಪ್ರಮಾದದಿಂದ ಕೋಮಲ ವಸ್ತುವನ್ನು ಸ್ಪರ್ಶಿಸಲು ಅಭಿಪ್ರಾಯ ಪಡುವುದು ಅದು ಸ್ಪರ್ಶನ ಕ್ರಿಯೆಯು. ಅಪೂರ್ವ ಹಿಂಸಾದಿಗಳು ಆಗಲು ಕಾರಣಗಳನ್ನು ಸಂಗ್ರಹಿಸುವುದು ಪ್ರಾತ್ಯಯಿಕೀ ಕ್ರಿಯೆಯು. ಸ್ತ್ರೀ ಪುರುಷರು ಪಶುಗಳು ಇವುಗಳ ಸಂಪರ್ಕದಿಂದ ಯುಕ್ತವಾದ ಸ್ಥಾನದಲ್ಲಿ ಮಲಮೂತ್ರ ವಿಸರ್ಜನೆಗಳನ್ನು ಮಾಡುವುದು ಸಮಂತಾನುಪಾತನ ಕ್ರಿಯೆಯು. ನೋಡದ ಮತ್ತು ಶೋಧಿಸದ ಭೂಮಿಯಲ್ಲಿ ತನ್ನ ಶರೀರಾದಿಗಳನ್ನು ಇಡುವುದು ಅದು ಅನಾಭೋಗ ಕ್ರಿಯೆಯು ಬೇರೆಯವರಿಂದ ಮಾಡುವ ಕ್ರಿಯೆಯನ್ನು ತನ್ನ ಕೈಯಿಂದ ಮಾಡುವುದು ಸ್ವಹಸ್ತ ಕ್ರಿಯೆಯು. ಪಾಪದಿಂದ ಅನಾದಿಸಂಸಾ

ರೂಪವಾದ ಕ್ರಿಯೆಯನ್ನು ಅನುಮೋದಿಸುವುದು ನಿಸರ್ಗಕ್ರಿಯೆಯು. ಬೇರೆಯವರು ಆಚರಿಸಿದ ಪಾಪಾಚರಣೆಯನ್ನು ಪ್ರಕಟಿಸುವುದು ಇದು ವಿದಾರಣಕ್ರಿಯೆಯು. ದೇವ ಆಗಮದ ಆಜ್ಞೆಯನ್ನು ಷಡಾವಶ್ಯಕ ಕ್ರಿಯೆಗಳನ್ನು ಚಾರಿತ್ರ ಮೋಹನೀಯ ಕರ್ಮದಿಂದ ಮಾಡಲು ಅಶಕ್ತನಾಗಿರಲು. ಅನ್ಯಥಾರೂಪದಿಂದ ಪ್ರತಿಪಾದಿಸುವುದು ಆಜ್ಞಾವ್ಯಾಪಾದಿಕೀಕ್ರಿಯೆಯು. ದುಷ್ಟತೆ ಮತ್ತು ಆಲಸ್ಯದಿಂದ ಶಾಸ್ತ್ರದಲ್ಲಿ ಹೇಳಿದಂತೆ ನಡೆಯದಿರುವುದು ಮತ್ತು ಅದರ ಅನಾದರ ಮಾಡುವುದು ಅದು ಅನಾಕಾಂಕ್ಷಾಕ್ರಿಯೆಯು. ಛೇದನ ಭೇದನ ಮೊದಲಾದ ಕ್ರಿಯೆಗಳನ್ನು ಸ್ವತಃ ಮಾಡುವುದು ಇತರರು ಮಾಡಿದರೆ ಅದರಲ್ಲಿ ಆನಂದಪಡುವುದು ಇದು ಪ್ರಾರಂಭಕ್ರಿಯೆಯು. ಪರಿಗ್ರಹವು ದೂರವಾಗಬಾರದೆಂದು ಪ್ರಯತ್ನಿಸುವುದು ಪಾರಿಗ್ರಾಹಿಕೀ ಕ್ರಿಯೆಯು. ಜ್ಞಾನದರ್ಶನಾದಿಗಳ ವಿಷಯದಲ್ಲಿ ವಂಚನೆಯನ್ನು ಮಾಡುವುದು ಮಾಯಾಕ್ರಿಯೆಯು. ಮಿಥ್ಯಾದರ್ಶನಾದಿಗಳಿಂದ ಕೂಡಿದ ಬೇರೆಯವರನ್ನು ಪ್ರಶಂಸಿಸುವುದು ಮತ್ತು ಆ ಕಾರ್ಯದಲ್ಲಿ ಅವರನ್ನು ಧೃಢೀಕರಿಸುವುದು ಮಿಥ್ಯಾದರ್ಶನಕ್ರಿಯೆಯು. ಹೀಗೆ ೨೫ ಕ್ರಿಯೆಗಳು. ಇವೆಲ್ಲಾ ಸಂಸಾರಕ್ಕೆ ಕಾರಣವಾಗಿರುವುದರಿಂದ ಸಾಂಪರಾಯಿಕ ಆಸ್ರವಗಳೆಂದು ಹೇಳಲ್ಪಡುತ್ತವೆ.

### ಆಸ್ರವದಲ್ಲಿ ಬೇಧಗಳು.

## ತೀವ್ರಮಂದಜ್ಞಾತಾಜ್ಞಾತಭಾವಾಧಿಕರಣ ವೀರ್ಯವಿಶೇಷೇಭ್ಯಸ್ತದ್ವಿಶೇಷಃ ॥ ೬ ॥

ತೀವ್ರ, ಮಂದ, ಜ್ಞಾತ, ಅಜ್ಞಾತಭಾವ ಆಧಾರಕ್ಕೆ ಅನುಸಾರ, ಶಕ್ತಿ ವಿಶೇಷದಿಂದ ಆಸ್ರವದಲ್ಲಿ (ಭೇದವಾಗುತ್ತದೆ.) ವಿಶೇಷತೆ ಆಗುತ್ತದೆ.

ಉಪಶಾಂತಿಗೆ ಉದ್ರಿಕ್ತವಾದ ತೀವ್ರ ಪರಿಣಾಮಕ್ಕೆ ತೀವ್ರವೆಂದೂ ಉಪಶಾಂತಿಗೆ ಮಂದವೆಂದೂ, ಪ್ರಾಣಿಗಳನ್ನು ಕೊಲ್ಲಬೇಕೆಂದು ತಿಳಿದು ಕೊಲ್ಲುವ ಭಾವಕ್ಕೆ ಜ್ಞಾತಭಾವವೆಂದೂ, ಮದ ಅಥವಾ ಪ್ರಮಾದದಿಂದ ತಿಳಿಯದೆ ಆದ ಪ್ರವೃತ್ತಿಗೆ ಅಜ್ಞಾತವೆಂದೂ, ಜೀವ ಮತ್ತು ಅಜೀವದ ಆಧಾರದಿಂದ ಆಗುವ ಹಿಂಸೆಗೆ ಅಧಿಕರಣವೆಂದೂ, ತನ್ನ ಶಕ್ತಿಯ ವಿಶೇಷತೆಯಿಂದ ಆಗುವ ಹಿಂಸೆಗಳಿಗೆ ವೀರ್ಯ ವಿಶೇಷವೆಂದೂ ಹೇಳಲಾಗಿದೆ. ಇವುಗಳಿಂದ ಆಸ್ರವದಲ್ಲಿ ಭೇದವಾಗುತ್ತದೆ.

ಅಧಿಕರಣವೆಂದರೇನು ?

## ಅಧಿಕರಣಂ ಜೀವಾಜೀವಾಃ ||೭||

ಹಿಂಸಾದಿ ಪಂಚಪಾಪಗಳ ಆಧಾರವು ಜೀವ ಮತ್ತು ಅಜೀವವಾಗಿರುತ್ತದೆ. ಜೀವದ್ರವ್ಯವು ಆಧಾರವಾಗಿದ್ದರೆ ಅದು ಜೀವಾಧಿಕರಣವೆಂದು ತಿಳಿಯಬೇಕು. ಫೋಟೋ ಚಿತ್ರ ಮೊದಲಾದ ಅಜೀವದ ಆಧಾರವಿದ್ದರೆ ಅವನ್ನು ಅಜೀವಾಧಿಕರಣವೆಂದು ತಿಳಿಯಬೇಕು.

ಜೀವಾಧಿಕರಣದ ಭೇದಗಳು

## ಆದ್ಯಂ ಸಂರಂಭಸಮಾರಂಭಾರಂಭಯೋಗ- ಕೃತಕಾರಿತಾನುಮತಕಷಾಯವಿಶೇಷೈಸ್ತ್ರಿಸ್ತ್ರಿ- ಸ್ತ್ರಿಶ್ಚತುಶ್ಚೈಕಶಃ ||೮||

ಮೊದಲನೆಯ ಜೀವಾಧಿಕರಣವು ಸಂರಂಭ, ಸಮಾರಂಭ, ಆರಂಭವೆಂದು ಮೂರು ಭೇದ. ಆ ಸಂರಂಭಾದಿಗಳು ಮನ ವಚನ ಕಾಯರೂಪವಾದ ಯೋಗಗಳಿಂದ ಆಗುತ್ತವೆ. ಮತ್ತು ಮನುಷ್ಯನು ಸ್ವತಃ ಮಾಡುತ್ತಾನೆ. ಇತರರಿಂದ ಮಾಡಿಸುತ್ತಾನೆ. ಮತ್ತು ಇತರರು ಮಾಡಿದರೆ ಅದರಲ್ಲಿ ಅನುಮೋದನೆಯನ್ನು ಕೊಡುತ್ತಾನೆ. ಅವನು ಮಾಡುತ್ತಿರುವ ಕಾರ್ಯದಲ್ಲಿ ನಾಲ್ಕು ಪ್ರಕಾರವಾದ ಕಷಾಯದಲ್ಲಿ ಯಾವುದಾದರೂ ಕಷಾಯವಿರುತ್ತದೆ. ಆದುದರಿಂದ ಈ ಜೀವಾಧಿಕರಣದಿಂದ ಆಗುವ ಆಸ್ರವಭೇದವು ನೂರೆಂಟು ಪ್ರಕಾರವಾಗಿ ಆಗುತ್ತವೆ. $3 \times 3 = 9$, $9 \times 3 = 27$, $27 \times 4 = 108$ ಹೀಗೆ ಭೇದವಾಗುತ್ತದೆ.

ಸಂರಂಭವೆಂದರೆ ಮನಸ್ಸಿನಲ್ಲಿ ಹಿಂಸಾದಿ ಕಾರ್ಯಗಳ ವಿಚಾರ ಮಾಡುವುದು ಅದಕ್ಕೆ ಯೋಗ್ಯವಾದ ಸಾಧನೆಗಳನ್ನು ಏಕತ್ರಿಸುವುದು ಸಮಾರಂಭವು, ಆಕಾರ್ಯವನ್ನು ಪ್ರಾರಂಭಿಸುವುದು ಆರಂಭವು. ಈ ಪ್ರಕಾರ ಜೀವನು ಪಾಪ ಪ್ರವೃತ್ತನಾಗುತ್ತಾನೆ. ನೂರೆಂಟು ಮಾರ್ಗಗಳಿಂದ ಆಗುವ ಪಾಪ ಪ್ರವೃತ್ತಿಯನ್ನು ನೀಗಲು ನೂರೆಂಟು ಮಣಿಗಳು. ಅವುಗಳನ್ನು ಭಾವ ಭಕ್ತಿಗಳಿಂದ ಜಪಿಸಿದರೆ ಆ ಕರ್ಮವು ದಿನಾಲೂ ನೀಗುತ್ತದೆ.

ಅಜೀವಾಧಿಕರಣದ ಭೇದಗಳು

## ನಿರ್ವರ್ತನಾನಿಕ್ಷೇಪಸಂಯೋಗನಿಸರ್ಗಾ ದ್ವಿಚತುರ್ದ್ವಿತ್ರಿಭೇದಾಃ ಪರಮ್ ॥೯॥

ನಿರ್ವರ್ತನೆ ಎಂದರೆ ರಚನೆಯೆಂದರ್ಥ. ನಿರ್ವರ್ತನೆಯು ಎರಡು ಭೇದ. ಮೂಲಗುಣ ನಿರ್ವರ್ತನೆ, ಮತ್ತು ಉತ್ತರಗುಣ ನಿರ್ವರ್ತನೆಯೆಂದು. ಶರೀರ ವಾಙ್ಮನಪ್ರಾಣಾಪಾನಗಳ ರಚನೆಗೆ ಮೂಲಗುಣನಿರ್ವರ್ತನೆಯೆಂದು ಹೆಸರು. ಫ್ರೇಂ. ಕನ್ನಡಿ, ಫೋಟೋ ಮೊದಲಾದ ರಚನೆಯು ಉತ್ತರಗುಣ ನಿರ್ವರ್ತನೆಯು. ನಿಕ್ಷೇಪವು ನಾಲ್ಕು ಪ್ರಕಾರವಾಗಿದೆ. ಅಪ್ರತ್ಯವೇಕ್ಷಿತ, ದುಃಪ್ರಮೃಷ್ಟ, ಸಹಸಾ ಮತ್ತು ಅನಾಭೋಗ ನಿಕ್ಷೇಪಾಧಿಕರಣಗಳೆಂದು.

ನೋಡದೆ ಶೋಧಿಸದ ಆ ಸ್ಥಾನಗಳಲ್ಲಿ ಪುಸ್ತಕ, ಪಿಂಛ, ಕಮಂಡಲು ಮೊದಲಾದುವುಗಳನ್ನು ಇಡುವುದು, ಅದಕ್ಕೆ ಅಪ್ರತ್ಯವೇಕ್ಷಿತ ನಿಕ್ಷೇಪಾಧಿಕರಣ ವೆಂದು ಹೆಸರು. ಹೆದರಿಕೆಯಿಲ್ಲದೆ ಇತರ ಕೆಲಸದ ಅವಸರದಿಂದ ಪುಸ್ತಕ ಕಮಂಡಲ ದೇಹಮಲ ಮೊದಲಾದುವುಗಳನ್ನು ಬಿಸಾಡುವುದು ನೆಲದ ಮೇಲೆ ಹೊತ್ತು ಹಾಕುವುದು, ಸಹಸಾ ನಿಕ್ಷೇಪಾಧಿಕರಣವು. ಈ ಜಾಗದಲ್ಲಿ ಜೀವಜಂತುಗಳು ಇವೆಯೋ ಇಲ್ಲವೋ ಎಂಬುದನ್ನು ವಿಚಾರ ಮಾಡದೆ ಸರಿಯಾಗಿ ನೋಡದೆ ಗುಡಿಸಿ ಸ್ವಚ್ಛ ಮಾಡದೆ ಪುಸ್ತಕಾದಿವಸ್ತುಗಳನ್ನು ಇಡುವುದು ಅನಾಭೋಗ ನಿಕ್ಷೇಪಾಧಿಕರಣವೆನ್ನುತ್ತಾರೆ. ದುರ್ಭಾವನೆಯಿಂದ ಅಜಾಗರೂಕವಾಗಿ, ದಯೆ ಇಲ್ಲದೆ, ಉಪಕರಣಗಳನ್ನು ಇಡುವುದಕ್ಕೆ, ದುಃಪ್ರಮೃಷ್ಟನಿಕ್ಷೇಪಾಧಿಕರಣ ವೆಂದು ಹೆಸರು. ಸಂಯೋಗಾಧಿಕರಣವು ಉಪಕರಣ ಸಂಯೋಗ, ಭಕ್ತಪಾನ ಸಂಯೋಗವೆಂದು ಎರಡುವಿಧ. ಶೀತ ಮತ್ತು ಉಷ್ಣ ಉಪಕರಣಗಳನ್ನು ಪರಸ್ಪರ ಸೇರಿಸುವುದಕ್ಕೆ ಅಥವಾ ಶುದ್ಧಾಶುದ್ಧ ಉಪಕರಣಗಳನ್ನು ಸೇರಿಸು ವುದಕ್ಕೆ ಉಪಕರಣ ಸಂಯೋಗವೆನ್ನುತ್ತಾರೆ. ಸಚಿತ್ತ ಅಚಿತ್ತ ಪೇಯ ಭೋಜ್ಯ ವಸ್ತುಗಳನ್ನು ಪರಸ್ಪರ ಸೇರಿಸುವುದಕ್ಕೆ ಭಕ್ತಪಾನ ಸಂಯೋಗ ವೆನ್ನುತ್ತಾರೆ.

ನಿಸರ್ಗಾಧಿಕರಣವು :— ಮನೋವಾಕ್ಕಾಯ ರೂಪದಿಂ ಮೂರುವಿಧ. ಮನಸ್ಸಿನಲ್ಲಿ ಕೆಡಕನ್ನು ಯೋಚಿಸುವುದು, ಕೆಟ್ಟ ದುಷ್ಟ ವಾಕ್ಯ ಗಳನ್ನು ಪ್ರಯೋಗಿಸುವುದು, ಕೆಟ್ಟ ಅಪ್ರಶಸ್ತರೂಪದಿಂದ ಶರೀರವನ್ನು ಅಳ್ಳಾಡಿಸುವುದು ಇವು ಕ್ರಮವಾಗಿ ಮನೋನಿಸರ್ಗಾಧಿಕರಣ, ವಾಙ್ನಿಸರ್ಗಾಧಿ ಕರಣ ಕಾಯನಿಸರ್ಗಾಧಿಕರಣಗಳು. ಈ ರೀತಿ ಅಜೀವಾಧಿಕರಣವು ೧೧ ವಿಧ ವಾಗಿರುತ್ತದೆ. ಜೀವ ಮತ್ತು ಅಜೀವ ಈ ಎರಡು ಅಧಿಕರಣ ಆಧಾರವನ್ನು ಆಶ್ರಯಿಸಿಕೊಂಡು ಕರ್ಮವು ಆಸ್ರವವಾಗುತ್ತದೆ.

ಪ್ರದೋಷ ನಿನ್ಹವಾದಿಗಳು ಜ್ಞಾನದರ್ಶನಾವರಣೀಯ ಕಾರಣಗಳು.

## ತತ್ಪ್ರದೋಷ, ನಿನ್ಹವಮಾತ್ಸರ್ಯಾಂತರಾಯಾಸಾಧನೋಪಘಾತಾಜ್ಞಾನದರ್ಶನವರಣಯೋ: ||೧೦||

ಅರ್ಥ :— ಜ್ಞಾನ ಮತ್ತು ದರ್ಶನದ ವಿಷಯದಲ್ಲಿ ಪ್ರದೋಷ ನಿನ್ಹವ, ಮಾತ್ಸರ್ಯ, ಅಂತರಾಯ, ಆಸಾಧನ, ಮತ್ತು ಉಪಘಾತ ಇವು ಜ್ಞಾನಾವರಣ ಮತ್ತು ದರ್ಶನಾವರಣ ಕರ್ಮಗಳ ಕಾರಣಗಳಾಗಿವೆ.

ಪ್ರದೋಷ :— ತತ್ವಜ್ಞಾನವು ಮೋಕ್ಷಕ್ಕೆ ಕಾರಣವಾಗಿದೆ. ಇದು ಗುಣಗಾನ ಮಾಡುವ ಸಮಯದಲ್ಲಿ ಬಾಯಿಂದ ಏನೂ ಹೇಳದೆ ಸುಮ್ಮನೆ ಕೂತು ಒಳಗಿಂದೊಳಗೆ ಹೃದಯದಲ್ಲಿ ಉಪದೇಶಕನ ಮೇಲೆ ಕುದಿಯುತ್ತಿರುವ ಭಾವನೆಗೆ ಪ್ರದೋಷವೆನ್ನುತ್ತಾರೆ.

ನಿಹ್ನವ :— ತನಗೆ ಶಾಸ್ತ್ರದ ಅರಿವಿದ್ದರೂ ಇನ್ನೊಬ್ಬನು ಶಾಸ್ತ್ರ ತಿಳಿಯಲು ತತ್ವಜ್ಞಾನ ಮಾಡಿಕೊಳ್ಳಲು ಅಪೇಕ್ಷೆಪಟ್ಟರೆ ಅಂತಹ ಜ್ಞಾನವು ನನಗಿಲ್ಲ, ನನಗೆ ಗೊತ್ತಿಲ್ಲ ಇತ್ಯಾದಿ ರೂಪದಿಂದ ತನ್ನಜ್ಞಾನವನ್ನು ಬಚ್ಚಿಡು ವುದಕ್ಕೆ ನಿಹ್ನವ ಎನ್ನುತ್ತಾರೆ.

ಮಾತ್ಸರ್ಯ :— ವಿದ್ಯೆಯನ್ನು ಸಂಪಾದಿಸಿಕೊಂಡರೂ, ಅದನ್ನು ಇನ್ನೊಬ್ಬರಿಗೆ ದಾನಮಾಡಲು ಯೋಗ್ಯವಾಗಿದ್ದರೂ ಇವನೂ ನನ್ನಂತೆ ಕಲಿತು ವಿದ್ವಾಂಸನಾಗುವನೆಂದು ಬಗೆದು ತಾನು ಕಲಿತ ವಿದ್ಯೆಯನ್ನು ಇನ್ನೊಬ್ಬರಿಗೆ ಕೊಡದೆ ಇರುವುದು ಯಾರಿಗೂ ಓದಿಸದೆ ಇರುವುದು ಮಾತ್ಸರ್ಯವು.

ಅಂತರಾಯ:— ಇನ್ನೊಬ್ಬರ ಅಭ್ಯಾಸದಲ್ಲಿ ವಿಘ್ನತಂದೊಡ್ಡುವುದು ಪುಸ್ತಕ ಸ್ಲೇಟು ಪಾಠಶಾಲೆ ಮೊದಲಾದುವುಗಳನ್ನು ನಾಶಪಡಿಸು

ವುದು ಅಥವಾ ಯಾವ ಕಾರ್ಯದಿಂದ ವಿದ್ಯಾಭಿವೃದ್ಧಿಯಾಗುತ್ತದೋ, ಪ್ರಚಾರವಾಗುತ್ತದೋ ಅಂತಹ ಕಾರ್ಯವನ್ನು ವಿರೋಧಿಸುವುದು, ಕೆಡಿಸುವುದು ಮೊದಲಾದ್ದು ಅಂತರಾಯವಾಗಿರುತ್ತದೆ.

ಆಸಾದನ :– ಇನ್ನೊಬ್ಬನು ಪ್ರಚಾರ ಮಾಡಿದ ಜ್ಞಾನವನ್ನು, ವಿದ್ಯೆಯನ್ನು ತಡೆಯುವುದು, ಸಮ್ಯಜ್ಞಾನದ ಪ್ರಚಾರಕ್ಕೆ ಅವಕಾಶ ಕೊಡದಿರುವುದು ಅಂದರೆ " ಈಗ ಆ ವಿಷಯವನ್ನು ಎತ್ತಬೇಡ " ಇತ್ಯಾದಿ ಹೇಳಿ ಉಪದೇಶಕನಿಗೆ ಅನುತ್ಸಾಹ ಪಡಿಸುವುದು ಇತ್ಯಾದಿ ಆಸಾದನವಾಗಿರುತ್ತದೆ.

ಉಪಘಾತ :– ಪ್ರಶಂಸನೀಯ ಜ್ಞಾನದಲ್ಲಿ ದೂಷಣ ಕಲಂಕವನ್ನು ಹಚ್ಚುವುದು ಉಪಘಾತವು.

ಈ ಮೇಲೆ ವಿವರಿಸಿದ ಆರು ಕಾರಣಗಳು ಜ್ಞಾನ ವಿಷಯದಲ್ಲಿದ್ದರೆ ಜ್ಞಾನಾವರಣ ಕರ್ಮದ, ಆಸ್ರವವಾಗುತ್ತದೆ. ದರ್ಶನದ ವಿಷಯದಲ್ಲಿ ಆದರೆ ದರ್ಶನಾವರಣೀಯಕರ್ಮದ ಆಸ್ರವವಾಗುತ್ತದೆ, ಆಯುಷ್ಯ ಕರ್ಮವನ್ನು ಬಿಟ್ಟು ಏಳು ಕರ್ಮಗಳು ಪ್ರತಿ ಸಮಯ ಜೀವನಿಗೆ ಆಸ್ರವವಾಗುತ್ತವೆ. ಆದರೂ ಸ್ಥಿತಿಬಂಧ ಅನುಭಾಗ ಬಂಧದ ಅಪೇಕ್ಷೆಯಿಂದ ಮೇಲೆ ಹೇಳಿದವು ವಿಶೇಷವಾದ ಕಾರಣಗಳು. ಜ್ಞಾನಾದಿ ಕಾರ್ಯಗಳಲ್ಲಿ ಅವುಗಳನ್ನು ವಿಸಗುವುದರಿಂದ ಸ್ಥಿತಿಬಂಧ ಮತ್ತು ಅನುಭಾಗ ಬಂಧವು ಅಧಿಕವಾಗುತ್ತದೆ. ವೇದನೀಯ ಕರ್ಮವು ಎರಡು ವಿಧ. ಸುಖವನ್ನು ಕೊಡುವುದು ಸಾತಾ ದುಃಖವನ್ನು ಕೊಡುವುದು ಅಸಾತಾವೇದನೀಯ.

## ಅಸಾತಾವೇದನೀಯ ಕಾರಣ.

## ದುಃಖಶೋಕತಾಪಾಕ್ರಂದನವಧಪರಿದೇವನಾನ್ಯಾತ್ಮ ಪರೋಭಯಸ್ಥಾನ್ಯಸದ್ವೇದ್ಯಸ್ಯ ॥೧೧॥

ದುಃಖ :– ಪೀಡಾರೂಪವಾದ ಪರಿಣಾಮ ವಿಶೇಷಕ್ಕೆ ದುಃಖವೆಂದು ಹೆಸರು. ತನಗೆ ಉಪಕಾರವಾಗಿರುವ ಇಷ್ಟ ವಸ್ತುವು ತಪ್ಪಿ ಹೋದರೆ

ಅಗಲಿ ಹೋದರೆ ಪರಿಣಾಮದಲ್ಲಿ ಮಲಿನತೆಯು ಬರುತ್ತದೆ. ಆ ಚಿಂತೆಗೆ ಶೋಕವೆನ್ನುತ್ತಾರೆ.

ತಾಪ :– ಸಂಸಾರದಲ್ಲಿ ತನ್ನನಿಂದೆ ಅಪಕೀರ್ತಿ ಮೊದಲಾದ ಕಾರಣದಿಂದ ಮನಸ್ಸು ಖಿನ್ನವಾಗಿ ಅತಿಶಯ ಸಂತಾಪವಾಗುತ್ತದೆ. ಇದಕ್ಕೆ ತಾಪವೆನ್ನುತ್ತಾರೆ.

ಆಕ್ರಂದನ :– ಸಂತಾಪದ ಕಾರಣದಿಂದ ಕಣ್ಣೀರಿನ ಧಾರೆಯೊಡನೆ ಬಾಯಲ್ಲಿ ಏನೊಂದೋ ಅಂದುಕೊಂಡು ಘಟ್ಟಿಯಾಗಿ ಅಳುವುದಕ್ಕೆ ಆಕ್ರಂದನವೆನ್ನುತ್ತಾರೆ.

ವಧ :– ಆಯು ಇಂದ್ರಿಯ ಬಲ ಶ್ವಾಸೋಚ್ಛ್ವಾಸ ಪ್ರಾಣಗಳನ್ನು ಜೀವದಿಂದ ಅಗಲಿಸುವುದಕ್ಕೆ ವಧವೆನ್ನುತ್ತಾರೆ.

ಪರಿದೇವನ :– ಅತ್ಯಂತದುಃಖಿತವಾಗಿ ಗುಣಗಳನ್ನು ಸ್ಮರಿಸಿ ಹೊಗಳುತ್ತಾ ಕೇಳುವವರ ಹೃದಯದಲ್ಲಿ ದಯೆ ಉದಯಿಸಿ ಕನಿಕರ ಆಗುವಂತೆ ಅಳುವುದಕ್ಕೆ ಪರಿದೇವನವೆನ್ನುತ್ತಾರೆ. ಹೀಗೆ ವಿವರಿಸಿಕೊಂಡು ಬಾದ ದುಃಖ ಶೋಕ ತಾಪ ಆಕ್ರಂದನ ವಧ ಪರಿದೇವನ ಇವುಗಳನ್ನು ತಾನು ಮಾಡುವುದರಿಂದಲೂ ಇನ್ನೊಬ್ಬರಿಂದ ಮಾಡಿಸುವುದರಿಂದಲೂ ಇಬ್ಬರಿಗೂ ಒಂದೇ ಸಲ ಉಂಟಾಗುವಂತೆ ಮಾಡುವುದರಿಂದಲೂ ಅಸಾತಾವೇದನೀಯ ಕರ್ಮದ ಆಶ್ರವವಾಗುತ್ತದೆ.

## ಸಾತಾವೇದನೀಯದ ಕಾರಣ

**ಭೂತವ್ರತ್ಯನುಕಂಪಾದಾನಸರಾಗಸಂಯಮಾದಿ ಯೋಗಃ ಕ್ಷಾಂತಿಃಶೌಚಮಿತಿ ಸದ್ವೇದ್ಯಸ್ಯ ॥೧೨॥**

ಭೂತಾನುಕಂಪಾ :– ಕರ್ಮೋದಯದ ಕಾರಣದಿಂದ ನಾನಾಗತಿಗಳಲ್ಲಿ ಯಾವ ಪ್ರಾಣಿಗಳು ಇರುತ್ತವೆಯೋ ಅವು ಭೂತಗಳೆಂದು ಹೇಳಲ್ಪಡುತ್ತವೆ ಅವುಗಳ ಮೇಲೆ ದಯೆಯನ್ನಿಡುವುದಕ್ಕೆ ಭೂತಾನುಕಂಪಾವೆನ್ನುತ್ತಾರೆ.

ಅರ್ಥ-ಭೂತವ್ರತ್ಯನುಕಂಪಾ-ದಾನ-ಸರಾಗಸಂಯಮಾದಿ-ಯೋಗಕ್ಷಾಂತಿ ಮತ್ತು ಶೌಚಗಳು ಸಾತಾವೇದನೀಯಕರ್ಮಾಸ್ರವವು.

ಭೂತವ್ರತ್ಯನುಕಂಪಾ–ಭೂತವೆಂದರೆ ಸಂಪೂರ್ಣ ಸಂಸಾರಿ ಜೀವಿಗಳು. ವ್ರತಿಗಳೆಂದರೆ ಅಣುವ್ರತ ಮತ್ತು ಮಹಾವ್ರತ ಧಾರಿಗಳು. ಇವರ ಮೇಲೆ ದಯೆ ಮಾಡುವದು ಭೂತವ್ರತ್ಯನುಕಂಪಾ ಎಂಬುದು.

ದಾನ–ತನ್ನ ಮತ್ತು ಬೇರೆಯವರ ಉಪಕಾರಕ್ಕೆ ಬರುವ ವಸ್ತುಗಳನ್ನು ನಿಸ್ವಾರ್ಥಭಾವದಿಂದ ಕೊಡುವುದು ದಾನವು.

ಸರಾಗಸಂಯಮಾದಿ–ಪಂಚೇಂದ್ರಿಯ ಮತ್ತು ಮನಸ್ಸಿನ ವಿಷಯ ಗಳಾದ ಭೋಗೋಪಭೋಗ ವಸ್ತುಗಳಿಂದ ವಿರಕ್ತನಾಗುವುದೂ ಮತ್ತು * ಷಡ್‌ಕಾಯಧಾರಿಗಳಾದ ಜೀವರುಗಳ ಹಿಂಸೆಯನ್ನು ಮಾಡದಿರುವುದು ಸಂಯಮವು, ರಾಗಸಹಿತವಾದ (ಕಷಾಯಮಿಶ್ರವಾದ) ಸಂಯಮವು ಸರಾಗಸಂಯಮವು.

ಇಲ್ಲಿ ಆದಿ ಶಬ್ದದಿಂದ ಸಂಯಮಾಸಂಯಮ (ಶ್ರಾವಕರವ್ರತ) ಅಕಾಮನಿರ್ಜರಾ (ತನ್ನ ಇಚ್ಛೆ ಇಲ್ಲದೇನೆಯೇ ವ್ರತ ಮೊದಲಾದವುಗಳನ್ನು ಮಾಡುವುದು) ಮತ್ತು ಬಾಲತಪ (ಮಿಥ್ಯಾದರ್ಶನದಿಂದ ಕೂಡಿದ ತಪಸ್ಸು ಅಥವಾ ಅಜ್ಞಾನ ತಪಸ್ಸು) ಇವುಗಳ ಸಂಗ್ರಹವೂ ಆಗುತ್ತದೆ.

ಯೋಗ–ಮೇಲೆ ಬರೆದ ಭೂತವ್ರತ್ಯನುಕಂಪಾ ಮೊದಲಾದವುಗಳನ್ನು ನಿರ್ದೋಷವಾಗಿ ಆಚರಿಸುವದು ಯೋಗವು.

ಕ್ಷಾಂತಿ—ಕ್ರೋಧಾದಿ ಕಷಾಗಳ ಅಭಾವವು ಕ್ಷಾಂತಿಯು.

ಶೌಚ—ಲೋಭವನ್ನು ಬಿಡುವುದು ಶೌಚವು. ಸೂತ್ರದಲ್ಲಿರುವ ಇತಿ ಶಬ್ದದಿಂದ ಅರ್ಹದ್ಭಕ್ತಿ ಮುನಿಗಳ ವೈಯ್ಯಾವೃತ್ಯ, ಅಭಿಷೇಕ ಪೂಜೆ ಮತ್ತು ಆರಾಧನೆಗಳಿಂದಲೂ ಸಾತಾವೇದನೀಯ ಕರ್ಮದ ಆಸ್ರವವಾಗುವು ದೆಂದು ತಿಳಿಯಬೇಕು.

* ಪೃಥ್ವೀಕಾಯ, ಆಪ್‌ಕಾಯ, ತೇಜಕಾಯ, ವಾಯುಕಾಯ, ವನಸ್ಪತಿಕಾಯ ಮತ್ತು ತ್ರಸಕಾಯಗಳೆಂಬುದು ಷಡ್‌ಕಾಯಗಳು.

## ದರ್ಶನ ಮೋಹನೀಯ ಕರ್ಮದ ಆಸ್ರವ

## ಕೇವಲಿಶ್ರುತಸಂಘಧರ್ಮದೇವಾವರ್ಣವಾದೋ ದರ್ಶನಮೋಹಸ್ಯ ||೧೩||

ಅರ್ಥ—ಕೇವಲಿ, ಶ್ರುತ (ಶಾಸ್ತ್ರ) ಸಂಘ, (ಮುನಿ, ಆರ್ಯಿಕಾ, ಶ್ರಾವಕ ಮತ್ತು ಶ್ರಾವಕಿಯರು) ಧರ್ಮ ಮತ್ತು ದೇವತೆಗಳ ಅವರ್ಣವಾದವು ದರ್ಶನ ಮೋಹನೀಯ ಕರ್ಮದ ಆಸ್ರವವು.

ಅವರ್ಣವಾದ–ಗುಣವಂತರನ್ನು ಸುಳ್ಳು ದೋಷಕ್ಕೆ ಗುರಿಮಾಡುವದು ಅವರ್ಣವಾದವು.

ಕೇವಲಿಗಳ ಅವರ್ಣವಾದ–ಕೇವಲಿಗಳು ಕವಲಾಹಾರಿಗಳೆಂದೂ ಸವಸ್ತ್ರರಾಗಿರುತ್ತಾರೆಂದೂ, ಮಿಥ್ಯೋಪದೇಶ ಮಾಡುವವರೆಂದೂ ಹೇಳುವುದು ಕೇವಲೀ ಅವರ್ಣವಾದವು.

ಶ್ರುತದ ಅವರ್ಣವಾದ–ಶಾಸ್ತ್ರದಲ್ಲಿ ಮಾಂಸಭಕ್ಷಣೆ ಹಿಂಸೆ ಮತ್ತು ಮದ್ಯಪಾನ ಮಾಡುವ ವಿಧಾನಗಳಿವೆ. ಎಂದು ಪ್ರತಿಪಾದನೆ ಮಾಡುವದು ಶ್ರುತಾವರ್ಣವಾದವು.

ಸಂಘದ ಅವರ್ಣವಾದ–ಸಂಘದಲ್ಲಿರುವ ಮುನಿ ಮೊದಲಾದವರನ್ನು ಕುರಿತು ಇವರು ಶೂದ್ರರು, ಮಲಿನರು, ಬೆತ್ತಲೆಯಾಗಿರುವರು ಮೊದಲಾಗಿ ಮುನಿಸಂಘದ ನಿಂದೆ ಮಾಡುವದು ಸಂಘಾವರ್ಣವಾದವು.

ಧರ್ಮದ ಅವರ್ಣವಾದ – ಜಿನೇಂದ್ರರಿಂದ ಉಪದೇಶ ಮಾಡಿದ ಧರ್ಮವು ಹೇಯವಾದುದು, ಬೀಭತ್ಸೆಯನ್ನುಂಟು ಮಾಡುವದೂ ಇದರಲ್ಲಿ ಯಾವುದಾದರೊಂದು ಬಗೆಯ ಗುಣಗಳಿಲ್ಲವೆಂದು ಹೇಳುವದು ಧರ್ಮಾವರ್ಣವಾದವು.

ದೇವತೆಗಳ ಅವರ್ಣವಾದ–ದೇವತೆಗಳು ಮದ್ಯಪಾಯಿಗಳು. ಮಾಂಸಾಹಿನ್ನುವವರಲ್ಲಿ ಜೀವರುಗಳ ಬಲಿಯಿಂದ ಪ್ರಸನ್ನರಾಗುವರು. ಎಂಬವೇ ಮೊದಲಾದವುಗಳನ್ನು ಅನ್ನುವದು ದೇವಾವರ್ಣವಾದವು.

### ಚಾರಿತ್ರ ಮೋಹನೀಯದ ಆಸ್ರವ

## ಕಷಾಯೋದಯಾತ್ತೀವ್ರಪರಿಣಾಮಶ್ಚಾರಿತ್ರ-ಮೋಹಸ್ಯ ||೧೪||

ಅರ್ಥ-ಕ್ರೋಧಾದಿ ಕಷಾಯಗಳ ಉದಯದಿಂದಾಗುವ ತೀವ್ರ ಪರಿಣಾಮವು ಚಾರಿತ್ರಮೋಹನೀಯ ಕರ್ಮದ ಆಸ್ರವವು.

### ನರಕಾಯುವಿನ ಆಸ್ರವವು

## ಬಹ್ವಾರಂಭಪರಿಗ್ರಹತ್ವಂ ನಾರಕಸ್ಯಾಯುಷಃ ||೧೫||

ಅರ್ಥ-ಬಹು ಹೆಚ್ಚಾದ ಆರಂಭವೂ (ಕೃಷಿ ಮೊದಲಾದವುಗಳು) ಮತ್ತು ಪರಿಗ್ರಹಗಳು ನರಕಾಯುವಿನ ಆಸ್ರವಕ್ಕೆ ಕಾರಣವು.

### ತಿರ್ಯಂಚಾಯುವಿನ ಆಸ್ರವ

## ಮಾಯಾ ತೈರ್ಯಗ್ಯೋನಸ್ಯ ||೧೬||

ಅರ್ಥ-ಮಾಯೆ ಅಂದರೆ ಛಲಕಪಟವು, ತಿರ್ಯಂಚಗತಿಯ ಆಯುಷ್ಯದ ಆಸ್ರವಕ್ಕೆ ಕಾರಣವು.

### ಮನುಷ್ಯಾಯುವಿನ ಆಸ್ರವ

## ಅಲ್ಪಾರಂಭಪರಿಗ್ರಹತ್ವಂ ಮಾನುಷಸ್ಯ||೧೭||

ಅರ್ಥ-ಸ್ವಲ್ಪ ಆರಂಭವೂ ಮತ್ತು ಸ್ವಲ್ಪ ಪರಿಗ್ರಹವೂ ಮನುಷ್ಯಾಯುವಿನ ಆಸ್ರವಕ್ಕೆ ಕಾರಣವು.

—ಮತ್ತು—

## ಸ್ವಭಾವಮಾರ್ದವಂ ಚ ||೧೮||

ಅರ್ಥ-ಸ್ವಭಾವದ ಕೋಮಲತೆಯಿಂದಲೂ ಮನುಷ್ಯಾಯುವಿನ ಆಸ್ರವವಾಗುತ್ತದೆ. ಈ ಸೂತ್ರವನ್ನು ಬೇರೆಯಾಗಿ ಹೇಳುವ ಆವಶ್ಯಕತೆಯಾದರೋ ಕೋಮಲ ಪರಿಣಾಮದಿಂದ ದೇವಾಯುಷ್ಯದ ಆಸ್ರವವು ಆಗುತ್ತದೆಂದು ತಿಳಿಸಲೋಸುಗ.

ಎಲ್ಲಾ ಆಯುಷ್ಯಗಳ ಆಸ್ರವದ ಕಾರಣ

## ನಿಃಶೀಲವ್ರತತ್ವಂ ಚ ಸರ್ವೇಷಾಂ ||೧೯||

ಅರ್ಥ — ಯಾವನಾದರೊಬ್ಬ ವ್ಯಕ್ತಿಯು ದಿಗ್ವ್ರತ ವೊದಲಾದ ೭ ಶೀಲವ್ರತಗಳನ್ನೂ ಮತ್ತು ಅಹಿಂಸಾದಿ ಪಂಚಾಣುವ್ರತಗಳನ್ನೂ ಪಾಲಿಸದಿದ್ದರೂ ನಾಲ್ಕು ತರಹದ ಆಯುಷ್ಯಗಳ ಆಸ್ರವವಾಗುತ್ತದೆಯೆಂದು ತಿಳಿಯಬೇಕು. ಕಾರಣ ವ್ರತ ವೊದಲಾದವುಗಳನ್ನೂ ಪಾಲಿಸುವದು ದೃಢವಾದ ಸಮ್ಯಗ್ದರ್ಶನವನ್ನು ಧಾರಣೆ ಮಾಡಿದ ನಂತರವೇ ಅಂದರೆ ಮಿಥ್ಯಾದೃಷ್ಟಿಯು ಯಾವ ವ್ರತಗಳನ್ನು ಪಾಲಿಸುವುದಿಲ್ಲ. ವ್ರತ ಧಾರಣೆ ಮಾಡಿದ ಮೇಲೆ ಯಾವುದಾದರೊಂದು ಆಯುಷ್ಯದ ಆಸ್ರವವಾಗುವುದಾದರೆ ವಿಶೇಷವಾಗಿ ದೇವಾಯುಷ್ಯವೆಂದು ತಿಳಿಯಬೇಕು. ಆದರೆ ಇಲ್ಲಿ ನಾಲ್ಕು ಗತಿಯ ಆಯುಷ್ಯವು ಸಾಮಾನ್ಯರೂಪವಾಗಿ ವ್ರತ ಮತ್ತು ಶೀಲ ಗುಣಗಳನ್ನು ಪಾಲಿಸದಿದ್ದರೂ ಆಸ್ರವವಾಗುವುದೆಂದು ತೋರಿಸಲೋಸುಗ ಈ ಸೂತ್ರದ ಉಲ್ಲೇಖವಿದೆ.

ದೇವಾಯುಷ್ಯದ ಆಸ್ರವವು

## ಸರಾಗಸಂಯಮಸಂಯಮಾಸಂಯಮಾಕಾಮನಿ-
## ರ್ಜರಾಬಾಲತಪಾಂಸಿ ದೈವಸ್ಯ ||೨೦||

ಅರ್ಥ-ಸರಾಗಸಂಯಮ, ಸಂಯಮಾಸಂಯಮ, ಅಕಾಮನಿರ್ಜರಾ ಮತ್ತು ಬಾಲತಪಸ್ಸು ಇವುಗಳು ದೇವಾಯುಷ್ಯದ ಆಸ್ರವವು

—ಮತ್ತು—

## ಸಮ್ಯಕ್ತ್ವಂ ಚ ||೨೧||

ಅರ್ಥ-ಸಮ್ಯಗ್ದರ್ಶನದಿಂದಲೂ ದೇವಾಯುವಿನ ಆಸ್ರವವಾಗುತ್ತದೆ. ಈ ಸೂತ್ರವನ್ನು ಹೇಳಲು ಮುಖ್ಯ ಕಾರಣವಾದರೋ ಸಮ್ಯಕ್ತ್ವದಿಂದ ಮುಖ್ಯವಾಗಿ ವೈಮಾನಿಕ ದೇವತೆಗಳ ಆಯುಷ್ಯದ ಆಸ್ರವವಾಗುತ್ತದೆಂದು ನಿಯಮಪೂರ್ವಕವಾಗಿ ತಿಳಿಯಬೇಕೆಂದು. ಸಮ್ಯಗ್ದರ್ಶನವು ಯಾವುದಾ

ರೊಂದು ಕರ್ಮಬಂಧಕ್ಕೆ ಕಾರಣವಾಗಿರುವುದಿಲ್ಲ, ತಥಾಪಿ ಸಮ್ಯಗ್ದರ್ಶನ ಅವಸ್ಥೆಯಲ್ಲಿ ಯಾವ ರಾಗಾಂಶವಿದೆಯೋ ಅದರಿಂದ ಕರ್ಮಬಂಧವಾಗುತ್ತದೆ. ಇದೇ ರೀತಿ ಇತರ ದೇವಗತಿಯ ಆಯುವಿನ ಆಸ್ರವಕ್ಕೆ ಕಾರಣಭೂತವಾದವು ಗಳಲ್ಲಿ ತಿಳಿಯಬೇಕು. ಹಾಗೇನೆಯೇ ಈ ಕೆಳಗಿನ ಶ್ಲೋಕದಲ್ಲಿ ಅಮೃತಚಂದ್ರ ಸೂರಿಗಳು ಹೇಳಿದ್ದಾರೆ—

ಯೇನಾಂಶೇನಸುದೃಷ್ಟಿಸ್ತೇನಾಂಶೇನಾಸ್ಯ ಬಂಧನಂ ನಾಸ್ತಿ ॥
ಯೇನಾಂಶೇನ ತು ರಾಗಸ್ತೇನಾಂಶೇನಾಸ್ಯ ಬಂಧನಂ ಭವತಿ ॥

### ಅಶುಭನಾಮ ಕರ್ಮದ ಆಸ್ರವ

## ಯೋಗವಕ್ರತಾವಿಸಂವಾದನಂ ಚಾಶುಭಸ್ಯ ನಾಮ್ನಃ

ಅರ್ಥ—ಮನ, ವಚನ ಕಾಯಗಳ ಕುಟಿಲತೆಯೂ ವಿಸಂವಾದನೆ ಅಂದರೆ ಅನ್ಯಥಾ ಪ್ರವೃತ್ತಿಯೂ, ಅಶುಭನಾಮ ಕರ್ಮದ ಆಸ್ರವಕ್ಕೆ ಕಾರಣವು.

### ಶುಭನಾಮಕರ್ಮದ ಆಸ್ರವವು

## ತದ್ವಿಪರೀತಂ ಶುಭಸ್ಯ ॥೨೩॥

ಅರ್ಥ—ಮನ-ವಚನ-ಕಾಯಗಳೆಂಬ ಯೋಗಗಳ ಸರಲತೆಯಿಂದಲೂ ಅನ್ಯಥಾ ಪ್ರವೃತ್ತಿ ಮಾಡದಿರುವುದರಿಂದಲೂ (ಮಿಥ್ಯಾಮಾರ್ಗದಲ್ಲಿ ನಡೆಯ ದಿರುವುದರಿಂದಲೂ) ಶುಭನಾಮ ಕರ್ಮದ ಆಸ್ರವವಾಗುತ್ತದೆ.

### ತೀರ್ಥಂಕರನಾಮಕರ್ಮದ ಆಸ್ರವ

## ದರ್ಶನವಿಶುದ್ಧಿರ್ವಿನಯಸಂಪನ್ನತಾ ಶೀಲವ್ರತೇಷ್ವ ನೇತಿಚಾರೋಽಭೀಕ್ಷ್ಣ ಜ್ಞಾನೋಪಯೋಗಸಂವೇಗೌ ಶಕ್ತಿತಸ್ತ್ಯಾಗ ತಪಸೀಸಾಧುಸಮಾಧಿರ್ವೈಯಾವೃತ್ಯ ಕರಣಮರ್ಹದಾಚಾರ್ಯಬಹುಶ್ರುತ ಪ್ರವಚನಭಕ್ತಿ ರಾವಶ್ಯಕಾಪರಿಹಾಣಿರ್ಮಾರ್ಗಪ್ರಭಾವನಾ ಪ್ರವಚನ ವತ್ಸಲತ್ವಮಿತಿ ತೀರ್ಥಕರತ್ವಸ್ಯ ॥೨೪॥

ಅರ್ಥ-ದರ್ಶನವಿಶುದ್ಧಿ ಮೊದಲಾದ ೧೬ ಭಾವನೆಗಳಿಂದ ಅನ್ಯರಿಂ ಪಡೆಯಲು ಅಸಾಧ್ಯವಾದುದೂ ಪರಮಪವಿತ್ರವೂ ಆದ ತೀರ್ಥಂಕರ ನಾಮ ಕರ್ಮದ ಆಸ್ರವವಾಗುವುದು.

೧ ದರ್ಶನವಿಶುದ್ಧಿ-೨೫ ದೋಷಗಳಿಂದ ರಹಿತವಾದ ಶುದ್ಧ ಸಮ್ಯಗ್ದರ್ಶನವು.

೨ ವಿನಯಸಂಪನ್ನತೆ-ರತ್ನತ್ರಯ ಮತ್ತು ಅದನ್ನು ಧರಿಸಿದವರಲ್ಲಿ ವಿನಯ ಮಾಡುವದು.

೩ ಶೀಲವ್ರತೇಷ್ವನತೀಚಾರ-ಅಹಿಂಸಾದಿ ವ್ರತಗಳು ಮತ್ತು ಅವುಗಳನ್ನು ಪರಿಪಾಲಿಸಲು ಯೋಗ್ಯವಾದ ಕ್ರೋಧಾದಿಗಳನ್ನು ಬಿಟ್ಟು ಶೀಲಾದಿಗಳಲ್ಲಿ ಪ್ರವರ್ತಿಸಿರುವದು.

೪-೫ ಅಭೀಕ್ಷ್ಣಜ್ಞಾನೋಪಯೋಗಸಂವೇಗೌ-ನಿರಂತರವೂ ಜ್ಞಾನಾಭ್ಯಾಸವು ಅಭೀಕ್ಷ್ಣಜ್ಞಾನೋಪಯೋಗವೆಂದೂ, ಮತ್ತು ಸಂಸಾರದಿಂದ ಭಯಭೀತನಾಗುವದು ಸಂವೇಗವೆಂದೂ ಹೇಳಲ್ಪಡುತ್ತದೆ.

೬-೭ ಶಕ್ತಿತಸ್ತ್ಯಾಗ ತಪಸೀ-ಶಕ್ತಿಗನ್ನುಸಾರವಾಗಿ ದಾನ ಕೊಡುವುದು ಸಕ್ತಿತಸ್ತ್ಯಾಗವೂ ಮತ್ತು ಉಪವಾಸ ಮೊದಲಾದ ತಪಸ್ಸನ್ನು ಮಾಡುವದು ಶಕ್ತಿತಃ ತಪವು.

೮ ಸಾಧುಸಮಾಧಿ-ಸಾಧುಗಳ ವಿಘ್ನ ಭಾಧೆಗಳನ್ನು ದೂರ ಮಾಡುವದು ಸಾಧುಸಮಾಧಿಯು.

೯ ವೈಯ್ಯಾವೃತ್ಯಕರಣಂ-ರೋಗೀ ಮತ್ತು ಬಾಲವೃದ್ಧ ಮುನಿಗಳ ಸೇವೆಯನ್ನು ಮಾಡುವದು.

೧೦-೧೧-೧೨-೧೩ ಅರ್ಹದಾಚಾರ್ಯಬಹುಶ್ರುತಪ್ರವಚನಭಕ್ತಿ:- ಅರಹಂತರಲ್ಲಿ ಭಕ್ತಿ ಮಾಡುವದು ಅರ್ಹದ್ ಭಕ್ತಿಯು, ಆಚಾರ್ಯರಲ್ಲಿ ಭಕ್ತಿ ಮಾಡುವದು ಆಚಾರ್ಯ ಭಕ್ತಿಯು, ಗಣಧರರಲ್ಲಿ ಭಕ್ತಿ ಮಾಡುವದು ಬಹುಶ್ರುತ ಭಕ್ತಿಯು, ಮತ್ತು ಶಾಸ್ತ್ರದಲ್ಲಿ ಭಕ್ತಿ ಮಾಡುವದು ಪ್ರವಚನ ಭಕ್ತಿಯು.

೧೪ ಆವಶ್ಯಕಾಪರಿಹಾಣಿ-ಸಾಮಾಯಿಕ ಮೊದಲಾದ ಷಡಾವಶ್ಯಕ ಕ್ರಿಯೆಗಳನ್ನು ಪರಿಪಾಲಿಸುವುದು ಆವಶ್ಯಕ ಅಪರಿಹಾಣಿಯು.

೧೫ ಮಾರ್ಗ ಪ್ರಭಾವನಾ—ಜೈನ ಧರ್ಮದ ಪ್ರಭಾವನೆಯನ್ನು ಅತಿ ಲವಾದ ಭಕ್ತಿಯಿಂದ ಮಾಡುವದು ಮಾರ್ಗ ಪ್ರಭಾವನೆಯು.

೧೬ ಪ್ರವಚನವತ್ಸಲತ್ವಂ—ಧರ್ಮಾತ್ಮರಲ್ಲಿ ವಾತ್ಸಲ್ಯವನ್ನಿಡುವದು ಪ್ರವಚನವತ್ಸಲತ್ವವು.

ಈ ೧೬ ಭಾವನೆಗಳಿಂದ ತೀರ್ಥಕರ ನಾಮಕರ್ಮದ ಆಸ್ರವವಾಗುತ್ತದೆ. ಈ ಭಾವನೆಗಳಲ್ಲಿ ದರ್ಶನವಿಶುದ್ಧಿ ಭಾವನೆಯು ಮುಖ್ಯವಾದುದು. ಅದಿಲ್ಲದಿದ್ದರೆ ಬೇರೆ ಭಾವನೆಗಳಿದ್ದರೂ ತೀರ್ಥಕರ ಪ್ರಕೃತಿಯು ಆಸ್ರವವಾಗುವದಿಲ್ಲ. ಆದರೆ ದರ್ಶನವಿಶುದ್ಧಿ ಭಾವನೆ ಇದ್ದರೆ ಬೇರೆ ಭಾವನೆಗಳಿಲ್ಲದಿದ್ದರೂ ತೀರ್ಥಕರ ಪ್ರಕೃತಿಯು ಆಸ್ರವವಾಗುತ್ತದೆ.

### ನೀಚಗೋತ್ರ ಕರ್ಮದ ಆಸ್ರವವು

**ಪರಾತ್ಮನಿಂದಾಪ್ರಶಂಸೇ ಸದಸದ್‌ಗುಣೋಚ್ಛಾದನೋದ್ಭಾವನೇ ಚ ನೀಚೈರ್ಗೋತ್ರಸ್ಯ ||೨೫||**

ಅರ್ಥ—ಬೇರೆಯವರ ನಿಂದೆ ಮಾಡುವದೂ ಮತ್ತು ತನ್ನ ಪ್ರಶಂಸೆ ಮಾಡುವದೂ. ಬೇರೆಯವರ ಒಳ್ಳೇ ಗುಣಗಳನ್ನು ಮುಚ್ಚಿಡುವದೂ, ಮತ್ತು ದೋಷಗಳನ್ನು ಪ್ರಕಟಿಸುವುದೂ, ನೀಚ ಗೋತ್ರ ಕರ್ಮದ ಆಸ್ರವಕ್ಕೆ ಕಾರಣವು.

### ಉಚ್ಚ ಗೋತ್ರಕರ್ಮದ ಆಸ್ರವವು

**ತದ್ವಿಪರ್ಯಯೋ ನೀಚೈರ್ವೃತ್ಯನುತ್ಸೇಕೌ ಚೋತ್ತರಸ್ಯ ||೨೬||**

ಅರ್ಥ—ನೀಚ ಗೋತ್ರದ ಆಸ್ರವದಲ್ಲಿ ಹೇಳಿರುವುದಕ್ಕಿಂತಲೂ ವಿಪರೀತವಾಗಿ ಅಂದರೆ ಬೇರೆಯವರ ಪ್ರಶಂಸೆ, ತನ್ನ ನಿಂದೆ, ನಮ್ರವೃತ್ತಿಯೂ (ವಿಧೇಯತೆಯೂ) ಗರ್ವಿಷ್ಠನಾಗದಿರುವದೂ, ಉಚ್ಚ ಗೋತ್ರ ಕರ್ಮದ ಆಸ್ರವಕ್ಕೆ ಕಾರಣವು.

### ಅಂತರಾಯಕರ್ಮದ ಆಸ್ರವವು

**ವಿಘ್ನಕರಣಮಂತರಾಯಸ್ಯ ||೨೭||**

ಅರ್ಥ–ಬೇರೆಯವರ ದಾನ, ಲಾಭ, ಭೋಗ, ಉಪಭೋಗ, ವೀರ್ಯಗಳಲ್ಲಿ ವಿಘ್ನವನ್ನುಂಟುಮಾಡುವದು ಅಂತರಾಯ ಕರ್ಮದ ಆಸ್ರವಕ್ಕೆ ಕಾರಣವು.

ಇತಿ ಶ್ರೀಮದುಮಾಸ್ವಾಮಿವಿರಚಿತೆ ಮೋಕ್ಷಶಾಸ್ತ್ರೆ ಷಷ್ಠೋಧ್ಯಾಯಃ

## ಪ್ರಶ್ನೆಗಳು

೧ ಯೋಗವೆಂದರೇನು? ಅದರ ಭೇದವೆಷ್ಟು?

೨ ಅಜೀವಾಧಿಕರಣ ಆಸ್ರವದ ಭೇದವೆಷ್ಟು?

೩ ಆಯುಷ್ಯಕರ್ಮವನ್ನು ಬಿಟ್ಟು ಏಳು ಕರ್ಮಗಳು ಪ್ರತಿ ಸಮಯದಲ್ಲಿ ಬಂಧವಾಗುತ್ತಿರುವುದೆಂದಿರುವಾಗ ಪ್ರದೋಷಾದಿ ವಿಶೇಷ ಕರ್ಮಗಳ ಆಸ್ರವವು ಹೇಗಾಗುವದು?

೪ ಸಾಂಪರಾಯಿಕ ಮತ್ತು ಈರ್ಯಾಪಥ ಆಸ್ರವಗಳನ್ನು ಉದಾಹರಣೆ ಸಹಿತವಾಗಿ ತಿಳಿಸಿರಿ.

೫ ಸಮ್ಯಗ್‌ದರ್ಶನವು ಮೋಕ್ಷದ ಮಾರ್ಗವೆಂದಿರುವಾಗ ಅದರಿಂದ ದೇವಾಯುಷ್ಯದ ಆಸ್ರವ ಕಾರಣವೆಂದೇಕೆ ಹೇಳಲಾಯಿತು?

೬ ಯಾರಾದರೂ ವಿನಯಸಂಪನ್ನತೆ ಮೊದಲಾದ ೧೫ ಭಾವನೆಗಳನ್ನು ಅನುಭವಿಸಿ ತೀರ್ಥಕರ ಪ್ರಕೃತಿಯ ಆಸ್ರವವನ್ನು ಹೊಂದಲು ಶಕ್ಯರೋ ಅಶಕ್ಯರೋ? ಯದಿ ಅಶಕ್ಯರಾದುದಾದರೆ ಹೇಗೆ?

೭ ಸಂಸಾರದಲ್ಲಿ ಯಾವುದಾದರೊಂದು ಕರ್ಮಾಸ್ರವವ ಜೀವವಿದೆಯೋ?

೮ ಈ ಕೆಳಗಿನ ಶಬ್ದಗಳ ಲಕ್ಷಣ ಬರಯಿರಿ—

ನಿಹ್ನವ, ಸರಾಗಸಂಯಮ, ಬಾಲತಪ, ಯೋಗವಕ್ರತಾ, ಅನುತ್ಸುಕ ಸಾಧುಸಮಾಧಿ, ಅವರ್ಣವಾದ. ಸಮಾರಂಭ ಮತ್ತು ಈರ್ಯಾ ಪಥಾಸ್ರವ,



# ಏಳನೇ ಅಧ್ಯಾಯ

## (ಸಪ್ತಮ ಅಧ್ಯಾಯ)

### ಶುಭಾಸ್ರವದ ವರ್ಣನೆ

### ವ್ರತದ ಲಕ್ಷಣ

**ಹಿಂಸಾಽನೃತಸ್ತೇಯಾಬ್ರಹ್ಮಪರಿಗ್ರಹೇಭ್ಯೋ ವಿರತಿರ್ವ್ರತಂ ||೧||**

ಅರ್ಥ—ಹಿಂಸೆ, ಅಸತ್ಯ, ಕಳ್ಳತನ, ಕುಶೀಲ ಮತ್ತು ಪರಿಗ್ರಹ ಈ ಐದು ಪಾಪಗಳಿಂದ ವಿರಕ್ತನಾಗಿರುವುದಕ್ಕೆ ವ್ರತ ಎಂದು ಹೆಸರು. ಈ ಐದು ಪಾಪಗಳು ಸಂಸಾರದಲ್ಲಿ ಅಶುಭಕರ್ಮಗಳ ಆಸ್ರವಕ್ಕೆ ಕಾರಣಗಳಾಗಿರುವವು. ಆದುದರಿಂದ ಅವುಗಳನ್ನು ಪರಿತ್ಯಜಿಸಬೇಕು.

### ವ್ರತಗಳ ಭೇದ

**ದೇಶಸರ್ವತೋಽಣುಮಹತೀ ||೨||**

ಅರ್ಥ—ವ್ರತವು ಎರಡು ಪ್ರಕಾರವಾಗಿದೆ. ೧ ದೇಶವ್ರತ ೨ ಸರ್ವ ವ್ರತ ಅಂದರೆ ಅಣುವ್ರತ ಮತ್ತು ಮಹಾವ್ರತ. ಹಿಂಸೆ ಮೊದಲಾದ ಪಾಪಗಳನ್ನು ಏಕದೇಶದಿಂದ ತ್ಯಜಿಸುವುದಕ್ಕೆ ಅಣುವ್ರತವೆಂದೂ ಸರ್ವ ವಿಧದಿಂದ ತ್ಯಜಿಸುವುದಕ್ಕೆ ಮಹಾವ್ರತವೆಂದೂ ಹೇಳುತ್ತಾರೆ.

### ವ್ರತಗಳಲ್ಲಿ ಸ್ಥಿರವಾಗಿರುವುದಕ್ಕೆ ಐದೈದು ಭಾವನೆಗಳು

**ತತ್ಸ್ಥೈರ್ಯಾರ್ಥಂ ಭಾವನಾಃ ಪಂಚ ಪಂಚ ||೩||**

ಅರ್ಥ—ಆ ವ್ರತಗಳ ದೃಢತೆಗೋಸ್ಕರವಾಗಿ ಪ್ರತ್ಯೇಕ ವ್ರತಗಳಿಗೆ ಐದೈದು ಭಾವನೆಗಳು ಹೇಳಲ್ಪಟ್ಟವೆ. ಮೇಲಿಂದ ಮೇಲೆ ಆ ವಿಷಯವನ್ನು ವಿಚಾರ ಮಾಡುವುದಕ್ಕೆ ಭಾವನೆ ಎಂದು ಹೇಳುತ್ತಾರೆ.

## ಅಹಿಂಸಾ ವ್ರತದ ಭಾವನೆಗಳು

**ವಾಙ್ಮನೋಗುಪ್ತೀರ್ಯಾದಾನನಿಕ್ಷೇಪಣಸಮಿತ್ಯಾಲೋಕಿತಪಾನಭೋಜನಾನಿ ಪಂಚ ||೪||**

ಅರ್ಥ—ವಾಗ್ಗುಪ್ತಿ:- ವಚನವನ್ನು ತಡೆಯುವುದು, ಮನೋಗುಪ್ತಿ:- ಮನಸ್ಸಿನ ಪ್ರವೃತ್ತಿಯನ್ನು ನಿಲ್ಲಿಸುವುದು, ಈರ್ಯಾಸಮಿತಿ. ನಾಲ್ಕು ಹಸ್ತ ಪ್ರಮಾಣ ಭೂಮಿಯನ್ನು ನೋಡಿಕೊಂಡು ಯಾವ ಪ್ರಾಣಿಗಳಿಗೂ ಬಾಧೆ ಯಾಗದಂತೆ ನಡೆಯುವುದು, ಆದಾನನಿಕ್ಷೇಪಣಸಮಿತಿ:- ಚೆನ್ನಾಗಿ ನೋಡಿ ಜೀವರಹಿತವಾದ ಸ್ಥಾನದಲ್ಲಿ ಯಾವುದಾದರೂ ಪದಾರ್ಥವನ್ನು ತೆಗೆಯು ವುದು, ಇಡುವುದು, ಆಲೋಕಿತಪಾನಭೋಜನ—ಸೂರ್ಯಪ್ರಕಾಶವಿರುವಾಗ ನೋಡಿ ಶುದ್ಧವಾದ ಆಹಾರಜಲವನ್ನು ಸ್ವೀಕರಿಸುವುದು.

ಇವು ಐದು ಅಹಿಂಸಾವ್ರತದ ಭಾವನೆಗಳು. ಈ ಭಾವನೆಗಳಿಂದ ಅಹಿಂ ಸಾವ್ರತವು ದೃಢವಾಗಿ ನೆಲೆಗೊಳ್ಳುವುದು.

## ಸತ್ಯವ್ರತದ ಭಾವನೆಗಳು

**ಕ್ರೋಧಲೋಭಭೀರುತ್ವಹಾಸ್ಯಪ್ರತ್ಯಾಖ್ಯಾನಾನ್ಯನುವೀಚಿಭಾಷಣಂ ಚ ಪಂಚ ||೫||**

ಅರ್ಥ—ಕ್ರೋಧಪ್ರತ್ಯಾಖ್ಯಾನ—ಕೋಪವನ್ನು ತ್ಯಜಿಸುವುದು, ಲೋಭ ಪ್ರತ್ಯಾಖ್ಯಾನ—ಲೋಭವನ್ನು ಬಿಡುವುದು, ಭೀರುತ್ವಪ್ರತ್ಯಾಖ್ಯಾನ—ಭಯ ವನ್ನು ಬಿಡುವುದು. ಹಾಸ್ಯಪ್ರತ್ಯಾಖ್ಯಾನ-ಹಾಸ್ಯವನ್ನು ಪರಿತ್ಯಜಿಸುವುದು ಮತ್ತು ಅನುವೀಚಿಭಾಷಣ—ಆಗಮದ ಆಜ್ಞೆಗನುಸಾರವಾಗಿ ನಿರ್ದೋಷವಾದ ವಚನಗಳನ್ನು ಆಡುವುದು. ಇವೂ ಐದು ಸತ್ಯವ್ರತದ ಭಾವನೆಗಳು. ಕ್ರೋಧ, ಲೋಭ, ಭಯ, ಹಾಸ್ಯ ಮೊದಲಾದ ಕಾರಣಗಳಿಂದ ಮನುಷ್ಯನಿಗೆ ಅಸತ್ಯ ವನ್ನು ಮಾತನಾಡಬೇಕಾಗುತ್ತದೆ. ಸತ್ಯವಂತನು ಇವುಗಳನ್ನು ತ್ಯಜಿಸಬೇಕು

## ಅಚೌರ್ಯ ವ್ರತದ ಭಾವನೆಗಳು

**ಶೂನ್ಯಾಗಾರವಿಮೋಚಿತಾವಾಸಪರೋಪರೋಧಾಕರಣಭೈಕ್ಷ್ಯಶುದ್ಧಿಸಧರ್ಮಾವಿಸಂವಾದಾಃ ಪಂಚ ||೬||**

ಅರ್ಥ —ಶೂನ್ಯಾಗಾರವಾಸ–ಪರ್ವತಗಳ ಗುಹೆ, ವೃಕ್ಷಗಳ ಪೊಟರೆ ಮೊದಲಾದ ಶೂನ್ಯ ಅಂದರೆ ನಿರ್ಜನ ಸ್ಥಾನದಲ್ಲಿರುವುದು, ವಿಮೋಚಿತಾವಾಸ-ರಾಜಾ, ಪಂಚ ಮೊದಲಾದವರಿಂದ ಬಿಡಿಸಲ್ಪಟ್ಟ ಮನೆ, ಧರ್ಮಶಾಲೆ, ಮೊದಲಾದ ಸ್ಥಾನಗಳಲ್ಲಿರುವುದು. ಪರೋಪರೋಧಾಕರಣ-ತನ್ನ ಸ್ಥಾನದಲ್ಲಿ ಬೇರೆ ಯಾವರು ಬಂದು ನಿಂತರೆ ಅವರಿಗೆ ಅಡ್ಡಿ ಮಾಡದಿರುವದು. ಭೈಕ್ಷ್ಯಶುದ್ಧಿ, ಆಚಾರ ಶಾಸ್ತ್ರದಲ್ಲಿ ಹೇಳಿದ ಹಾಗೆ ಶುದ್ಧಆಹಾರವನ್ನು ಸ್ವೀಕರಿಸುವುದು ಸಧರ್ಮಾವಿಸಂವಾದ- ತನ್ನ ಧರ್ಮಬಂಧುಗಳೊಡನೆ ವಾದವನ್ನು ಮಾಡದಿರುವುದು. ಇವು ಐದುಅಚೌರ್ಯ ವ್ರತದ ಭಾವನೆಗಳು.

## ಬ್ರಹ್ಮಚರ್ಯ ವ್ರತದ ಭಾವನೆಗಳು

**ಸ್ತ್ರೀರಾಗಕಥಾಶ್ರವಣತನ್ಮನೋಹರಾಂಗನಿರೀಕ್ಷಣಪೂರ್ವಾರತಾನುಸ್ಮರಣವೃಷ್ಯೇಷ್ಟರಸಸ್ವಶರೀರಸಂಸ್ಕಾರತ್ಯಾಗಾಃ ಪಂಚ ||೭||**

ಅರ್ಥ—ಸ್ತ್ರೀರಾಗಕಥಾಶ್ರವಣತ್ಯಾಗ—ಸ್ತ್ರೀಯರಲ್ಲಿ ಅನುರಾಗವನ್ನು ಹುಟ್ಟಿಸುವ ಕಥೆಗಳನ್ನು ಕೇಳದಿರುವುದು. ತನ್ಮನೋಹರಾಂಗನಿರೀಕ್ಷಣ ತ್ಯಾಗ ಸ್ತ್ರೀಯರ ಮನೋಹರ ಅಂಗಗಳನ್ನು ನೋಡುವುದನ್ನು ಬಿಡುವುದು. ಪೂರ್ವರತಾನುಸ್ಮರಣತ್ಯಾಗ - ಮೊದಲು ಭೋಗಿಸಿದಂಥ ವಿಷಯಗಳನ್ನು ಸ್ಮರಣೆ ಮಾಡದಿರುವುದು. ವೃಷ್ಯೇಷ್ಟರಸತ್ಯಾಗ– ಇಂದ್ರಿಯಗಳನ್ನು ಮತ್ತು ಕಾಮವಾಸನೆಯನ್ನು ಪೋಷಿಸುವಂಥಾ ಗರಿಷ್ಠರಸಗಳನ್ನು ಬಿಡುವುದು. ಸ್ವಶರೀರಸಂಸ್ಕಾರತ್ಯಾಗ–ತನ್ನ ಶರೀರದ ಸಂಸ್ಕಾರಗಳನ್ನು ಮಾಡದಿರುವುದು. ಇವು ಐದು ಬ್ರಹ್ಮಚರ್ಯವ್ರತದ ಭಾವನೆಗಳು.

ಪರಿಗ್ರಹತ್ಯಾಗ ವ್ರತದ ಭಾವನೆಗಳು

## ಮನೋಜ್ಞಾಮನೋಜ್ಞೇಂದ್ರಿಯವಿಷಯರಾಗ-ದ್ವೇಷವರ್ಜನಾನಿ ಪಂಚ ||೮||

ಅರ್ಥ—ಸ್ಪರ್ಶನ, ರಸನ, ಘ್ರಾಣ, ಚಕ್ಷು ಮತ್ತು ಶ್ರೋತ್ರಗಳೆಂಬ ಐದು ಇಂದ್ರಿಯಗಳಿಗೆ ಪ್ರಿಯವಾದ ವಸ್ತುಗಳಲ್ಲಿ ಅನುರಾಗವನ್ನೂ ಮತ್ತು ಈ ಐದು ಇಂದ್ರಿಯಗಳಿಗೆ ಅಪ್ರಿಯವಾದ ವಸ್ತುಗಳಲ್ಲಿ ದ್ವೇಷವನ್ನೂ ಮಾಡದಿರುವುದು ಪರಿಗ್ರಹವ್ರತದ ಐದು ಭಾವನೆಗಳು.

ಇನ್ನೂ ಮಾಡಬೇಕಾದ ವಿಚಾರ

## ಹಿಂಸಾದಿಷ್ವಿಹಾಮುತ್ರಾಪಾಯಾವದ್ಯದರ್ಶನಂ ||೯||

ಅರ್ಥ—ಹಿಂಸಾದಿ ಪಂಚ ಪಾಪಗಳಿಂದ ಇಹಲೋಕದಲ್ಲಿ ಮತ್ತು ಪರಲೋಕದಲ್ಲಿ ಅಪಾಯ ಅಂದರೆ ದುಃಖ ಪರಂಪರೆಗಳೂ ಮತ್ತು ಪಾರಮಾರ್ಥಿಕ, ಪ್ರಯೋಜನಗಳ ವಿನಾಶವೂ ಆಗುವುದಲ್ಲದೆ, ಲೋಕದಲ್ಲಿ ನಿಂದೆಯೂ ಆಗುತ್ತದೆಂಬುವನ್ನು ವಿಚಾರ ಮಾಡಬೇಕು. ಹಿಂಸೆ ಮೊದಲಾದ ಪಾಪಗಳಿಂದ ಇಹಲೋಕದಲ್ಲಿ ಅನೇಕ ಆಪತ್ತಿ ಸಂಕಟಗಳು ಬಂದೊದಗುತ್ತವೆ, ಮತ್ತು ಲೋಕದಲ್ಲಿ ನಿಂದೆಯೂ ಆಗುತ್ತದೆ. ಪರಲೋಕದಲ್ಲಿಯೂ ನರಕಾದಿ ದುರ್ಗತಿಗಳನ್ನು ಹೊಂದಿ ದುಃಖವನ್ನು ಪಡೆಯಬೇಕಾಗುತ್ತದೆ.

## ದುಃಖಮೇವ ವಾ ||೧೦||

ಅರ್ಥ—ಅಥವಾ ಈ ಹಿಂಸೆ ಮೊದಲಾದ ಪಂಚ ಪಾಪಗಳು ದುಃಖ ಸ್ವರೂಪವಾಗಿಯೇ ಇವೆ ಎಂದು ತಿಳಿಯಬೇಕು. ಈ ಹಿಂಸಾದಿ ಪಾಪಗಳಿಂದ ದುಃಖದ ಉತ್ಪತ್ತಿಯಾಗುತ್ತದೆ. ಆದುದರಿಂದ ಕಾರಣದಲ್ಲಿ ಕಾರ್ಯದ ಉಪಚಾರ ಮಾಡಿ ದುಃಖ ಸ್ವರೂಪವೇ ಹಿಂಸಾದಿಗಳೆಂದು ಹೇಳಿದ್ದಾರೆ.

ಸತತ ಚಿಂತಿಸಲ್ಪಡುವ ಭಾವನೆಗಳು.

## ಮೈತ್ರೀಪ್ರಮೋದಕಾರುಣ್ಯಮಾಧ್ಯಸ್ಥಾನಿ ಚ ಸತ್ವ ಗುಣಾಧಿಕಕ್ಲಿಶ್ಯಮಾನಾವಿನಯೇಷು ||೧೧||

ಅರ್ಥ—ಸತ್ವಗುಣಾಧಿಕಕ್ಲಿಶ್ಯಮಾನಾವಿನಯೇಷು-ಸತ್ವ, ಗುಣಾಧಿಕ, ಕ್ಲಿಶ್ಯಮಾನ, ಅವಿನಯ ಈ ಪ್ರಾಣಿಗಳಲ್ಲಿ ಕ್ರಮದಿಂದ ಮೈತ್ರೀ, ಪ್ರಮೋದ ಕಾರುಣ್ಯ ಮತ್ತು ಮಾಧ್ಯಸ್ಥ ಭಾವನೆಯನ್ನು, ಇಡಬೇಕು. ಎಲ್ಲಾ ಪ್ರಾಣಿಗಳಲ್ಲಿ ಮಿತ್ರತ್ವ ಭಾವನೆಯನ್ನೂ, ಗುಣದಿಂದ ಶ್ರೇಷ್ಠರಾದವರಲ್ಲಿ ಪ್ರಮೋದ ಅಂದರೆ ಹರ್ಷವನ್ನೂ, ದುಃಖಿತ ಪ್ರಾಣಿಗಳಲ್ಲಿ ಕರುಣೆಯನ್ನೂ, ಮತ್ತು ಅವಿನೀತರು ಅಂದರೆ ವಿಪರೀತ ವೃತ್ತಿಯನ್ನು ಧಾರಣೆ ಮಾಡುವ ಅಹಂಕಾರಿಗಳಲ್ಲಿ ಮಾಧ್ಯಸ್ಥ ಭಾವನೆಯನ್ನೂ ಇಟ್ಟುಕೊಳ್ಳಬೇಕು.

ಸಂಸಾರ ಮತ್ತು ಶರೀರದ ವಿಚಾರ.

## ಜಗತ್ಕಾಯಸ್ವಭಾವೌ ವಾ ಸಂವೇಗವೈರಾಗ್ಯಾರ್ಥಂ

ಅರ್ಥ—ಸಂವೇಗ ಅಂದರೆ ಸಂಸಾರದಿಂದ ಜಿಗುಪ್ಸೆಯನ್ನು ಪಡೆಯುವುದಕ್ಕೆ ಮತ್ತು ವೈರಾಗ್ಯ ಅಂದರೆ ವಿರಕ್ತಿಯನ್ನು ಹೊಂದುವುದಕ್ಕೆ ಕ್ರಮದಿಂದ ಜಗತ್ತಿನ ಸ್ವಭಾವವನ್ನು ಶರೀರದ ಸ್ವಭಾವವನ್ನು ವಿಚಾರಿಸಬೇಕು. ಜಗತ್ತಿನ ದುಃಖ ಪರಂಪರೆಗಳನ್ನು ವಿಚಾರ ಮಾಡುವುದರಿಂದ ಭೀತಿ ಉಂಟಾಗುವುದು. ಮತ್ತು ಕಾಯದ ಅಪವಿತ್ರಾದಿ ದೋಷಗಳನ್ನು ವಿಚಾರ ಮಾಡುವುದರಿಂದ ವೈರಾಗ್ಯವೂ ಉತ್ಪನ್ನವಾಗುತ್ತದೆ.

ಹಿಂಸೆಯ ಲಕ್ಷಣ



## ಪ್ರಮತ್ತಯೋಗಾತ್ ಪ್ರಾಣವ್ಯಪರೋಪಣಂ ಹಿಂಸಾ

ಅರ್ಥ— + ಪ್ರಮಾದದ ದೆಸೆಯಿಂದ ಪ್ರಾಣಿಗಳ * ದ್ರವ್ಯ ಅಥವಾ ○ಭಾವ ಪ್ರಾಣಿಗಳ ಅಪಹರಣವನ್ನು ಮಾಡುವುದಕ್ಕೆ ಹಿಂಸೆ ಎಂದು ಹೆಸರು.

ಟಿಪ್ಪಣಿ— ೧ ಯಾವನಾದರೊಬ್ಬ ವ್ರತಿಯು ಅಥವಾ ಸಾಧುವು ಈರ್ಯಾಸಮಿತಿಯಿಂದ ನಡೆಯುತ್ತಿರುವಾಗ ಅವನ ಕಾಲಡಿಯಲ್ಲಿ ಸಿಕ್ಕಿ ಯಾವುದಾದರೂ ಕ್ಷುದ್ರ ಜೀವವು ಬಂದು ಬಿದ್ದರೆ ಆ ಹಿಂಸೆಯ ಪಾಪಕ್ಕೆ ಅವನು ಭಾಗಿಯಲ್ಲ. ಏಕೆಂದರೆ ಅವನು ಗಮನ ಕಾರ್ಯದಲ್ಲಿ ಪ್ರಮಾದ ವಿಲ್ಲದವನಾಗಿದ್ದಾನೆ.

೨ ಒಬ್ಬನು ಇನ್ನೊಂದು ಪ್ರಾಣಿಯನ್ನು ಕೊಲ್ಲಲೆತ್ನಿಸಿ ಕೊಲ್ಲಲಾಗ ದಿದ್ದರೂ ಅವನಿಗೆ ಹಿಂಸೆಯ ಪಾತಕವು ಬರುವುದು. ಯಾಕೆಂದರೆ ಅವನಲ್ಲಿ ಪ್ರಮಾದವಿದೆ. ಮತ್ತು ತನ್ನ ಭಾವ ಪ್ರಾಣಗಳ ಹಿಂಸೆಯನ್ನು ಮಾಡು ತ್ತಿದ್ದಾನೆ.

### ಅಸತ್ಯದ ಲಕ್ಷಣ

## ಅಸದಭಿದಾನಮನೃತಂ ॥೧೪॥

ಅರ್ಥ—ಪ್ರಮಾದದ ಯೋಗದಿಂದ ಪ್ರಾಣಿಗಳಿಗೆ ದುಃಖವನ್ನು ಕೊಡುವಂಥಾ ಅಪ್ರಶಸ್ತ ಮತ್ತು ಸುಳ್ಳು ಮಾತುಗಳನ್ನು ಮಾತಾಡು ವುದಕ್ಕೆ ಅಸತ್ಯವೆಂದು ಹೆಸರು.

---

+ ಐದು ಇಂದ್ರಿಯ, ನಾಲ್ಕು ಕಷಾಯ, ಸ್ತ್ರೀ, ರಾಜ, ರಾಷ್ಟ್ರ ಮತ್ತು ಭೋಜನಗಳೆಂಬ ನಾಲ್ಕು ವಿಕಥೆಗಳು, ರಾಗ, ದ್ವೇಷ, ಮತ್ತು ನಿದ್ರೆ ಈ ೧೫ ಪ್ರಮಾದಗಳು,

* ಐದು ಇಂದ್ರಿಯ ಮನ, ವಚನ, ಕಾಯಗಳೆಂಬ ಮೂರು ಬಲ ಆಯು ಮತ್ತು, ಶ್ವಾಸೋಚ್ಛ್ವಾಸ, ಇವು ೧೦ ದ್ರವ್ಯಪ್ರಾಣಗಳು.

○ಜ್ಞಾನ ಮತ್ತು ದರ್ಶನಕ್ಕೆ ಭಾವಪ್ರಾಣಗಳೆಂದು ಹೆಸರು.

ಸ್ತೇಯದ ಲಕ್ಷಣ

## ಅದತ್ತಾದಾನಂ ಸ್ತೇಯಂ ॥೧೫॥

ಪ್ರಮಾದದ ಯೋಗದಿಂದ ಬೇರೆಯವರು *ಕೊಡದ ಬೇರೆಯವರ ವಸ್ತುಗಳನ್ನು ತೆಗೆದುಕೊಳ್ಳುವುದಕ್ಕೆ ಸ್ತೇಯ (ಕಳ್ಳತನ) ವೆಂದು ಹೆಸರು.

ಕುಶೀಲದ ಲಕ್ಷಣ

## ಮೈಥುನಮಬ್ರಹ್ಮ ॥೧೬॥

ಅರ್ಥ—ಮೈಥುನ ಸೇವನೆ (ಅಂದರೆ ಚಾರಿತ್ರ ಮೋಹನೀಯ ಕರ್ಮದ ಉದಯದಿಂದ ರಾಗಪರಿಣಾಮಕ್ಕೆ ವಶೀಭೂತರಾಗಿ ಸ್ತ್ರೀ ಪುರುಷರಿಗೆ ಪರಸ್ಪರ ಸ್ಪರ್ಶನಾದಿಗಳನ್ನು ಮಾಡುವ ಇಚ್ಛೆಯಾಗುವಿಕೆ) ಗೆ ಅಬ್ರಹ್ಮ ಅಂದರೆ ಕುಶೀಲ ಎಂದು ಹೇಳುತ್ತಾರೆ.

ಪರಿಗ್ರಹದ ಲಕ್ಷಣ

## ಮೂರ್ಛಾ ಪರಿಗ್ರಹಃ ॥೧೭॥

ಅರ್ಥ—ಮೂರ್ಛಾ ಅಂದರೆ ಮಮತ್ವಭಾವನೆಗೆ ಪರಿಗ್ರಹವೆಂದು ಹೆಸರು. ಧನ ಧಾನ್ಯ, ಕನಕ ಕಾಂತಾ, ಮನೆ ಮೊದಲಾದ ಬಾಹ್ಯ ಪದಾರ್ಥಗಳಲ್ಲಿ ಮತ್ತು ಕ್ರೋಧಾದಿ ಕಷಾಯರೂಪವಾದ ಅಂತರಂಗ ವಿಕಾರಗಳಲ್ಲಿ ಇವು ನನ್ನವುಗಳೆಂಬ ಮಮಕಾರ ಬುದ್ಧಿಯನ್ನು ಮಾಡುವ ದಕ್ಕೆ ಪರಿಗ್ರಹವೆಂದು ಹೇಳಲಾಗಿದೆ.

ವ್ರತಿಯ ವಿಶೇಷತೆ

## ನಿಃಶಲ್ಯೋ ವ್ರತೀ ॥೧೮॥

---

*ದಾರಿಯಲ್ಲಿ ಬಿದ್ದ, ಬೇರೆಯವರು ಮರೆತು ಬಿಟ್ಟ ಪದಾರ್ಥ ಗಳನ್ನು ತೆಗೆದುಕೊಳ್ಳುವುದು ಕಳ್ಳತನವಾಗುವುದು,

ಅರ್ಥ—ಶಲ್ಯರಹಿತನಾದವನೇ ವ್ರತಿಯು, ಈ ಆತ್ಮನಿಗೆ ಮುಳ್ಳಿನ ಹಾಗೆ ದುಃಖವನ್ನು ಕೊಡುವ ಭಾವಗಳಿಗೆ ಶಲ್ಯವೆಂದು ಹೆಸರು. ಶಲ್ಯ ಗಳು ಮೂರು ವಿಧವಾಗಿವೆ.

೧ ಮಾಯಾ ಶಲ್ಯ—ಕಪಟಾಚರಣೆಯನ್ನು ಮಾಡುವುದು.

೨ ಮಿಥ್ಯಾ ಶಲ್ಯ—ತತ್ವಗಳಲ್ಲಿ ನಂಬಿಕೆಯನ್ನಿಡದಿರುವುದು.

೩ ನಿದಾನ ಶಲ್ಯ—ಮುಂದಿನ ವಿಷಯಭೋಗಗಳ ಅಪೇಕ್ಷೆಯನ್ನು ಮಾಡುವುದು.

ಈ ಪ್ರಕಾರವಾಗಿ ಎಷ್ಟರವರೆಗೆ ಈ ಮೂರು ಶಲ್ಯಗಳಿರುತ್ತವೆಯೋ ಅಷ್ಟರವರೆಗೆ ಈ ಜೀವನು ವ್ರತಿಯಾಗುವುದಿಲ್ಲ.

ವ್ರತಿಯ ಭೇದ

## ಅಗಾರ್ಯನಗಾರಶ್ಚ ||೧೯||

ಅರ್ಥ—ವ್ರತಿಗಳಲ್ಲಿ ಅಗಾರೀ ಅಂದರೆ ಗೃಹಸ್ಥನೆಂದೂ ಅನಗಾರಿ ಅಂದರೆ ಗೃಹತ್ಯಾಗಿಯಾದ ಮುನಿ ಎಂದೂ ಎರಡು ಭೇದಗಳಿವೆ.

ಅಗಾರಿಯ ಲಕ್ಷಣ

## ಅಣುವ್ರತೋಽಗಾರೀ ||೨೦||

ಅರ್ಥ—ಏಕದೇಶ ವ್ರತವನ್ನು ಪಾಲಿಸುವಥಂಹ ಜೀವನಿಗೆ ಅಗಾರಿ ಎಂದು ಹೇಳುತ್ತಾರೆ. § ಏಕದೇಶವ್ರತಕ್ಕೆ ಅಣುವ್ರತ ಎಂದು ಹೇಳುತ್ತಾರೆ. ಆ ಅಣುವ್ರತವು ಮೊದಲು ಹೇಳಿದ ಐದು ಪಾಪಗಳನ್ನು ಬಿಡುವುದರಿಂದ ಐದು ವಿಧವಾಗಿ ಹೇಳಲ್ಪಟ್ಟಿದೆ.

೧ ಅಹಿಂಸಾಣುವ್ರತ ೨ ಸತ್ಯಾಣುವ್ರತ ೩ ಅಚೌರ್ಯಾಣುವ್ರತ ೪ ಬ್ರಹ್ಮಚರ್ಯಾಣುವ್ರತ ೫ ಪರಿಗ್ರಹಪರಿಮಾಣವ್ರತ.

---

§ ಮಹಾವ್ರತವನ್ನು ಪಾಲನೆ ಮಾಡುವಂಥಹ ಮುನಿಗಳಿಗೆ ಅನಗಾರಿ ಎಂದು ಹೇಳುತ್ತಾರೆ. ಈ ಅಧ್ಯಾಯದಲ್ಲಿ ಅಣುವ್ರತ ಧಾರಿಗಳ ಚಾರಿತ್ರದ ವರ್ಣನೆಯಿದೆ.

ಈ ಐದು ಅಣುವ್ರತಗಳ ಸಂಕ್ಷೇಪವಾದ ಅರ್ಥವು ಹೀಗಿದೆ.

ಅಹಿಂಸಾಣುವ್ರತ—ಸಂಕಲ್ಪಪೂರ್ವಕವಾಗಿ ತ್ರಸ ಜೀವಗಳ ಹಿಂಸೆಯನ್ನು ಮಾಡದಿರುವುದು ಅಹಿಂಸಾಣುವ್ರತವು.

ಸತ್ಯಾಣುವ್ರತ—ರಾಗ, ದ್ವೇಷ, ಭಯ ಮೊದಲಾದ ಕಾರಣಗಳಿಂದ ಸ್ಥೂಲ ಅಸತ್ಯವನ್ನು ಮಾತಾಡದಿರುವುದು ಸತ್ಯಾಣುವ್ರತವು.

ಅಚೌರ್ಯಾಣುವ್ರತ— ಸ್ಥೂಲ ಕಳ್ಳತನದ ತ್ಯಾಗವನ್ನು ಮಾಡುವುದಕ್ಕೆ ಅಚೌರ್ಯಾಣುವ್ರತವೆಂದು ಹೆಸರು.

ಬ್ರಹ್ಮಚರ್ಯಾಣುವ್ರತ— ಪರಸ್ತ್ರೀಸೇವನೆಯನ್ನು ತ್ಯಜಿಸಿ ತನ್ನ ಸ್ತ್ರೀಯಲ್ಲಿಯೇ ಸಂತುಷ್ಟನಾಗಿರುವುದಕ್ಕೆ ಬ್ರಹ್ಮಚರ್ಯಾಣುವ್ರತವೆಂದು ಹೆಸರು. ಇದಕ್ಕೆ ಸ್ವದಾರಸಂತೋಷವ್ರತವೆಂದೂ ಹೇಳುತ್ತಾರೆ.

ಪರಿಗ್ರಹಪರಿಮಾಣಾಣುವ್ರತ— ತನಗೆ ಅವಶ್ಯಕವಿಲ್ಲದ ಎಲ್ಲಾ ಪರಿಗ್ರಹಗಳನ್ನು ಬಿಟ್ಟು ಬೇಕಾದ ಪರಿಗ್ರಹಗಳಲ್ಲಿಯೂ ಕೂಡ ನಿಯಮವನ್ನು ಮಾಡಿಕೊಳ್ಳುವುದಕ್ಕೆ ಪರಿಗ್ರಹಪರಿಮಾಣವ್ರತವೆಂದು ಹೆಸರು. ಈ ವ್ರತಗಳನ್ನು ಪಾಲಿಸುವವನು ಸ್ಥೂಲ ಪಾಪಗಳನ್ನು ತ್ಯಜಿಸುವನು ಆದುದರಿಂದ ಇವುಗಳಿಗೆ ಅಣುವ್ರತಗಳೆಂದು ಹೇಳಿದ್ದಾರೆ.

## ಅಣುವ್ರತಗಳ ಸಹಾಯಕ ಶೀಲವ್ರತಗಳು.

**ದಿಗ್ದೇಶಾನರ್ಥದಂಡವಿರತಿಸಾಮಾಯಿಕಪ್ರೋಷಧೋಪವಾಸೋಪಭೋಗಪರಿಮಾಣಾತಿಥಿಸಂವಿಭಾಗವ್ರತಸಂಪನ್ನಶ್ಚ ॥೨೧॥**

ಅರ್ಥ—ಆ ವ್ರತಿಯು ದಿಗ್ವ್ರತ, ದೇಶವ್ರತ. ಅನರ್ಥದಂಡವಿರತಿವ್ರತ, ಸಾಮಾಯಿಕ, ಪ್ರೋಷಧೋಪವಾಸ, ಉಪಭೋಗಪರಿಭೋಗಪರಿಮಾಣ, ಅತಿಥಿಸಂವಿಭಾಗಗಳೆಂಬ ಏಳುಶೀಲವ್ರತಗಳಿಂದಲೂ ಯುಕ್ತನಾಗಿ

ರುತ್ತಾನೆ. ಅಂದರೆ ಐದು ಅಣುವ್ರತಗಳು ಮೂರು ಗುಣವ್ರತಗಳು, ನಾಲ್ಕು ಶಿಕ್ಷಾವ್ರತಗಳಿಂದ ಆ ವ್ರತಿಯು ಯುಕ್ತನಾಗುತ್ತಾನೆ.

## ಮೂರು ಗುಣವ್ರತಗಳು.

ದಿಗ್ವ್ರತ— ಸೂಕ್ಷ್ಮಪಾಪಗಳನ್ನು ತ್ಯಾಗಮಾಡುವ ಅಭ್ಯಾಸಕ್ಕೋಸ್ಕರ ಸಾಯುವವರೆಗೆ ಹತ್ತು ದಿಕ್ಕುಗಳಲ್ಲಿಯೂ ಹೋಗುವ ಮಿತಿಯನ್ನು ಮಾಡಿಕೊಳ್ಳುವುದು ಮತ್ತು ಅದರ ಹೊರಗೆ ಹೋಗದಿರುವುದು ದಿಗ್ವ್ರತವು.

ದೇಶವ್ರತ— ಮರಣದವರೆಗೆ ಮಾಡಿದ ದಿಗ್ವ್ರತದ ಎಲ್ಲೆಯ ಒಳಗೆ ಇನ್ನೂ ಸಂಕೋಚ ಮಾಡಿ ದಿನ, ಗಳಿಗೆ, ತಿಂಗಳು ಆದಿಯ ಮಿತಿಯಿಂದ ಮನೆ, ಗಲ್ಲಿ ಇತ್ಯಾಗಳ ರೂಪದಿಂದ ನಿಯಮವನ್ನು ಮಾಡುವುದು ದೇಶವ್ರತವು.

ಅನರ್ಥದಂಡವ್ರತ— ಪ್ರಯೋಜನ ರಹಿತವಾದ ಪಾಪವರ್ಧಕ ಕ್ರಿಯೆಗಳನ್ನು ಬಿಡುವುದಕ್ಕೆ ಅನರ್ಥದಂಡವ್ರತವೆಂದು ಹೆಸರು. ಇದರಲ್ಲಿ ೫ ಭೇದಗಳಿವೆ. ೧ ಪಾಪೋಪದೇಶ-ಹಿಂಸಾ ಆರಂಭಾದಿ ಪಾಪಗಳ ಉಪದೇಶವನ್ನು ಕೊಡುವುದು. ೨ ಹಿಂಸಾದಾನ-ಹಿಂಸೆಗೆ ಕಾರಣವಾದ ಅಸ್ತ್ರಶಸ್ತ್ರಾದಿಗಳನ್ನು ಕೊಡುವುದು. ೩ ಅಪಧ್ಯಾನ– ಬೇರೆಯವರಿಗೆ ಕೇಡನ್ನು ಬಯಸುವುದು. ೪ ದುಃಶ್ರುತಿ-ರಾಗದ್ವೇಶಗಳನ್ನು ಹೆಚ್ಚಿಸುವ ಶಾಸ್ತ್ರಗಳನ್ನು ಕೇಳುವುದು ಮತ್ತು ಪ್ರಮಾದಚರ್ಯೆ-ವ್ಯರ್ಥವಾಗಿ ತಿರುಗಾಡುತ್ತಿರುವುದು. ಹೀಗೆ ಈ ಮೂರು ಗುಣಗಳು. ಅಣುವ್ರತಗಳಿಗೆ ಉಪಕಾರವನ್ನು ಮಾಡುವುದರಿಂದ ಇವುಗಳಿಗೆ ಗುಣವ್ರತಗಳೆಂದು ಹೆಸರು.

## ಶಿಕ್ಷಾವ್ರತಗಳು.

೧ ಸಾಮಾಯಿಕ—ಮನ, ವಚನ, ಕಾಯ, ಕೃತ, ಕಾರಿತ, ಅನುಮೋದನೆಗಳಿಂದ ಪಂಚಪಾಪಗಳನ್ನು ಬಿಡುವುದಕ್ಕೆ ಸಾಮಾಯಿಕವೆಂದು ಹೆಸರು.

೨ ಪ್ರೋಷಧೋಪವಾಸ— ಮೊದಲಿನ ಮತ್ತು ನಂತರದ ದಿನಗಳಲ್ಲಿ ಏಕಭುಕ್ತಿಪೂರ್ವಕವಾಗಿ ಅಷ್ಟಮಿ, ಚತುರ್ದಶಿಯ ದಿನಗಳಲ್ಲಿ ಉಪವಾಸವನ್ನು ಮಾಡುವುದಕ್ಕೆ ಪ್ರೋಷಧೋಪವಾಸವೆಂದು ಹೆಸರು.

೩ ಉಪಭೋಗಪರಿಭೋಗಪರಿಮಾಣವ್ರತ— ಭೋಗ (ಒಂದು ಸಾರಿ ಭೋಗಿಸುವ ಪದಾರ್ಥ) ಮತ್ತು ಉಪಭೋಗ [ಅನೇಕಸಾರಿ ಭೋಗಿಸುವ ಪದಾರ್ಥ] ಪದಾರ್ಥಗಳಲ್ಲಿ ತನಗೆ ಬೇಕಾದ ವಸ್ತುಗಳನ್ನು ನಿಯಮ ಮಾಡಿ ಉಳಿದವುಗಳಲ್ಲಿ ಮಮತ್ವವನ್ನು ಬಿಡುವುದಕ್ಕೆ ಉಪಭೋಗಪರಿಭೋಗಪರಿಮಾಣವ್ರತವೆಂದು ಹೇಳುತ್ತಾರೆ,

ಅತಿಥಿಸಂವಿಭಾಗವ್ರತ— ಅತಿಥಿ ಅಂದರೆ ಮುನಿಗಳಿಗೆ ಪಿಂಛ, ಕಮಂಡಲ ಮೊದಲಾದ ಸಂಯಮೋಪಕರಣವನ್ನು ಪುಸ್ತಕ ಮೊದಲಾದ ಜ್ಞಾನೋಪಕರಣಗಳನ್ನು ಮತ್ತು ಆಹಾರ ವಸತಿ ಮುಂತಾದುವುಗಳಿಂದ ಸತ್ಕಾರವನ್ನು ಮಾಡುವುದಕ್ಕೆ ಅತಿಥಿಸಂವಿಭಾಗವ್ರತವೆಂದು ಹೇಳುತ್ತಾರೆ. ಈ ಪ್ರಕಾರ ಇವು ನಾಲ್ಕು ಶಿಕ್ಷಾವ್ರತಗಳು.

ಇವುಗಳಿಂದ ಮುನಿವ್ರತವನ್ನು ಪಾಲನೆ ಮಾಡಬೇಕೆಂಬ ಶಿಕ್ಷಣವು ಸಿಕ್ಕುವುದರಿಂದ ಇವುಗಳಿಗೆ ಶಿಕ್ಷಾವ್ರತಗಳೆಂದು ಹೆಸರು.

ಈ ಪ್ರಕಾರ ೫ ಅಣುವ್ರತ ೩ ಗುಣವ್ರತ ೪ ಶಿಕ್ಷಾವ್ರತಗಳು ಕೂಡಿದರೆ ಶ್ರಾವಕನ ೧೨ ವ್ರತಗಳಾಗುತ್ತವೆ.

## ಶ್ರಾವಕನ ಹನ್ನೆರಡು ವ್ರತಗಳು

ದೇಶವ್ರತ






೫ + ೩ + ೪ = ೧೨

ವ್ರತಿಗೆ ಸಲ್ಲೇಖನವ್ರತ.

## ಮಾರಣಾಂತಿಕೀಂ ಸಲ್ಲೇಖನಾಂ ಜೋಷಿತಾ॥೨೨॥

ಅರ್ಥ — ಶ್ರಾವಕನು ಮರಣ ಸಮಯದಲ್ಲಿ ಸಲ್ಲೇಖನಾ ವ್ರತವನ್ನು ಬಹಳ ಪ್ರೀತಿಯಿಂದ ಧಾರಣೆ ಮಾಡುತ್ತಾನೆ. ಇಹಲೋಕ ಮತ್ತು ಪರಲೋಕಗಳ ಯಾವ ಆಶೆಯು ಅಪೇಕ್ಷೆಯನ್ನು ಮಾಡದೆ ಶರೀರ ಮತ್ತು ಕಷಾಯಗಳನ್ನು ಕೃಶಮಾಡುವುದಕ್ಕೆ ಸಲ್ಲೇಖನಾ ಎಂದೂ ಹೆಸರು. ಇದನ್ನು ಸಮಾಧಿಮರಣ ಎಂದೂ ಹೇಳುತ್ತಾರೆ.

ಸಮ್ಯಗ್ದರ್ಶನದ ಐದು ಅತೀಚಾರಗಳು.

## ಶಂಕಾಕಾಂಕ್ಷಾವಿಚಿಕಿತ್ಸಾನ್ಯದೃಷ್ಟಿಪ್ರಶಂಸಾಸಂಸ್ತವಾಃ ಸಮ್ಯಗ್ದೃಷ್ಟೇರತೀಚಾರಾಃ॥೨೩॥

ಅರ್ಥ —ಶಂಕಾ. ಜಿನೇಂದ್ರ ಭಗವಂತನು ಹೇಳಿರುವ ಸೂಕ್ಷ್ಮ ವಿಷಯಗಳಲ್ಲಿ ಸಂದೇಹವನ್ನು ಮಾಡುವದು ಅಥವಾ * ಸಪ್ತಭಯಗಳನ್ನು ಮಾಡುವದು. ಕಾಂಕ್ಷಾ; ಸಾಂಸಾರಿಕ ವಿಷಯಭೋಗಗಳ ಅಪೇಕ್ಷೆಯನ್ನು ಮಾಡುವದು. ವಿಚಿಕಿತ್ಸಾ; ದೀನ ಮತ್ತು ದುಃಖಿ ಪ್ರಾಣಿಗಳನ್ನು ನೋಡಿ ಅಥವಾ ರತ್ನತ್ರಯದಿಂದ ಪವಿತ್ರರಾದ ಆದರೆ ಶರೀರದಿಂದ ಮಲಿನರಾದ ಮುನಿಗಳನ್ನು ನೋಡಿ ಹೇಸಿಗೆಪಡುವುದು, ಅನ್ಯದೃಷ್ಟಿ ಪ್ರಶಂಸಾ; ಮಿಥ್ಯಾದೃಷ್ಟಿಗಳ ಜ್ಞಾನ ಮೊದಲಾದವುಗಳನ್ನು ಮನಸ್ಸಿನಲ್ಲಿ ಉತ್ತಮವೆಂದು ಭಾವಿಸುವುದು ಅನ್ಯದೃಷ್ಟಿ ಸಂಸ್ತವ; ಮಿಥ್ಯಾದೃಷ್ಟಿಗಳ ಜ್ಞಾನ ಮೊದಲಾದವುಗಳನ್ನು ಹೊಗಳುವುದು ಈ ಐದು ಸಮ್ಯಗ್ದರ್ಶನದ ಅತೀಚಾರಗಳು.

ವಿಶೇಷ — ಯಾರಲ್ಲಿ ನಿರ್ದೋಷವಾದ ಸಮ್ಯಗ್ದರ್ಶನವಿದೆಯೋ ಅವರೇ ವ್ರತಗಳನ್ನಾಚರಿಸಬಹುದು. ಆದುದರಿಂದ ಸಮ್ಯಗ್ದರ್ಶನದ ಅತೀಚಾರಗಳನ್ನು ಮೊದಲು ಹೇಳಲಾಗಿದೆ.

---

* ಇಹಲೋಕಭಯ. ಪರಲೋಕಭಯ. ಮರಣಭಯ. ವೇದನಾಭಯ. ಅಗುಪ್ತಿಭಯ [illegible] ಮತ್ತು [illegible] ಅಕಸ್ಮಾತ್‌ಭಯ.

ವ್ರತದ ಒಂದಂಶ ಭಂಗವಾಗುವುದಕ್ಕೆ ಅತಿಚಾರವೆಂದು ಹೆಸರು

ವ್ರತಶೀಲಗಳ ಅತೀಚಾರ.

## ವ್ರತಶೀಲೇಷು ಪಂಚ ಪಂಚ ಯಥಾಕ್ರಮಂ ।೨೪।

ಅರ್ಥ— ಐದು ವ್ರತ ಮತ್ತು ಏಳು ಶೀಲಗಳಲ್ಲಿ ಯಥಾಕ್ರಮವಾಗಿ ಐದೈದು ಅತೀಚಾರಗಳಿರುತ್ತವೆ. ಅವುಗಳನ್ನು ಮುಂದಿನ ಸೂತ್ರಗಳಲ್ಲಿ ಹೇಳುತ್ತಾರೆ.

ಅಹಿಂಸಾಣುವ್ರತದ ಅತೀಚಾರ.

## ಬಂಧವಧಚ್ಛೇದಾತಿಭಾರಾರೋಪಣಾನ್ನಪಾನ ನಿರೋಧಾಃ ॥೨೫ ॥

ಅರ್ಥ— ಬಂಧ, ಅಪೇಕ್ಷಿತ ಸ್ಥಾನಕ್ಕೆ ಹೋಗಗೊಡದೆ ಹಗ್ಗ ಮೊದಲಾದವುಗಳಿಂದ ಕಟ್ಟಿಡುವುದು ವಧ,= ಚೆತ್ತ ಮೊದಲಾದವುಗಳಿಂದ ಹೊಡೆಯುವುದು. ಛೇದ= ಮೂಗು ಕಿವಿ ಆದಿಗಳನ್ನು ಕತ್ತರಿಸುವದು, ಅತಿಭಾರಾರೋಪಣ = ಶಕ್ತಿಯಿಂದ ಹೆಚ್ಚಾದ ಭಾರವನ್ನು ಹೊರಿಸುವುದು, ಅನ್ನ ಪಾನನಿರೋಧ,= ಸಮಯ ಸಮಯದಲ್ಲಿ ಅನ್ನಪಾನಗಳನ್ನು ಕೊಡದಿರುವುದು, ಈ ಐದು ಅಹಿಂಸಾಣುವ್ರತದ ಅತೀಚಾರಗಳು.

ಸತ್ಯಾಣುವ್ರತದ ಅತೀಚಾರ.

## ಮಿಥ್ಯೋಪದೇಶರಹೋಭ್ಯಾಖ್ಯಾನಕೂಟಲೇಖ- ಕ್ರಿಯಾನ್ಯಾಸಾಪಹಾರಸಾಕಾರಮಂತ್ರಭೇದಾಃ॥೨೬॥

ಅರ್ಥ–ಮಿಥ್ಯೋಪದೇಶ, = ಅಸತ್ಯ ಉಪದೇಶ, ರಹೋಭ್ಯಾಖ್ಯಾನ. = ಸ್ತ್ರೀಪುರುಷರ ಏಕಾಂತದ ಗುಪ್ತ ವಿಷಯಗಳನ್ನು ಪ್ರಕಟಿಸುವುದು ಕೂಟಲೇಖಕ್ರಿಯಾ, = ಸುಳ್ಳು ದಸ್ತಾವೇಜ ಮೊದಲಾದವುಗಳನ್ನು ಮಾಡುವುದು. ನ್ಯಾಸಾಪಹಾರ, = ಬೇರೆಯವರು ಇಟ್ಟುಹೋದ ಗಂಟು ಮೊದಲಾದವುಗಳನ್ನು ಅಪಹರಿಸುವುದು. ಸಾಕಾರಮಂತ್ರಭೇದ = ಬೇರೆ

ಯುವರ ಅಂಗಚೇಷ್ಟೆಗಳಿಂದ ಅವರ ಇಂಗಿತವನ್ನು ತಿಳಿದು ಪ್ರಕಟಿಸುವುದು; ಇವು ಐದು ಸತ್ಯಾಣುವ್ರತದ ಅತೀಚಾರಗಳು.

### ಅಚೌರ್ಯಾಣುವ್ರತದ ಅತೀಚಾರ

## ಸ್ತೇನಪ್ರಯೋಗತದಾಹೃತಾದಾನವಿರುದ್ಧರಾಜ್ಯಾತಿಕ್ರಮಹೀನಾಧಿಕಮಾನೋನ್ಮಾನಪ್ರತಿರೂಪಕವ್ಯವಹಾರಾಃ ॥೨೭॥

ಅರ್ಥ—ಸ್ತೇನಪ್ರಯೋಗ, = ಕಳ್ಳನಿಗೆ ಕಳ್ಳತನ ಮಾಡಲಿಕ್ಕೆ ಪ್ರೇರಣೆ ಕೊಡುವುದು. ತದಾಹೃತಾದಾನ, = ಕಳ್ಳತನ ಮಾಡಿ ತಂದ ವಸ್ತುಗಳನ್ನು ತೆಗೆದುಕೊಳ್ಳುವುದು. ವಿರುದ್ಧರಾಜ್ಯಾತಿಕ್ರಮ, = ರಾಜಾಜ್ಞೆಗೆ ವಿರುದ್ಧವಾದ ಕ್ರಿಯೆಗಳನ್ನು ಮಾಡುವುದು, ಟ್ಯಾಕ್ಸ ಕಸ್ಟಮ ಆದಿಗಳನ್ನು ತಪ್ಪಿಸುವುದು. ಹೀನಾಧಿಕ ಮಾನೋನ್ಮಾನ = ತೆಗೆದುಕೊಳ್ಳುವ ಮತ್ತು ಕೊಡುವ ತಕ್ಕಡಿ ಕಲ್ಲು ಸೇರು ಮೊದಲಾದವುಗಳಲ್ಲಿ ಹೆಚ್ಚು ಕಡಮೆ ಇಡುವುದು. ಪ್ರತಿರೂಪಕ ವ್ಯವಹಾರ = ಬಹು ಮೂಲ್ಯದ ವಸ್ತುಗಳಲ್ಲಿ ಅಲ್ಪಮೂಲ್ಯದ ವಸ್ತುಗಳನ್ನು ಕೂಡಿಸಿ ಮಾರುವದು; ಈ ಐದು ಅಚೌರ್ಯಾಣುವ್ರತದ ಅತೀಚಾರಗಳು.

### ಬ್ರಹ್ಮಚರ್ಯಾಣುವ್ರತದ ಅತೀಚಾರ:

## ಪರವಿವಾಹಕರಣೇತ್ವರಿಕಾಪರಿಗೃಹೀತಾಪರಿಗೃಹಿತಾಗಮನಾನಂಗಕ್ರೀಡಾಕಾಮತೀವ್ರಾಭಿನಿವೇಶಾಃ ॥೨೮॥

ಅರ್ಥ–ಪರವಿವಾಹಕರಣ, = ಬೇರೆಯವರ ಮದುವೆಯನ್ನು ಮಾಡುವುದು. ಪರಿಗ್ರಹೀತೇತ್ವರಿಕಾಗಮನ = ವಿವಾಹಿತಳಾದ ವ್ಯಭಿಚಾರಿಣಿ ಸ್ತ್ರೀಯಕಡೆಗೆ ಹೋಗುವುದು ಅವಳೊಡನೆ ವ್ಯವಹಾರವನ್ನು ಮಾಡುವುದು ಮತ್ತು ಪ್ರೇಮದಿಂದ ಮಾತಾಡುವುದು. ಅಪರಿಗೃಹೀತೇತ್ವರಿಕಾಗಮನ = = ಅವಿವಾಹಿತ ವೇಶ್ಯೆ ಮೊದಲಾದ ವ್ಯಭಿಚಾರಿಣಿ ಸ್ತ್ರೀಯರಲ್ಲಿಗೆ ಹೋಗು

ವೃದು ಬರುವುದು ಅವರೊಡನೆ ವ್ಯವಹಾರವನ್ನಿಡುವುದು. ಅನಂಗಕ್ರೀಡಾ = ಕಾಮ ಸೇವನೆಗೆ ಯೋಗ್ಯವಲ್ಲದ ಅಂಗಗಳಲ್ಲಿ ಕ್ರೀಡಿಸುವುದು ಕಾಮ ತೀವ್ರಾಭಿನಿವೇಶ = ತನ್ನ ಸ್ತ್ರೀಯಲ್ಲಿಯೂ ಅತ್ಯಧಿಕ ಕಾಮಸೇವನೆಯಲ್ಲಿ ಆಸಕ್ತನಾಗಿರುವುದು. ಈ ಐದು ಬ್ರಹ್ಮಚರ್ಯಾಣುವ್ರತದ ಅತೀಚಾರಗಳು.

### ಪರಿಗ್ರಹಪರಿಮಾಣವ್ರತದ ಅತೀಚಾರ

## ಕ್ಷೇತ್ರವಾಸ್ತುಹಿರಣ್ಯಸುವರ್ಣಧನಧಾನ್ಯದಾಸೀದಾಸ ಕುಪ್ಯಪ್ರಮಾಣಾತಿಕ್ರಮಾಃ ॥೨೯॥

ಅರ್ಥ— ಕ್ಷೇತ್ರವಾಸ್ತು ಪ್ರಮಾಣಾತಿಕ್ರಮ, = ಮನೆ, ಹೊಲ, ಮೊದಲಾದವುಗಳ ಪ್ರಮಾಣವನ್ನು ಉಲ್ಲಂಘಿಸುವುದು. ಹಿರಣ್ಯಸುವರ್ಣ ಪ್ರಮಾಣಾತಿಕ್ರಮ, = ಬಂಗಾರ ಬೆಳ್ಳಿಯಲ್ಲಿ ಮಾಡಿದಂತಹ ಪ್ರಮಾಣ ವನ್ನು ಉಲ್ಲಂಘಿಸುವುದು, ಧನಧಾನ್ಯ ಪ್ರಮಾಣಾತಿಕ್ರಮ = ದನ, ಎಮ್ಮೆ ಮೊದಲಾದ ಪಶುಗಳ ಮತ್ತು ಅಕ್ಕಿ, ಗೋಧಿ, ಮೊದಲಾದ ಧಾನ್ಯಗಳಲ್ಲಿ ಮಾಡಿದ ಪ್ರಮಾಣವನ್ನು ಮೀರುವುದು. ದಾಸೀದಾಸಪ್ರಮಾಣಾತಿಕ್ರಮ = ದಾಸೀದಾಸ ಮೊದಲಾದ ಸೇವಕರಲ್ಲಿ ಮಾಡಿದ ನಿಯಮವನ್ನು ಉಲ್ಲಂ ಘಿಸುವುದು, ಕುಪ್ಯಪ್ರಮಾಣಾತಿಕ್ರಮ = ವಸ್ತ್ರ ಪಾತ್ರ ಮೊದಲಾದವು ಗಳಲ್ಲಿ ಮಾಡಿದ ನಿಯಮವನ್ನು ಉಲ್ಲಂಘಿಸುವುದು. ಇವು ಐದು ಪರಿ ಗ್ರಹಪರಿಮಾಣ ವ್ರತದ ಅತೀಚಾರಗಳು.

### ದಿಗ್ವ್ರತದ ಅತೀಚಾರ

## ಊರ್ಧ್ವಾಧಸ್ತಿರ್ಯಗ್ವ್ಯತಿಕ್ರಮಕ್ಷೇತ್ರವೃದ್ಧಿ- ಸ್ಮೃತ್ಯಂತರಾಧಾನಾನಿ ॥೩೦॥

ಊರ್ಧ್ವವ್ಯತಿಕ್ರಮ= ಪ್ರಮಾಣದಿಂದ ಹೆಚ್ಚಾದ ಪರ್ವತ ಮೊದಲಾ ದುವುಗಳನ್ನು ಹತ್ತುವುದು. ಅಧೋವ್ಯತಿಕ್ರಮ,= ಪ್ರಮಾಣದಿಂದ ಹೆಚ್ಚು ಬಾವಿ ಇತ್ಯಾದಿಗಳಲ್ಲಿ ಇಳಿಯುವುದು. ತಿರ್ಯಗ್ವ್ಯತಿಕ್ರಮ= ಸಮಾನಸ್ಥಾನ

ದಲ್ಲಿ ಮಾಡಿದ ಪ್ರಮಾಣದಿಂದ ಹೆಚ್ಚು ಆ ಕಡೆ ಈ ಕಡೆ ಹೋಗುವುದು, ಕ್ಷೇತ್ರವೃದ್ಧಿ, = ತಾನು ನಿಯಮ ಮಾಡಿದಂತಹ ಕ್ಷೇತ್ರವನ್ನು ವೃದ್ಧಿ ಮಾಡಿಕೊಳ್ಳುವುದು. ಮತ್ತು ಸ್ಮೃತ್ಯಂತರಾಧಾನ = ತಾನು ಮಾಡಿದ ನಿಯಮದ ಪ್ರಮಾಣವನ್ನು ಮರೆತು ಬಿಡುವುದು. ಇವು ಐದು ದಿಗ್ವ್ರತ ಅತೀಚಾರಗಳು.

## ದೇಶವ್ರತದ ಅತೀಚಾರ

## ಆನಯನಪ್ರೇಷ್ಯಪ್ರಯೋಗಶಬ್ದರೂಪಾನುಪಾತ-ಪುದ್ಗಲಕ್ಷೇಪಾಃ ॥೩೧॥

ಅರ್ಥ–ಆನಯನ= ತಾನು ನಿಯಮ ಮಾಡಿದ ಎಲ್ಲೆಯಿಂದ ಹೊರಗಿನ ಪದಾರ್ಥಗಳನ್ನು ತರಿಸುವುದು. ಪ್ರೇಷ್ಯಪ್ರಯೋಗ= ಎಲ್ಲೆಯಿಂದ ಹೊರಗೆ ತನ್ನ ಸೇವಕರನ್ನು ಕಳುಹಿಸುವುದು. ಶಬ್ದಾನುಪಾತ = ಎಲ್ಲೆಯಿಂದ ಹೊರಗಿರುವವರಿಗೆ ಶಬ್ದ ಮೊದಲಾದವುಗಳಿಂದ ಸಂಜ್ಞೆಯನ್ನು ಮಾಡುವುದು. ರೂಪಾನುಪಾತ =ಎಲ್ಲೆಯ ಹೊರಗಿನವರಿಗೆ ತನ್ನ ಶರೀರ, ಚಿತ್ರ ಮೊದಲಾದವುಗಳನ್ನು ತೋರಿಸಿ ಸಂಜ್ಞೆ ಮಾಡುವದು. ಮತ್ತು ಪುದ್ಗಲಕ್ಷೇಪ= ಕಲ್ಲು ಮೊದಲಾದವುಗಳನ್ನೆಸೆದು ಸಂಜ್ಞೆ ಮಾಡುವುದು. ಇವು ಐದು ದೇಶವ್ರತದ ಅತೀಚಾರಗಳು.

## ಅನರ್ಥದಂಡವ್ರತದ ಅತೀಚಾರ

## ಕಂದರ್ಪಕೌತ್ಕುಚ್ಯಮೌಖರ್ಯಾಸಮೀಕ್ಷ್ಯಾಧಿ-ಕರಣೋಪಭೋಗಪರಿಭೋಗಾನರ್ಥಕ್ಯಾನಿ ॥೩೨॥

ಅರ್ಥ–ಕಂದರ್ಪ = ಪ್ರೀತಿಯಿಂದ ಹಾಸ್ಯಮಿಶ್ರಿತ ಅಸಭ್ಯ ವಚನಗಳನ್ನು ಮಾತಾಡುವದು. ಕೌತ್ಕುಚ್ಯ = ಶರೀರದಿಂದ ಕುಚೇಷ್ಟೆಗಳನ್ನು ಮಾಡುತ್ತಾ ಅಸಭ್ಯ ವಚನಗಳನ್ನಾಡುವುದು. ಮೌಖರ್ಯ= ಧೃಷ್ಟತಾ ಪೂರ್ವಕ ಬಾಯಿಗೆ ಬಂದ ಹಾಗೆ ಮಾತನಾಡುವುದು. ಅಸಮೀಕ್ಷ್ಯಾಧಿಕರಣ= ವ್ಯರ್ಥವಾಗಿ ಮನ ವಚನಗಳ ಪ್ರವೃತ್ತಿಯನ್ನು ಮಾಡುವದು. ಉಪಭೋಗಪರಿಭೋಗಾನರ್ಥಕ್ಯ=

ಭೋಗ, ಉಪಭೋಗ ಪದಾರ್ಥಗಳಲ್ಲಿ ಮಾಡಿದ ನಿಯಮದಲ್ಲಿಯೂ ವ್ಯರ್ಥವಾದ ಹೆಚ್ಚಾದ ವಸ್ತುಗಳನ್ನು ಸಂಗ್ರಹಿಸುವುದು. ಇವು ಐದು ಅನರ್ಥದಂಡವ್ರತದ ಅತೀಚಾರಗಳು.

### ಸಾಮಾಯಿಕದ ಅತೀಚಾರ

## ಯೋಗದುಃಪ್ರಣಿಧಾನಾನಾದರಸ್ಮೃತ್ಯನುಪಸ್ಥಾನಾನಿ।

ಅರ್ಥ– ಯೋಗದುಷ್ಪ್ರಣಿಧಾನ = ಮನ ವಚನ ಕಾಯಗಳೆಂಬ ಮೂರು ಯೋಗಗಳನ್ನು ಅನ್ಯಥಾ ಪ್ರವರ್ತಿಸುವುದು ಹೀಗೆ ಇವು ಮೂರು. ಅನಾದರ = ಉತ್ಸಾಹರಹಿತನಾಗಿ ಸಾಮಾಯಿಕವನ್ನು ಮಾಡುವುದು. ಮತ್ತು ಸ್ಮೃತ್ಯನುಪಸ್ಥಾನ = ಸಾಮಾಯಿಕ ಪಾಠ ಮೊದಲಾದವುಗಳನ್ನು ಮರೆತು ಬಿಡುವುದು. ಇವು ಐದು ಸಾಮಾಯಿಕ ವ್ರತದ ಅತೀಚಾರಗಳು.

### ಪ್ರೋಷಧೋಪವಾಸವ್ರತದ ಅತೀಚಾರ

## ಅಪ್ರತ್ಯವೇಕ್ಷಿತಾಪ್ರಮಾರ್ಜಿತೋತ್ಸರ್ಗಾದಾನಸಂ– ಸ್ತರೋಪಕ್ರಮಣಾನಾದರಸ್ಮೃತ್ಯನುಪಸ್ಥಾನಾನಿ॥೩೪॥

ಅರ್ಥ– ಅಪ್ರತ್ಯವೇಕ್ಷಿತಾಪ್ರಮಾರ್ಜಿತೋತ್ಸರ್ಗ= ಚೆನ್ನಾಗಿ ನೋಡದೆ ಉಡುಗದ ಭೂಮಿಯಲ್ಲಿ ಮಲಮೂತ್ರಗಳ ವಿಸರ್ಜನೆಯನ್ನು ಮಾಡುವುದು. ಅಪ್ರತ್ಯವೇಕ್ಷಿತಾಪ್ರಮಾರ್ಜಿತಾದಾನ = ನೋಡದೆ ಉಡುಗದ ಭೂಮಿಯಿಂದ ಉಪಕರಣಾದಿಗಳನ್ನು ತೆಗೆದುಕೊಳ್ಳುವುದು. ಅಪ್ರತ್ಯವೇಕ್ಷಿತಾಪ್ರಮಾರ್ಜಿತಸಂಸ್ತರೋಪಕ್ರಮಣ= ನೋಡದೆ ಉಡುಗದ ಭೂಮಿಯಲ್ಲಿ ವಸ್ತ್ರ, ಚಾಪೆ ಮೊದಲಾದವುಗಳನ್ನು ಹಾಸುವುದು. ಅನಾದರ =ಉಪವಾಸದಿಂದ ವ್ಯಾಕುಲನಾಗಿ ಧರ್ಮಕಾರ್ಯಗಳನ್ನು ನಿರುತ್ಸಾಹದಿಂದ ಮಾಡುವುದು. ಸ್ಮೃತ್ಯನುಪಸ್ಥಾನ = ಅವಶ್ಯಕ ಧರ್ಮಕಾರ್ಯಗಳನ್ನು ಮರೆತುಬಿಡುವುದು. ಈ ಐದು ಪ್ರೋಷಧೋಪವಾಸವ್ರತದ ಅತೀಚಾರಗಳು.

### ಭೋಗೋಪಭೋಗಪರಿಮಾಣವ್ರತದ ಅತೀಚಾರ.

## ಸಚಿತ್ತಸಂಬಂಧಸಮ್ಮಿಶ್ರಾಭಿಷವದುಃಪಕ್ವಾಹಾರಾಃ

ಅರ್ಥ-ಸಚಿತ್ತಾಹಾರ = ಜೀವಸಹಿತ ಕಾಯಿ ಫಲಗಳ ಭಕ್ಷಣ. ಸಚಿತ್ತ ಸಂಬಂಧಾಹಾರಂ = ಸಚಿತ್ತ ಪದಾರ್ಥದ ಸಂಬಂಧದಲ್ಲಿರುವ ಪದಾರ್ಥಗಳನ್ನು ಭಕ್ಷಿಸುವುದು. ಸಚಿತ್ತಸಂಮಿಶ್ರಾಹಾರ= ಸಚಿತ್ತ ಪದಾರ್ಥದಿಂದ ಕೂಡಿದ ಆಹಾರವನ್ನು ಗ್ರಹಣೆಮಾಡುವುದು. ದುಃಪಕ್ವಾಹಾರ= ಹೆಚ್ಚು ಅಥವಾ ಕಮ್ಮಿ ಪಕ್ವವಾದ ಆಹಾರವನ್ನು ಗ್ರಹಣೆ ಮಾಡುವುದು. ಇವು ಐದು ಭೋಗೋಪ ಭೋಗಪರಿಮಾಣವ್ರತದ ಅತೀಚಾರಗಳು.

ಅತಿಥಿಸಂವಿಭಾಗವ್ರತದ ಅತೀಚಾರ

**ಸಚಿತ್ತನಿಕ್ಷೇಪಾಪಿಧಾನಪರವ್ಯಪದೇಶಮಾತ್ಸರ್ಯ ಕಾಲಾತಿಕ್ರಮಾಃ ||೩೬||**

ಅರ್ಥ– ಸಚಿತ್ತಾಭಿಷವ =ಸಚಿತ್ತ ವಸ್ತುಗಳ ದ್ರವಪದಾರ್ಥಗಳನ್ನು ಕುಡಿಯುವುದು.

ಸಚಿತ್ತನಿಕ್ಷೇಪ ಹಸಿಯಾದ ಎಲೆ ಮೊದಲಾದುವುಗಳ ಮೇಲೆ ಆಹಾರ ಪದಾರ್ಥವನ್ನಿಡುವುದು, ಸಚಿತ್ತಾಪಿಧಾನ = ಸಚಿತ್ತ ಎಲೆ ಮೊದ ಲಾದವುಗಳಿಂದ ಅದನ್ನು ಮುಚ್ಚುವುದು. ಪರವ್ಯಪದೇಶ =ಬೇರೆ ದಾನಿಯ ಅಪ್ಪಣೆಯಿಂದ ದಾನ ಕೊಡುವುದು ಅಥವಾ ಬೇರೆ ದಾನಿಯ ಆಹಾರವನ್ನು ತಾನು ಕೊಡುವುದು. ಮಾತ್ಸರ್ಯ = ಬೇರೆ ದಾನಿಯಲ್ಲಿ ಮಾತ್ಸರ್ಯ ಬುದ್ಧಿಯನ್ನು ಮಾಡಿ ದಾನವನ್ನು ಕೊಡುವುದು. ಕಾಲಾತಿಕ್ರಮ =ದಾನದ ಕಾಲವನ್ನು ಮೀರಿ ದಾನವನ್ನು ಕೊಡುವುದು. ಇವು ಐದು ಅತಿಥಿಸಂವಿಭಾಗ ವ್ರತದ ಅತೀಚಾರಗಳು.

ಸಲ್ಲೇಖನಾವ್ರತದ ಅತೀಚಾರ

**ಜೀವಿತಮರಣಾಶಂಸಾಮಿತ್ರಾನುರಾಗಸುಖಾನು ಬಂಧನಿದಾನಾನಿ ||೩೭||**

ಅರ್ಥ–ಜೀವಿತಾಶಂಸಾ= ಸಲ್ಲೇಖನೆಯನ್ನು ಧರಿಸಿದ ಮೇಲೆ ಜೀವಿಸ ಲಿಚ್ಛಿಸುವುದು. ಮರಣಾಶಂಸಾ =ತೀವ್ರ ವೇದನೆಯಾಗುತ್ತಿರಲು ಬೇಗನೆ ಸಾಯುವ ಅಪೇಕ್ಷೆಯನ್ನು ಮಾಡುವದು. ಮಿತ್ರಾನುರಾಗ = ಮಿತ್ರರನ್ನು

ಸ್ಮರಿಸುವುದು. ಸುಖಾನುಬಂಧ = ಮೊದಲು ಅನುಭವಿಸಿದಂಥಾ ಸುಖಗಳನ್ನು ಸ್ಮರಿಸುವುದು. ನಿದಾನ = ಮುಂದಿನ ಭವದಲ್ಲಿ ಸುಖದಸಮೃದ್ಧಿಗಳಾಗಬೇಕೆಂದು ಬಯಸುವುದು. ಇವು ಐದು ಸಲ್ಲೇಖನಾ ವ್ರತದ ಅತೀಚಾರಗಳು.

ಈ ಪ್ರಕಾರ ವ್ರತ ಮತ್ತು ಶೀಲಗಳಿಗೆ ಐದೈದು ಅತೀಚಾರಗಳನ್ನು ಹೇಳಿರುವರು. ಈ ಅತೀಚಾರಗಳನ್ನು ಬಿಟ್ಟು ವ್ರತಶೀಲಗಳನ್ನು ಪಾಲಿಸಿದರೆ ಅವುಗಳು ನಿರ್ದೋಷಗಳಾಗುತ್ತವೆ. ಆ ವ್ರತಿಯೇ ನಿರ್ದೋಷವ್ರತಿ ಎಂದು ಹೇಳಲ್ಪಡುತ್ತಾನೆ.

## ಅನುಗ್ರಹಾರ್ಥಂ ಸ್ವಸ್ಯಾತಿಸರ್ಗೋ ದಾನಂ ||೩೮||

ಅರ್ಥ—ತನ್ನ ಮತ್ತು ಬೇರೆಯವರ ಅನುಗ್ರಹ ಅಂದರೆ ಉಪಕಾರಕ್ಕೋಸ್ಕರವಾಗಿ ಸ್ವಸ್ಯ ಅಂದರೆ ತನ್ನ ಧನಾದಿಗಳ ಅತಿಸರ್ಗ ಅಂದರೆ ತ್ಯಾಗಮಾಡುವುದು, ದಾನವೆಂದು ಹೇಳಲ್ಪಡುತ್ತದೆ. ದಾನವನ್ನು ಮಾಡುವುದರಿಂದ ತನಗೆ ಪುಣ್ಯಬಂಧವೆಂಬ ಉಪಕಾರವೂ ಇತರರಿಗೆ ಸಮ್ಯಗ್ಜ್ಞಾನಾದಿ ಗುಣಗಳಲ್ಲಿ ವೃದ್ಧಿ = ಯಾಗುವಂಥ ಉಪಕಾರವೂ ಆಗುವುದು.

### ದಾನದ ವಿಶೇಷತೆ

## ವಿಧಿದ್ರವ್ಯದಾತೃಪಾತ್ರವಿಶೇಷಾತ್ತದ್ವಿಶೇಷಃ ||೩೯||

ಅರ್ಥ—ವಿಧಿವಿಶೇಷ, ದ್ರವ್ಯವಿಶೇಷ, ಧಾತವಿಶೇಷ ಮತ್ತು ಪಾತ್ರವಿಶೇಷದಿಂದ ಆ ದಾನದಲ್ಲಿಯೂ ವಿಶೇಷತೆಯು ಉಂಟಾಗುವುದು.

ವಿಧಿವಿಶೇಷ—ನವಧಾಭಕ್ತಿಯ ಕ್ರಮಕ್ಕೆ ವಿಧಿವಿಶೇಷವೆಂದು ಹೆಸರು.

ದ್ರವ್ಯವಿಶೇಷ—ತಪ, ಸ್ವಾಧ್ಯಾಯ ಧ್ಯಾನಾದಿಗಳ ವೃದ್ಧಿಗಾಗಿ ಅನುಕೂಲವಾದ ಆಹಾರಕ್ಕೆ ದ್ರವ್ಯವಿಶೇಷವೆಂದು ಹೆಸರು.

ದಾತೃವಿಶೇಷ—ಶ್ರದ್ಧೆ, ಭಕ್ತಿ, ಮೊದಲಾದ ದಾತೃವಿನ ವಿಶೇಷ ಗುಣಗಳಿಂದ ಕೂಡಿರುವ ದಾನಿಯು ದಾತೃವಿಶೇಷವು.

ಪಾತ್ರವಿಶೇಷ–ವಿಶಿಷ್ಟಚಾರಿತ್ರವನ್ನು ಧಾರಣೆ ಮಾಡಿರುವ ಮಹಾವ್ರತಿ ಮೊದಲಾದವರಿಗೆ ಪಾತ್ರವಿಶೇಷವೆಂದು ಹೇಳುತ್ತಾರೆ.

ಇತಿ ಶ್ರೀಮದುಮಾಸ್ವಾಮಿವಿರಚಿತೇ ಮೋಕ್ಷಶಾಸ್ತ್ರೇ ಸಪ್ತಮೋಽಧ್ಯಾಯಃ

# ಪ್ರಶ್ನೆಗಳು

೧. ವ್ರತಗಳೆಷ್ಟು ? ಶೀಲಗಳೆಷ್ಟು ?

೨. ಅಹಿಂಸಾ ವ್ರತದ ಭಾವನೆಗಳು ಯಾವುವು?

೩. ಪರಿಗ್ರಹವೆಂದರೇನು ?

೪. ಪ್ರೋಷದೋಪವಾಸದ ಅತೀಚಾರಗಳನ್ನು ಬರೆದು-ಸಲ್ಲೇಖನಾ ವ್ರತದ ಲಕ್ಷಣವನ್ನು ಬರೆಯಿರಿ,

೫. ದಿಗ್ವ್ರತ ದೇಶವ್ರತಗಳಲ್ಲಿರುವ ವತ್ಯಾಸವೇನು ?

೬, ಕೆಳಗಿನ ಶಬ್ದಗಳ ಅರ್ಥವನ್ನು ಬರೆಯಿರಿ—

ರಹೋಭ್ಯಾಖ್ಯಾನ, ಇತ್ವರಿಕಾ, ಕುಪ್ಯ, ಮೌಖರ್ಯ, ಯೋಗದು ಷ್ಪ್ರಣಿಧಾನ.

೭ ದಾನವೆಂದರೇನು ? ಭಾವನೆಗಳನ್ನು ಏಕೆ ಭಾವಿಸಬೇಕು, ಅತೀಚಾರ ಗಳನ್ನು ಏಕೆ ಬಿಡಬೇಕು, ತಿಳಿಸಿರಿ.



# ಎಂಟನೇ ಅಧ್ಯಾಯ
## (ಅಷ್ಟಮ ಅಧ್ಯಾಯ)

### ಬಂಧ ತತ್ವದ ವರ್ಣನೆ

### ಕರ್ಮ ಬಂಧದ ಕಾರಣ

**ಮಿಥ್ಯಾದರ್ಶನಾವಿರತಿಪ್ರಮಾದಕಷಾಯಯೋಗಾ ಬಂಧಹೇತವಃ॥೧॥**

ಅರ್ಥ—ಮಿಥ್ಯಾದರ್ಶನ, ಅವಿರತಿ, ಪ್ರಮಾದ, ಕಷಾಯ ಮತ್ತು ಯೋಗ ಇವು ಐದು ಬಂಧಕ್ಕೆ ಕಾರಣಗಳು.

ಮಿಥ್ಯಾದರ್ಶನ-ತತ್ವಗಳನ್ನು ನಂಬದಿರುವುದು, ಅತತ್ವಗಳನ್ನು ನಂಬುವುದು, ಇದಕ್ಕೆ ಮಿಥ್ಯಾದರ್ಶನವೆನ್ನುತ್ತಾರೆ.

ಈ ಮಿಥ್ಯಾದರ್ಶನದಲ್ಲಿ ಗೃಹೀತ ಮಿಥ್ಯಾದರ್ಶನ ಮತ್ತು ಅಗೃಹೀತ ಮಿಥ್ಯಾದರ್ಶನವೆಂದು ಎರಡು ಭೇದವಿದೆ. ಪರೋಪದೇಶವನ್ನು ಪಡೆದು ಅತತ್ವಗಳನ್ನು ನಂಬುವುದಕ್ಕೆ ಗೃಹೀತಮಿಥ್ಯಾದರ್ಶನವೆಂದೂ ಪರೋಪದೇಶವಿಲ್ಲದೆ ತನ್ನ ಮಿಥ್ಯಾತ್ವಕರ್ಮದ ಉದಯದಿಂದಾಗುವ ಅತತ್ವ ಶ್ರದ್ಧಾನಕ್ಕೆ ಅಗೃಹೀತ ಮಿಥ್ಯಾತ್ವವೆಂದೂ ಹೆಸರು.

ಮಿಥ್ಯಾದರ್ಶನದ ಇನ್ನೂ ೫ ಭೇದಗಳಿವೆ.

೧ ಏಕಾಂತ ೨ ವಿನಯ ೩ ವಿಪರೀತ ೪ ಸಂಶಯ ೫ ಅಜ್ಞಾನ.

ಏಕಾಂತ ಮಿಥ್ಯಾದರ್ಶನ— ಅನೇಕ ಧರ್ಮದಿಂದ ಕೂಡಿದ ಪದಾರ್ಥದಲ್ಲಿ ಯಾವುದಾದರೊಂದು ಧರ್ಮವನ್ನು ಹೇಳಿ ಇದು ಹೀಗೆಯೇ ಇದೆ. ಬೇರೆ ಪ್ರಕಾರವಾಗಿಲ್ಲವೆಂದು ಏಕ ಅಭಿಪ್ರಾಯವನ್ನು ಹೇಳುವದು

ಏಕಾಂತ ಮಿಥ್ಯಾದರ್ಶನವು. ಉದಾ–ಬೌದ್ಧರು ದ್ರವ್ಯವನ್ನು ಸರ್ವಥಾ ಅನಿತ್ಯವೆಂದೂ, ವೇದಾಂತಿಗಳು ಸರ್ವಥಾ ನಿತ್ಯವೆಂದೂ ಹೇಳುತ್ತಾರೆ. ಅಂತವೆಂದರೆ ಧರ್ಮವೆಂದರ್ಥವು

ವಿಪರೀತ ಮಿಥ್ಯಾದರ್ಶನ— ಪರಿಗ್ರಹಸಹಿತರಾದವರೂ ಮುನಿಗಳಾಗ ಬಹುದು. ಕೇವಲಿಗಳು ಕವಲಾಹಾರವನ್ನು ಮಾಡುತ್ತಾರೆ. ಸ್ತ್ರೀಯರೂ ಮೋಕ್ಷಕ್ಕೆ ಹೋಗುತ್ತಾರೆ ಎಂಬ ವಿಪರೀತ ನಂಬಿಕೆಗೆ ವಿಪರೀತ ಮಿಥ್ಯಾ ದರ್ಶನವೆಂದು ಹೆಸರು.

ಸಂಶಯ ಮಿಥ್ಯಾದರ್ಶನ— ರತ್ನತ್ರಯಗಳು ಮೋಕ್ಷಕ್ಕೆ ಸಾಧನಗಳು ಹೌದೋ ಅಲ್ಲವೋ? ಆಗಮಗಳಲ್ಲಿ ಹೇಳಿದ ವಿಷಯಗಳು ಸತ್ಯ ಹೌದೋ ಅಲ್ಲವೋ? ಎಂಬ ಸಂದೇಹಾಸ್ಪದವಾದ ನಂಬಿಕೆಗೆ ಸಂಶಯ ಮಿಥ್ಯಾ ದರ್ಶನವೆನ್ನುತ್ತಾರೆ.

ವಿನಯ ಮಿಥ್ಯಾದರ್ಶನ– ಎಲ್ಲಾ ಪ್ರಕಾರದ ದೇವರು ಮತ್ತು ಎಲ್ಲಾ ಪ್ರಕಾರದ ಮತಗಳನ್ನು ಸಮಾನವಾಗಿ ಭಾವಿಸುವುದಕ್ಕೆ ವಿನಯ ಮಿಥ್ಯಾದರ್ಶನವೆಂದು ಹೆಸರು.

ಅಜ್ಞಾನ ಮಿಥ್ಯಾದರ್ಶನ— ಹಿತಾಹಿತದ ಪರೀಕ್ಷೆಯನ್ನು ಮಾಡದೇ ನೆಯೇ ಅಜ್ಞಾನದಿಂದ ಶ್ರದ್ಧಾನವನ್ನು ಮಾಡುವುದಕ್ಕೆ ಅಜ್ಞಾನ ಮಿಥ್ಯಾ ತ್ವವೆಂದು ಹೆಸರು.

ಅವಿರತಿ—ಐದು ಸ್ಥಾವರ, ಒಂದು ತ್ರಸ, ಈ ಪ್ರಕಾರವಾಗಿ ಆರು ಕಾಯ ಜೀವಗಳ ಹಿಂಸೆಯನ್ನು ಬಿಡದಿರುವುದು ಮತ್ತು ಇಂದ್ರಿಯ ಮತ್ತು ಮನಸ್ಸಿನ ವಿಷಯಗಳಲ್ಲಿ ಆಗುತ್ತಿರುವ ಪ್ರವೃತ್ತಿಯನ್ನು ತಡೆಯ ದಿರುವುದಕ್ಕೆ ಅವಿರತಿ ಎಂದು ಹೇಳುತ್ತಾರೆ. ಈ ಅವಿರತಿಯು ಹನ್ನೆರಡು ವಿಧವಾಗಿದೆ.

ಪ್ರಮಾದ—೫ ಸಮಿತಿ, ೩ ಗುಪ್ತಿ, ೮ ಶುದ್ಧಿ, * ೧೦ ಧರ್ಮ ಮೊದಲಾದ ಶುಭ ಕಾರ್ಯಗಳಲ್ಲಿ ಉತ್ಸಾಹಪೂರ್ವಕ ಭಾಗವಹಿಸದಿರುವುದು ಪ್ರಮಾದವು, ಇವರಲ್ಲಿ ೧೫ ಭೇದಗಳಿವೆ.

ಕಷಾಯ—ಕ್ರೋಧಾದಿ ಕಷಾಯಗಳು, ಇದರಲ್ಲಿ ೨೫ ಭೇದಗಳಿವೆ.

ಯೋಗ—ಇದರಲ್ಲಿ ೧೫ ಭೇದಗಳಿವೆ. ೪ ಮನೋಯೋಗಗಳು ೪ ವಚನಯೋಗಗಳು. ೭ ಕಾಯಯೋಗಗಳು ಹೀಗೆ ೧೫.

ಈ ಮಿಥ್ಯಾದರ್ಶನ ಮೊದಲಾದವುಗಳು ಎಲ್ಲವೂ ಕೂಡಿ ಅಥವಾ ಬೇರೆ ಬೇರೆ ಬಂಧಕ್ಕೆ ಕಾರಣವಾಗುತ್ತವೆ. ಕೆಲವರಿಗೆ ಮೇಲೆ ಹೇಳಿದ ಎಲ್ಲಾ ಕಾರಣಗಳೂ ಕೆಲವರಿಗೆ ಅವಿರತಿ ಆದಿ ೪, ಕೆಲವರಿಗೆ ಪ್ರಮಾದ ಆದಿ ೩, ಕೆಲವರಿಗೆ ಕಷಾಯ ಆದಿ ೨ ಕೆಲವರಿಗೆ ಕೇವಲ ಯೋಗವೇ ಬಂಧಕ್ಕೆ ಕಾರಣವಾಗುತ್ತವೆ.

ಬಂಧದ ಲಕ್ಷಣ

## ಸಕಷಾಯತ್ವಾಜ್ಜೀವಃ ಕರ್ಮಣೋ ಯೋಗ್ಯಾ-ನ್ಪುದ್ಗಲಾನಾದತ್ತೇ ಸ ಬಂಧಃ ||೨||

ಅರ್ಥ—ಜೀವನು ಕಷಾಯಸಹಿತ ಪರಿಣಾಮದಿಂದ ಕರ್ಮಕ್ಕೆ ಯೋಗ್ಯ ವಾದಂಥಾ ಪುದ್ಗಲ ಪರಮಾಣುಗಳನ್ನು ಅಂದರೆ ಕಾರ್ಮಣ ವರ್ಗಣೆಯ ಪುದ್ಗಲ ಪರಮಾಣುಗಳನ್ನು ಸ್ವೀಕಾರ ಮಾಡುತ್ತಾನೆ. ಅದಕ್ಕೆ ಬಂಧವೆಂದು ಹೆಸರು.

---

* ೧ ಭಾವಶುದ್ಧಿ ೨ ಕಾಯಶುದ್ಧಿ ೩ ವಿನಯಶುದ್ಧಿ ೪ ಈರ್ಯಾಪಥಶುದ್ಧಿ ೫ ಭೈಕ್ಷ್ಯಶುದ್ಧಿ ೬ ಪ್ರತಿಷ್ಠಾಪನಾಶುದ್ಧಿ ೭ ಶಯನಾಸನ ಶುದ್ಧಿ ೮ ವಾಕ್ಯಶುದ್ಧಿ.

ವಿಶೇಷ—ಲೋಕದ ಎಲ್ಲಾ ಪ್ರದೇಶದಲ್ಲಿ ಕಾರ್ಮಣವರ್ಗಣೆಯು ತುಂಬಿದೆ. ಆತ್ಮನು ಕಷಾಯವಶೀಭೂತನಾದನಂತರ ಆ ವರ್ಗಣೆಗಳು ಬಂದು ಆತ್ಮನಲ್ಲಿ ಸಂಬಂಧ ಮಾಡಿಕೊಳ್ಳುತ್ತವೆ. ಇದಕ್ಕೇನೆಯೇ ಬಂಧ ವೆಂಬ ಹೆಸರು.

## ಬಂಧದ ಭೇದ

## ಪ್ರಕೃತಿಸ್ಥಿತ್ಯನುಭಾಗಪ್ರದೇಶಾಸ್ತದ್ವಿಧಯಃ ॥೩॥

ಅರ್ಥ— ಪ್ರಕೃತಿಬಂಧ, ಸ್ಥಿತಿಬಂಧ, ಅನುಭಾಗಬಂಧ ಮತ್ತು ಪ್ರದೇಶಬಂಧ ಈ ಪ್ರಕಾರವಾಗಿ ಬಂಧವು ನಾಲ್ಕು ಭೇದಗಳಿಂದ ವಿಭಾಗಿಸಲ್ಪಟ್ಟಿದೆ.

ಪ್ರಕೃತಿಬಂಧ—ಕರ್ಮಗಳ ಸ್ವಭಾವಕ್ಕೆ ಪ್ರಕೃತಿಬಂಧವೆಂದು ಹೆಸರು.

ಸ್ಥಿತಿಬಂಧ—ಜ್ಞಾನಾವರಣಾದಿಕರ್ಮಗಳು ಆತ್ಮನ ಜೊತೆಯಲ್ಲಿರುವಾಗ ತನ್ನ ಸ್ವಭಾವದಲ್ಲಿ ಸ್ಥಿರವಿರುವುದಕ್ಕೆ ಸ್ಥಿತಿಬಂಧವೆಂದು ಹೆಸರು.

ಅನುಭಾಗಬಂಧ— ಜ್ಞಾನಾವರಣಾದಿ ಕರ್ಮಗಳ ರಸವಿಶೇಷ ಅಥವಾ ಫಲಶೇಷದ ಅನುಭವಕ್ಕೆ ಅನುಭಾಗಬಂಧವೆನ್ನುತ್ತಾರೆ.

ಪ್ರದೇಶಬಂಧ—ಜ್ಞಾನಾವರಣಾದಿ ಕರ್ಮರೂಪ ಆಗುವ ಪುದ್ಗಲ ಸ್ಕಂಧಗಳ ಪರಮಾಣುಗಳಿಗೆ ಪ್ರದೇಶಬಂಧವೆಂದು ಹೇಳುತ್ತಾರೆ.

ಈ ನಾಲ್ಕು ಬಂಧಗಳಲ್ಲಿ ಪ್ರಕೃತಿ ಮತ್ತು ಪ್ರದೇಶ ಬಂಧಗಳು ಯೋಗದ ನಿಮಿತ್ತದಿಂದಲೂ, ಸ್ಥಿತಿ ಅನುಭಾಗಗಳು ಕಷಾಯದ ನಿಮಿತ್ತದಿಂದಲೂ ಆಗುತ್ತವೆ.

## ಪ್ರಕೃತಿಬಂಧದ ಭೇದ

## ಆದ್ಯೋ ಜ್ಞಾನದರ್ಶನಾವರಣವೇದನೀಯಮೋಹನೀಯಾಯುರ್ನಾಮಗೋತ್ರಾಂತರಾಯಾಃ ॥೪॥

ಅರ್ಥ-ಮೊದಲಿನ ಪ್ರಕೃತಿಬಂಧವು ಜ್ಞಾನಾವರಣ, ದರ್ಶನಾವರಣ, ವೇದನೀಯ, ಮೋಹನೀಯ, ಆಯು, ನಾಮ, ಗೋತ್ರ ಮತ್ತು ಅಂತರಾಯ ವೆಂದು ಎಂಟು ಭೇದಗಳಿಂದ ಯುಕ್ತವಾಗಿದೆ.

ಜ್ಞಾನಾವರಣ-ಆತ್ಮನ ಜ್ಞಾನ ಗುಣವನ್ನು ಆವರಿಸುವಂಥಾ ಕರ್ಮ ಪ್ರಕೃತಿಗೆ ಜ್ಞಾನಾವರಣವೆಂದು ಹೆಸರು.

ದರ್ಶನಾವರಣ-ಆತ್ಮನ ದರ್ಶನ ಗುಣವನ್ನು ಆವರಿಸಲಿಕ್ಕೆ ಕಾರಣವಾದದ್ದು ದರ್ಶನಾವರಣವು.

ಮೋಹನೀಯ-ಯಾವುದರ ಉದಯದಿಂದ ಜೀವನು ತನ್ನ ಸ್ವರೂಪವನ್ನು ಮರೆತು ಇತರರಲ್ಲಿ ಆತ್ಮೀಯ ಭಾವನೆಯನ್ನು ಮಾಡುತ್ತಾ, ಭ್ರಾಂತಿಗೊಳ್ಳುತ್ತಾನೆಯೋ ಅದಕ್ಕೆ ಮೋಹನೀಯವೆಂದು ಹೇಳುವರು.

ವೇದನೀಯ-ಯಾವುದರ ಉದಯದಿಂದ ಈ ಸಂಸಾರದಲ್ಲಿ ಸುಖದುಃಖಗಳಾಗುತ್ತವೆಯೋ ಅದಕ್ಕೆ ವೇದನೀಯವೆಂದು ಹೆಸರು.

ಆಯು-ಯಾವುದು ಈ ಜೀವನನ್ನು ಮನುಷ್ಯ, ತಿರ್ಯಂಚ, ನರಕ, ದೇವಗಳೆಂಬ ನಾಲ್ಕು ಗತಿಗಳ ಪೈಕಿ ಯಾವುದಾದರೊಂದು ಗತಿಯಲ್ಲಿ ನಿಲ್ಲಿಸುತ್ತದೋ ಅದಕ್ಕೆ ಆಯು ಎಂದು ಹೇಳುವರು.

ನಾಮ-ಯಾವುದರ ಉದಯದಿಂದ ಸಂಸಾರದಲ್ಲಿ ಶರೀರಾದಿಗಳ ರಚನೆಯಾಗುತ್ತದೋ ಅದಕ್ಕೆ ನಾಮಕರ್ಮವೆನ್ನುವರು.

ಗೋತ್ರ-ನೀಚ ಮತ್ತು ಉಚ್ಚ ಕುಲದಲ್ಲಿ ಜನ್ಮವು ಯಾವ ಕರ್ಮದ ಉದಯದಿಂದ ಆಗುತ್ತದೆಯೋ ಅದಕ್ಕೆ ಗೋತ್ರಕರ್ಮವೆನ್ನುವರು.

ಅಂತರಾಯ-ಯಾವುದರ ಉದಯದಿಂದ ದಾನ, ಲಾಭ, ಭೋಗ, ಉಪಭೋಗ, ವೀರ್ಯಗಳಲ್ಲಿ ವಿಘ್ನವು ಬರುವದೋ ಅದಕ್ಕೆ ಅಂತರಾಯವೆನ್ನುವರು.

ಈ ಎಂಟು ಕರ್ಮಗಳಲ್ಲಿ ಜ್ಞಾನಾವರಣ, ದರ್ಶನಾವರಣ, ಮೋಹನೀಯ ಮತ್ತು ಅಂತರಾಯವು ಜೀವನ ಅನುಜೀವಿಗುಣಗಳನ್ನು ಘಾತ

ಮಾಡುವುದರಿಂದ ಘಾತಿಯಾ ಕರ್ಮಗಳೆಂದೂ, ವೇದನೀಯ ಆಯುಃ ನಾಮ ಗೋತ್ರಗಳು ಜೀವನ ಪ್ರತಿಜೀವಿಗುಣಗಳನ್ನು ಘಾತಿಸುವುದರಿಂದ ಅಘಾತಿಯಾ ಕರ್ಮಗಳೆಂದೂ ಹೇಳುವರು.

ಪ್ರಕೃತಿ ಬಂಧದ ಉತ್ತರ ಭೇದಗಳು.

**ಪಂಚನವದ್ವ್ಯಷ್ಟಾವಿಂಶತಿಚತುರ್ದ್ವಿಚತ್ವಾರಿಂಶದ್-ದ್ವಿಪಂಚಭೇದಾ ಯಥಾಕ್ರಮಂ ॥೫॥**

ಅರ್ಥ–ಮೇಲೆ ಬರೆದ ಜ್ಞಾನಾವರಣಾದಿ ಕರ್ಮಗಳಲ್ಲಿ ಕ್ರಮದಿಂದ ೫, ೯, ೨, ೨೮, ೪, ೪೨, ೨ ಮತ್ತು ೫ ಈ ರೀತಿ ಉತ್ತರ ಭೇದಗಳಿವೆ.

ಜ್ಞಾನಾವರಣದ ೫ ಭೇದ.

**ಮತಿಶ್ರುತಾವಧಿಮನಃಪರ್ಯಯಕೇವಲಾನಾಂ ॥೬॥**

ಅರ್ಥ–ಮತಿಜ್ಞಾನಾವರಣ-ಮತಿಜ್ಞಾನವನ್ನು ಮುಚ್ಚುವುದು. ಶ್ರುತ ಜ್ಞಾನಾವರಣ-ಶ್ರುತಜ್ಞಾನವನ್ನು ಮುಚ್ಚುವುದು, ಅವಧಿಜ್ಞಾನಾವರಣ-ಅವಧಿಜ್ಞಾನವನ್ನು ಆವರಿಸುವ, ಮನಃಪರ್ಯಯಜ್ಞಾನಾವರಣ - ಮನಃ ಪರ್ಯಯ ಜ್ಞಾನವನ್ನು ಮುಚ್ಚುವ ಮತ್ತು ಕೇವಲಜ್ಞಾನಾವರಣ-ಕೇವಲ ಜ್ಞಾನವನ್ನು ಆವರಿಸುವ ಕರ್ಮಗಳೆಂದು ಜ್ಞಾನಾವರಣ ಕರ್ಮದಲ್ಲಿ ಐದು ಭೇದಗಳಾಗುತ್ತವೆ.

ದರ್ಶನಾವರಣದ ಭೇದಗಳು

**ಚಕ್ಷುರಚಕ್ಷುರವಧಿಕೇವಲಾನಾಂ ನಿದ್ರಾನಿದ್ರಾನಿದ್ರಾ ಪ್ರಚಲಾಪ್ರಚಲಾಪ್ರಚಲಾಸ್ತ್ಯಾನಗೃದ್ಧಯಶ್ಚ ॥೭॥**

ಅರ್ಥ—ಚಕ್ಷುಃದರ್ಶನಾವರಣ, ಅಚಕ್ಷುಃದರ್ಶನಾವರಣ, ಅವಧಿದರ್ಶನಾವರಣ, ಕೇವಲದರ್ಶನಾವರಣ, ನಿದ್ರಾ, ನಿದ್ರಾನಿದ್ರಾ, ಪ್ರಚಲಾ, ಪ್ರಚಲಾಪ್ರಚಲಾ

ಮತ್ತು ಸ್ತ್ಯಾನಗೃದ್ಧಿ, ಈ ಪ್ರಕಾರವಾಗಿ ಒಂಭತ್ತು ದರ್ಶನಾವರಣದ ಭೇದಗಳು.

ಚಕ್ಷುದರ್ಶನಾವರಣ-ಚಕ್ಷು ಇಂದ್ರಿಯ (ಕಣ್ಣು) ದಿಂದ ಆಗುವಂಥಾ ಸಾಮಾನ್ಯ ದರ್ಶನವನ್ನು ಯಾವ ಕರ್ಮವು ತಡೆಯುತ್ತದೆಯೋ ಅದಕ್ಕೆ ಚಕ್ಷ ದರ್ಶನಾವರಣವೆಂದು ಹೆಸರು.

ಅಚಕ್ಷುದರ್ಶನಾವರಣ-ಯಾವ ಕರ್ಮದ ಉದಯದಿಂದ ಚಕ್ಷು ಇಂದ್ರಿಯವನ್ನು ಬಿಟ್ಟು ಇತರ ಇಂದ್ರಿಯ ಮತ್ತು ಮನಸ್ಸಿನಿಂದಾಗುವ ಸಾಮಾನ್ಯ ದರ್ಶನವು ಆಗುವುದಿಲ್ಲವೋ ಅದಕ್ಕೆ ಅಚಕ್ಷುದರ್ಶನಾವರಣವೆಂದು ಹೆಸರು.

ಅವಧಿದರ್ಶನಾವರಣ—ಯಾವ ಕರ್ಮದ ಉದಯದಿಂದ ಅವಧಿಜ್ಞಾನದಿಂದ ಮೊದಲು ಆಗುವ ಸಾಮಾನ್ಯ ಅವಲೋಕನರೂಪದಲ್ಲಿರುವ ಅವಧಿದರ್ಶನವು ತಡೆಯಲ್ಪಡುತ್ತದೆಯೋ ಅದಕ್ಕೆ ಅವಧಿದರ್ಶನಾವರಣವೆಂದು ಹೆಸರು.

ಕೇವಲದರ್ಶನಾವರಣ —ಯಾವ ಕರ್ಮವು ಕೇವಲಜ್ಞಾನದೊಡನೆ ಆಗುವ ಕೇವಲದರ್ಶನವನ್ನು ತಡೆಯುತ್ತದೆಯೋ ಅದಕ್ಕೆ ಕೇವಲದರ್ಶನವೆಂದು ಹೆಸರು.

ನಿದ್ರಾ—ಮದ, ಶ್ರಮ, ಖೇದ ಆದಿಗಳನ್ನು ದೂರ ಮಾಡುವುದಕ್ಕೋಸ್ಕರ ಮಲಗುವುದಕ್ಕೆ ನಿದ್ರೆ ಎಂದು ಹೆಸರು.

ನಿದ್ರಾನಿದ್ರಾ-ನಿದ್ರೆಯ ನಂತರ ಮೇಲಿಂದ ಮೇಲೆ ನಿದ್ರೆ ಬರುವ ಗಾಢ ನಿದ್ರೆಗೆ ನಿದ್ರಾನಿದ್ರಾ ಎನ್ನುತ್ತಾರೆ. ಈ ಕರ್ಮದ ಕಾರಣದಿಂದ ಈ ಜೀವನು ಆ ಸಮಯದಲ್ಲಿ ಕಣ್ಣುಗಳನ್ನು ತೆರೆಯಲಿಕ್ಕೇನೆಯೋ ಅಸಮರ್ಥನಾಗಿರುತ್ತಾನೆ.

ಪ್ರಚಲಾ-ಕೂತುಕೊಂಡಲ್ಲಿಯೇ ಕಣ್ಣು ಮತ್ತು ಶರೀರದಲ್ಲಿ ವಿಕಾರವನ್ನುಂಟು ಮಾಡುವಂಥಾ ನಿದ್ರೆಗೆ ಮತ್ತು ಶೋಕ ಶ್ರಮ ಮೊದಲಾದವುಗಳಿಂದ ಉಂಟಾದ ನಿದ್ರೆಗೆ ಪ್ರಚಲಾ ಎಂದು ಹೇಳುತ್ತಾರೆ. ಈ ಪ್ರಚಲಾ ನಿದ್ರೆಗೆ ವಶೀಭೂತನಾದವನು ಮಲಗಿದ್ದರೂ ಎಚ್ಚರಿಕೆಯಲ್ಲಿ ಇರುತ್ತಾನೆ.

ಪ್ರಚಲಾಪ್ರಚಲಾ- ಪ್ರಚಲೆಯ ಮೇಲೆ ಪ್ರಚಲೆ ರೂಪವಾದ ನಿದ್ರೆಗೆ ಪ್ರಚಲಾಪ್ರಚಲಾ ಎಂದು ಹೆಸರು. ಈ ಸಮಯದಲ್ಲಿ ಆ ಜೀವನ ಮುಖ

ಭುಂದ ಜೊಲ್ಲುನೀರು ಇಳಿಯುವುದಲ್ಲದೆ ಅಂಗೋಪಾಂಗಗಳ ಚಲನೆಯಾಗುತ್ತದೆ.

ಸ್ತ್ಯಾನಗೃದ್ಧಿ -ಯಾವ ನಿದ್ರೆಯ ಕಾರಣದಿಂದ ಮಲಗಿದ್ದ ಸಮಯದಲ್ಲಿಯೂ ಅನೇಕ ಪ್ರಕಾರದ ಭಯಂಕರ ಕಾರ್ಯಗಳನ್ನು ಮಾಡುತ್ತಾನೆಯೋ ಮತ್ತು ಎದ್ದನಂತರ ಅವನಿಗೆ ಏನೂ ಗೊತ್ತಾಗುವುದಿಲ್ಲವೋ ಅದಕ್ಕೆ ಸ್ತ್ಯಾನಗೃದ್ಧಿ ಎಂದು ಹೆಸರು.

ವೇದನೀಯದ ಭೇದ

## ಸದಸದ್ವೇದ್ಯೇ

ಅರ್ಥ— ಸದ್ವೇದ್ಯ ಮತ್ತು ಅಸದ್ವೇದ್ಯ ಈ ಪ್ರಕಾರ ವೇದನೀಯ ಕರ್ಮದಲ್ಲಿ ಎರಡು ಭೇದಗಳಿವೆ,

ಸದ್ವೇದ್ಯ— ಯಾವುದರ ಉದಯದಿಂದ ದೇವಗತಿ ಮೊದಲಾದ ಸ್ಥಾನಗಳಲ್ಲಿ ಶಾರೀರಿಕ ಮತ್ತು ಮಾನಸಿಕ ಸುಖಗಳು ಪ್ರಾಪ್ತವಾಗುತ್ತವೆಯೋ ಅದಕ್ಕೆ ಸದ್ವೇದ್ಯವೆಂದು ಹೆಸರು. ಇದಕ್ಕೆ ಸಾತಾವೇದನೀಯ ಎಂದೂ ಹೇಳುತ್ತಾರೆ.

ಅಸದ್ವೇದ್ಯ—ಯಾವುದರ ಉದಯದಿಂದ ನರಕಾದಿ ಗತಿಗಳಲ್ಲಿ ಅನೇಕ ಪ್ರಕಾರದ ದುಃಖಗಳಾಗುತ್ತವೆಯೋ ಆದಕ್ಕೆ ಅಸದ್ವೇದ್ಯ ಎಂದು ಹೆಸರು. ಇದಕ್ಕೆ ಅಸಾತಾವೇದನೀಯವೆಂದೂ ಹೇಳುತ್ತಾರೆ.

ಮೋಹನೀಯದ ಭೇದ.

## ದರ್ಶನಚಾರಿತ್ರಮೋಹನೀಯಾಕಷಾಯಕಷಾಯವೇದನೀಯಾಖ್ಯಾಸ್ತ್ರಿದ್ವಿನವಷೋಡಶಭೇದಾಃ ಸಮ್ಯಕ್ತ್ವಮಿಥ್ಯಾತ್ವತದುಭಯಾನ್ಯಕಷಾಯಕಷಾಯೌಹಾಸ್ಯರತ್ಯರತಿಶೋಕಭಯಜುಗುಪ್ಸಾಸ್ತ್ರೀಪುಂನಪುಂಸಕವೇದಾ ಅನಂತಾನುಬಂಧ್ಯಪ್ರತ್ಯಾಖ್ಯಾನಪ್ರತ್ಯಾಖ್ಯಾನಸಂಜ್ವಲನವಿಕಲ್ಪಾಶ್ಚೈಕಶಃ ಕ್ರೋಧಮಾನಮಾಯಾಲೋಭಾಃ ॥೯॥

ಅರ್ಥ— ದರ್ಶನ ಮೋಹನೀಯ, ಚಾರಿತ್ರ ಮೋಹನೀಯ, ಕಷಾಯ ವೇದನೀಯ, ಮತ್ತು ಅಕಷಾಯ ವೇದನೀಯ ಈ ಪ್ರಕಾರ ಮೋಹನೀಯ ಕರ್ಮದಲ್ಲಿ ನಾಲ್ಕು ಭೇದಗಳಿವೆ. ಇವು ಕ್ರಮದಿಂದ ಮೂರು, ಎರಡು, ಒಂಭತ್ತು ಮತ್ತು ಹದಿನಾರು ಭೇದಗಳಾಗುತ್ತವೆ. ಸಮ್ಯಕ್ತ್ವ ಮಿಥ್ಯಾತ್ವ ಮತ್ತು ಸಮ್ಯಙ್ಮಿಥ್ಯಾತ್ವ ಇವು ಮೂರು ದರ್ಶನ ಮೋಹನೀಯ ಕರ್ಮದ ಭೇದಗಳು. ಚಾರಿತ್ರಮೋಹನೀಯದಲ್ಲಿ ಕಷಾಯ ವೇದನೀಯ, ಅಕಷಾಯವೇದನೀಯಗಳೆಂದು ಎರಡು ಭೇದ.

ಹಾಸ್ಯ, ರತಿ, ಅರತಿ, ಶೋಕ, ಭಯ ಜುಗುಪ್ಸಾ, ಸ್ತ್ರೀವೇದ, ಪುಂವೇದ, ನಪುಂಸಕವೇದವೆಂಬ ಒಂಭತ್ತು ಭೇದಗಳು ಅಕಷಾಯವೇದನೀಯದಲ್ಲಿವೆ.

ಕಷಾಯ ವೇದನೀಯದಲ್ಲಿ ಅನಂತಾನುಬಂಧಿ, ಅಪ್ರತ್ಯಾಖ್ಯಾನ, ಪ್ರತ್ಯಾಖ್ಯಾನ, ಮತ್ತು ಸಂಜ್ವಲನ ಇವುಗಳಲ್ಲಿ ಕ್ರೋಧ, ಮಾನ, ಮಾಯಾ ಮತ್ತು ಲೋಭಗಳೆಂದು ಒಟ್ಟು ೧೬ ಭೇದಗಳಾಗುತ್ತವೆ.

ವಿಶೇಷ—ಮುಖ್ಯವಾಗಿ ಮೋಹನೀಯ ಕರ್ಮವು ಎರಡು ಭೇದವಾಗಿದೆ. ೧ ದರ್ಶನ ಮೋಹನೀಯ ೨ ಚಾರಿತ್ರ ಮೋಹನೀಯ. ದರ್ಶನ ಮೋಹನೀಯದಲ್ಲಿ ಮೂರು ಭೇದಗಳು. ಚಾರಿತ್ರಮೋಹನೀಯದಲ್ಲಿ ೨೫ ಭೇದಗಳೂ ಆಗಿ ಒಟ್ಟು ೨೮ ಭೇದಗಳು ಮೋಹನೀಯ ಕರ್ಮದಲ್ಲಿ ಆಗುತ್ತವೆ.

ಮಿಥ್ಯಾತ್ವ— ಯಾವ ಕರ್ಮದ ಉದಯದಿಂದ ಸರ್ವಜ್ಞನಿಂದ ಹೇಳಲ್ಪಟ್ಟ ಧರ್ಮದಲ್ಲಿ ವಿಶ್ವಾಸವಾಗುವುದಿಲ್ಲವೋ ಅಂದರೆ ಅತತ್ವಶ್ರದ್ಧಾನವಾಗುತ್ತದೋ ಅದಕ್ಕೆ ಮಿಥ್ಯಾತ್ವವೆಂದು ಹೆಸರು.

ಸಮ್ಯಕ್ತ್ವ— ಯಾವ ಕರ್ಮದ ಉದಯದಿಂದ ಸಮ್ಯಗ್ದರ್ಶನದಲ್ಲಿ ದೋಷ ಉತ್ಪನ್ನವಾಗುತ್ತದೋ ಅದಕ್ಕೆ ಸಮ್ಯಕ್ತ್ವ ಪ್ರಕೃತಿ ಎಂದು ಹೆಸರು.

ಸಮ್ಯಙ್ಮಿಥ್ಯಾತ್ವ— ಯಾವ ಪ್ರಕೃತಿಯ ಉದಯದಿಂದ ಮಿಶ್ರರೂಪ

ಪರಿಣಾಮ [ಮೊಸರು ಬೆಲ್ಲದ ಮಿಶ್ರಣದಿಂದುಂಟಾದ ಸ್ವಾದದಂತೆ] ವಾಗುತ್ತದೋ ಅದಕ್ಕೆ ಸಮ್ಯಗ್ಮಿಥ್ಯಾತ್ವವೆಂದೆನ್ನುವರು.

ಹಾಸ್ಯ—ನಗಾಡುವಿಕೆಗೆ ಕಾರಣವಾದ ನೋಕಷಾಯ

ರತಿ—ವಿಷಯಗಳಲ್ಲಿ ಅನುರಾಗಕ್ಕೆ ಕಾರಣವಾದ ಕರ್ಮ.

ಅರತಿ — ವಿಷಯಗಳಲ್ಲಿ ಅನುರಾಗವಾಗದಿರಲಿಕ್ಕೆ ಕಾರಣವಾದ ಕರ್ಮ.

ಶೋಕ—ಶೋಕ, ಚಿಂತೆ, ದುಃಖ ಮೊದಲಾದವುಗಳಿಗೆ ಕಾರಣ

ಭಯ—ಇದರ ಉದಯದಿಂದ ಭಯವಾಗುತ್ತದೆ.

ಜುಗುಪ್ಸಾ—ಇದರ ಉದಯದಿಂದ ತಿರಸ್ಕಾರವಾಗುತ್ತದೆ.

ಸ್ತ್ರೀವೇದ— ಇದರ ಉದಯದಿಂದ ಪುರುಷರಲ್ಲಿ ಕ್ರೀಡಿಸುವ ಇಚ್ಛೆ ಆಗುತ್ತದೆ.

ಪುಂವೇದ— ಇದರ ಉದಯದಿಂದ ಸ್ತ್ರೀಯರಲ್ಲಿ ಕ್ರೀಡಿಸುವ ಇಚ್ಛೆ ಆಗುತ್ತದೆ.

ನಪುಂಸಕವೇದ— ಇದರ ಉದಯದಿಂದ ಸ್ತ್ರೀಪುರುಷರಿಬ್ಬರಲ್ಲಿ ರಮಿಸುವ ಇಚ್ಛೆಯಾಗುತ್ತದೆ.

ಅನಂತಾನುಬಂಧಿಕ್ರೋಧ ಮಾನ ಮಾಯಾ ಲೋಭ — ಯಾವುದರ ಉದಯದಿಂದ ಶುದ್ಧಾತ್ಮಸ್ವರೂಪದಿಂದ ಕೂಡಿದ ಸ್ವರೂಪಾಚರಣಚಾರಿತ್ರ ವಾಗುವುದಿಲ್ಲವೋ ಅದಕ್ಕೆ ಅನಂತಾನುಬಂಧಿ ಎಂದು ಹೆಸರು. ಅನಂತ ಸಂಸಾರಕ್ಕೆ ಕಾರಣವಾಗಿರುವುದರಿಂದ ಮಿಥ್ಯಾತ್ವಕ್ಕೆ ಅನಂತಾನುಬಂಧಿ ಎಂದು ಹೇಳುತ್ತಾರೆ. ಅದರೊಡನೆಯೇ ಈ ಕಷಾಯಗಳ ಬಂಧವಾಗುವು ದರಿಂದ ಇವುಗಳಿಗೆ ಅನಂತಾನುಬಂಧಿಗಳೆಂದು ಹೆಸರು.

ಅಪ್ರತ್ಯಾಖ್ಯಾನಾವರಣ ಕ್ರೋಧ ಮಾನ ಮಾಯಾ ಲೋಭ— ಯಾವು ದರ ಉದಯದಿಂದ ದೇಶಚಾರಿತ್ರವಾಗುವುದಿಲ್ಲವೋ ಅದಕ್ಕೆ ಅಪ್ರತ್ಯಾಖ್ಯಾನಾ ವರಣವೆನ್ನುವರು.

ಪ್ರತ್ಯಾಖ್ಯಾನಾವರಣ ಕ್ರೋಧ ಮಾನ ಮಾಯಾ ಲೋಭ— ಯಾವುದರ ಉದಯದಿಂದ ಸಕಲ ಚಾರಿತ್ರವಾಗುವುದಿಲ್ಲವೋ ಆದಕ್ಕೆ ಪ್ರತ್ಯಾಖ್ಯಾನಾವರಣವೆಂದು ಹೇಳುತ್ತಾರೆ.

ಸಂಜ್ವಲನ ಕ್ರೋಧ ಮಾನ ಮಾಯಾ ಲೋಭ— ಯಾವುದರ ಉದಯದಿಂದ ಯಥಾಖ್ಯಾತ ಚಾರಿತ್ರವಾಗುವುದಿಲ್ಲವೋ ಆದಕ್ಕೆ ಸಂಜ್ವಲನವೆನ್ನುವರು. ಈ ಕಷಾಯವು ಸಮ್ ಅಂದರೆ ಸಂಯಮದೊಡನೆಯೇ ಜ್ವಲಿತ ಅಂದರೆ ಪ್ರಜ್ವಲಿತವಾಗಿರುತ್ತದೆ. ಅದಕ್ಕೋಸ್ಕರ ಇದಕ್ಕೆ ಸಂಜ್ವಲನ ಎಂದು ಹೆಸರು.

ಈ ಕಷಾಯಗಳಲ್ಲಿ ಕ್ರಮದಿಂದ ಮಂದ ಪರಿಣಾಮವಿದೆ.

### ಆಯುಃಕರ್ಮದ ಭೇದ.

## ನಾರಕತೈರ್ಯಗ್ಯೋನಮಾನುಷದೈವಾನಿ॥೧೦॥

ಅರ್ಥ— ನರಕಾಯು, ತಿರ್ಯಗಾಯು, ಮಾನುಷಾಯು, ದೇವಾಯು ಈ ಪ್ರಕಾರವಾಗಿ ಆಯು ಕರ್ಮದಲ್ಲಿ ನಾಲ್ಕು ಭೇದಗಳು.

ನರಕಾಯು— ಯಾವ ಕರ್ಮದ ಉದಯದಿಂದ ಈ ಜೀವನುನಾರಕೀ ಶರೀರವನ್ನು ಪಡೆಯುತ್ತಾನೆಯೋ ಆದಕ್ಕೆ ನಾರಕಾಯುವೆಂದು ಹೆಸರು. ಇದೇ ಪ್ರಕಾರವಾಗಿ ಇತರ ಆಯುಗಳನ್ನು ತಿಳಿಯಬೇಕು.

### ನಾಮ ಕರ್ಮದ ಭೇದ

೪ ೫ ೫ ೩ ೨ ೫
## ಗತಿಜಾತಿಶರೀರಾಂಗೋಪಾಂಗನಿರ್ಮಾಣಬಂಧನ—

೫ ೬ ೬ ೮ ೫ ೨ ೫
## ಸಂಘಾತಸಂಸ್ಥಾನಸಂಹನನಸ್ಪರ್ಶರಸಗಂಧವರ್ಣಾನು

೪

ಪೂರ್ವ್ಯಾಗುರುಲಘೂಪಘಾತಪರಘಾತಾತಪೋ

೨

ದ್ಯೋತೋಚ್ಛ್ವಾಸವಿಹಾಯೋಗತಯಃಪ್ರತ್ಯೇಕಶರೀರ ತ್ರಸಸುಭಗಸುಸ್ವರಶುಭಸೂಕ್ಷ್ಮಪರ್ಯಾಪ್ತಿಸ್ಥಿರಾದೇಯಯಶಃಕೀರ್ತಿಸೇತರಾಣಿತೀರ್ಥಕರತ್ವಂ ಚ॥೧೧॥

ಅರ್ಥ–ಗತಿ, ಜಾತಿ, ಶರೀರ, ಅಂಗೋಪಾಂಗ, ನಿರ್ಮಾಣ, ಬಂಧನ, ಸಂಘಾತ, ಸಂಸ್ಥಾನ, ಸಂಹನನ, ಸ್ಪರ್ಶ, ರಸ, ಗಂಧ, ವರ್ಣ ಆನುಪೂರ್ವ್ಯ, ಅಗುರುಲಘು, ಉಪಘಾತ, ಪರಘಾತ, ಆತಪ, ಉದ್ಯೋತ ಉಚ್ಛ್ವಾಸ, ವಿಹಾಯೋಗತಿ ಈ ೨೧ ಮತ್ತು, ಪ್ರತ್ಯೇಕಶರೀರ, ತ್ರಸ, ಸುಭಗ, ಸುಸ್ವರ, ಶುಭ, ಸೂಕ್ಷ್ಮ, ಪರ್ಯಾಪ್ತಿ, ಸ್ಥಿರ, ಆದೇಯ, ಯಶಃಕೀರ್ತಿ. ಇವು ೧೦ ಮತ್ತು ಇವುಗಳ ವಿಪರೀತವಾದ ಸಾಧಾರಣ ಸ್ಥಾವರ, ದುರ್ಭಗ, ದುಃಸ್ವರ, ಅಶುಭ, ಸ್ಥೂಲ, ಅಪರ್ಯಾಪ್ತ, ಅಸ್ಥಿರ, ಅನಾದೇಯ, ಅಯಶಃಕೀರ್ತಿ ಈ ೧೦ ಮತ್ತು ತೀರ್ಥಕರತ್ವ ಹೀಗೆ ೪೨ ಪ್ರಕೃತಿಗಳು ನಾಮ ಕರ್ಮದ ಭೇದಗಳು.

೧ ಗತಿ-ಯಾವುದರ ಉದಯದಿಂದ ಈ ಜೀವನು ಎರಡನೇ ಭವವನ್ನು ಧಾರಣೆ ಮಾಡುತ್ತಾನೆಯೋ ಅದಕ್ಕೆ ಗತಿನಾಮಕರ್ಮವೆಂದು ಹೆಸರು. ಇದರಲ್ಲಿ ನಾಲ್ಕು ಭೇದಗಳಿವೆ. ನರಕಗತಿ, ದೇವಗತಿ, ಮನುಷ್ಯಗತಿ ಮತ್ತು ತಿರ್ಯಂಚಗತಿ. ಯಾವುದರ ಉದಯದಿಂದ ಈ ಜೀವನಿಗೆ ನರಕಪರ್ಯಾಯವು ಪ್ರಾಪ್ತವಾಗುತ್ತದೆಯೋ ಅದಕ್ಕೆ ನರಕಗತಿ ಎಂದು ಹೇಳುತ್ತಾರೆ. ಹೀಗೆಯೇ ಇನ್ನೂ ಇತರ ಗತಿಗಳ ವಿಷಯದಲ್ಲಿ ತಿಳಿಯಬೇಕು.

೨ ಜಾತಿ–ಯಾವುದರ ಉದಯದಿಂದ ನರಕಾದಿ ಪರ್ಯಾಯಗಳಲ್ಲಿ ಸಮಾನತೆಯಿಂದ ಏಕರೂಪತ್ವವನ್ನು ಹೊಂದುತ್ತಾನೆಯೋ ಅದಕ್ಕೆ ಜಾತಿ ನಾಮಕರ್ಮ ಎಂದು ಹೆಸರು. ಇದರಲ್ಲಿ ೫ ಭೇದಗಳಿವೆ. ೧ ಏಕೇಂದ್ರಿಯ ಜಾತಿ ೨ ದ್ವೀಂದ್ರಿಯಜಾತಿ ೩ ತ್ರೀಂದ್ರಿಯಜಾತಿ ೪ ಚತುರಿಂದ್ರಿಯ ಜಾತಿ ೫ ಪಂಚೇಂದ್ರಿಯಜಾತಿ. ಯಾವ ಕರ್ಮದ ಉದಯದಿಂದ ಜೀವನಿಗೆ ಏಕೇಂ

ದ್ರಿಯಜಾತಿ ಎಂದು ಹೆಸರು. ಹೀಗೆಯೇ ಮುಂದಿನ ಜಾತಿಗಳನ್ನೂ ತಿಳಿಯಬೇಕು.

೩ ಶರೀರ— ಯಾವ ಕರ್ಮದ ಉದಯದಿಂದ ಜೀವನಿಗೆ ಶರೀರದ ರಚನೆಯಾಗುತ್ತದೆಯೋ ಅದಕ್ಕೆ ಶರೀರ ನಾಮಕರ್ಮ ಎಂದು ಹೆಸರು. ಇದರಲ್ಲಿ ೫ ಭೇದಗಳಿವೆ. ೧ ಔದಾರಿಕ ಶರೀರ ನಾಮಕರ್ಮ. ೨ ವೈಕ್ರಿಯಿಕ ಶರೀರ ನಾಮಕರ್ಮ. ೩. ಆಹಾರಕ ಶರೀರ ನಾಮಕರ್ಮ. ೪ ತೈಜಸ ಶರೀರ ನಾಮಕರ್ಮ. ೫ ಕಾರ್ಮಣ ಶರೀರ ನಾಮಕರ್ಮ. ಯಾವುದರ ಉದಯದಿಂದ ಔದಾರಿಕ ಶರೀರದ ರಚನೆಯಾಗುತ್ತದೆಯೋ ಅದಕ್ಕೆ ಔದಾರಿಕ ಶರೀರ ನಾಮಕರ್ಮ ಎಂದು ಹೇಳುತ್ತಾರೆ. ಹೀಗೆಯೇ ಇನ್ನಿತರ ಶರೀರಗಳ ವಿಷಯವಾಗಿಯೂ ತಿಳಿಯಬೇಕು.

೪ ಅಂಗೋಪಾಂಗ–ಯಾವುದರ ಉದಯದಿಂದ ಶರೀರದಲ್ಲಿ ಅಂಗ ಮತ್ತು ಉಪಾಂಗಗಳ ರಚನೆಯಾಗುತ್ತದೆಯೋ ಅದಕ್ಕೆ ಅಂಗೋಪಾಂಗ ನಾಮಕರ್ಮ ಎನ್ನುವರು. ಇದರಲ್ಲಿ ಮೂರು ಭೇದ. ೧ ಔದಾರಿಕ ಶರೀರಾಂಗೋಪಾಂಗ. ೨ ವೈಕ್ರಿಯಿಕ ಶರೀರಾಂಗೋಪಾಂಗ. ೩. ಆಹಾರಕ ಶರೀರಾಂಗೋಪಾಂಗ ಯಾವುದರ ಉದಯದಿಂದ ಔದಾರಿಕ ಶರೀರದ ಅಂಗೋಪಾಂಗಗಳ ರಚನೆಯಾಗುತ್ತದೆಯೋ ಅದಕ್ಕೆ ಔದಾರಿಕ ಶರೀರ ಅಂಗೋಪಾಂಗ ನಾಮಕರ್ಮವೆಂದು ಹೆಸರು. ಹೀಗೆಯೇ ಮುಂದಿನ ಭೇದಗಳನ್ನು ತಿಳಿಯಬೇಕು.

೫ ನಿರ್ಮಾಣ— ಯಾವ ಕರ್ಮದ ಉದಯದಿಂದ ಶರೀರದಲ್ಲಿ ಅಂಗೋಪಾಂಗ ರಚನೆಯು ಯಥಾಸ್ಥಾನ, ಯಥಾಪ್ರಮಾಣವಾಗಿ ಆಗುತ್ತದೆಯೋ ಅದಕ್ಕೆ ನಿರ್ಮಾಣನಾಮಕರ್ಮವೆನ್ನುವರು.

೬ ಬಂಧನ— ಯಾವ ಕರ್ಮದ ಉದಯದಿಂದ ಶರೀರನಾಮಕರ್ಮದಲ್ಲಿ ಸ್ವೀಕಾರ ಮಾಡಿದ ಪುದ್ಗಲಸ್ಕಂಧಗಳು ಪರಸ್ಪರ ಸಂಬಂಧವಾಗಿ ಜೋಡಿಸಲ್ಪಡುತ್ತವೆಯೋ ಅದಕ್ಕೆ ಬಂಧನನಾಮಕರ್ಮವೆಂದು ಹೆಸರು. ಇದರಲ್ಲಿ ಐದು ಭೇದಗಳಿವೆ. ೧ ಔದಾರಿಕ ಶರೀರಬಂಧನ ೨ ವೈಕ್ರಿಯಿಕ ಶರೀರ ಬಂಧನ ೩ ಆಹಾರಕ ಶರೀರಬಂಧನ ೪ ತೈಜಸಶರೀರಬಂಧನ ಮತ್ತು ೫ ಕಾರ್ಮಣಶರೀರಬಂಧನ. ಯಾವ ಕರ್ಮದ ಉದಯದಿಂದ ಔದಾರಿಕ ಶರೀರದಲ್ಲಿರುವ ಪರಮಾಣುಗಳನ್ನು ಗೋಡೆಯಲ್ಲಿರುವ ಇಟ್ಟಿಗೆ ಸುಣ್ಣ

ಮೊದಲಾದವುಗಳಂತೆ ಪರಸ್ಪರ ಬಂಧಿಸುತ್ತದೆಯೋ ಅದಕ್ಕೆ ಔದಾರಿಕ ಶರೀರ ಬಂಧನವೆಂದು ಹೇಳುತ್ತಾರೆ. ಹೀಗೆಯೇ ಮುಂದಿನ ಬಂಧನಗಳನ್ನು ತಿಳಿಯಬೇಕು.

೭ ಸಂಘಾತ— ಯಾವ ಕರ್ಮದ ಉದಯದಿಂದ ಔದಾರಿಕಾದಿ ಶರೀರಗಳ ಪ್ರದೇಶದಲ್ಲಿ ಛಿದ್ರರಹಿತವಾದ ಬಂಧವಾಗುತ್ತದೆಯೋ ಅದಕ್ಕೆ ಸಂಘಾತವೆಂದು ಹೆಸರು. ಇದರಲ್ಲಿ ಔದಾರಿಕಶರೀರಸಂಘಾತ ಮೊದಲಾದ ೫ ಭೇದಗಳಿವೆ.

೮ ಸಂಸ್ಥಾನ— ಯಾವಕರ್ಮದ ಉದಯದಿಂದ ಶರೀರದ ಆಕಾರ ವಾಗುತ್ತದೆಯೋ ಅದಕ್ಕೆ ಸಂಸ್ಥಾನ ನಾಮಕರ್ಮವೆಂದು ಹೆಸರು. ಇದರಲ್ಲಿ ೬ ಭೇದಗಳಿವೆ. ೧ ಸಮಚತುರಸ್ರನಾಮಕರ್ಮ. ೨ ನ್ಯಗ್ರೋಧಪರಿಮಂಡಲ ನಾಮಕರ್ಮ. ೩ ಸ್ವಾತಿಸಂಸ್ಥಾನ. ೪ ಕುಬ್ಜಕಸಂಸ್ಥಾನ. ೫ ವಾಮನಸಂಸ್ಥಾನ. ೬ ಹುಂಡಕಸಂಸ್ಥಾನ.

ಸಮಚತುರಸ್ರ— ಇದರ ಉದಯದಿಂದ ಜೀವನ ಶರೀರವು ಕೆಳಗೆ ಮೇಲೆ ಸಮಾನರೂಪವಾಗಿದ್ದು ಸುಂದರವಾಗಿರುತ್ತದೆ.

ನ್ಯಗ್ರೋಧಪರಿಮಂಡಲ— ಇದರ ಉದಯದಿಂದ ಶರೀರವು ವಟ ವೃಕ್ಷದಂತೆ ನಾಭಿಯಿಂದ ಕೆಳಗೆ ತೆಳ್ಳಗಾಗಿಯೂ ಮತ್ತು ನಾಭಿಯಿಂದ ಮೇಲೆ ದೊಡ್ಡದಾಗಿಯೂ ಇರುತ್ತದ.

ಸ್ವಾತಿಸಂಸ್ಥಾನ— ಇದರ ಉದಯದಿಂದ ಶರೀರವು ಸರ್ಪದಹುತ್ತ ದಂತೆ ಮೇಲೆ ಸಣ್ಣದು ಮತ್ತು ಕೆಳಗೆ ದೊಡ್ಡದಾಗಿ ಇರುತ್ತದೆ.

ಕುಬ್ಜಕಸಂಸ್ಥಾನ— ಇದರ ಉದಯದಿಂದ ಶರೀರವು ಎತ್ತು ತಗ್ಗು ಮತ್ತು ಬೆನ್ನಿನಲ್ಲಿ ದೊಡ್ಡ ಗಂಟಿನಹಾಗಿರುವ ಆಕಾರದಿಂದ ಕೂಡಿರುತ್ತದೆ.

ವಾಮನಸಂಸ್ಥಾನ— ಇದರ ಉದಯದಿಂದ ಶರೀರವು ಗಿಡ್ಡ ಆಕೃತಿ ಯಿಂದ ಕೂಡಿರುತ್ತದೆ.

ಹುಂಡಕಸಂಸ್ಥಾನ— ಇದರ ಉದಯದಿಂದ ಶರೀರವು ಯಾವುದೊಂದೂ ನಿಶ್ಚಿತ ಆಕಾರದಲ್ಲಿರುವುದಿಲ್ಲ,

೯ ಸಂಹನನ ನಾಮಕರ್ಮ— ಯಾವುದರ ಉದಯದಿಂದ ಅಸ್ಥಿಗಳ ಬಂಧನದಲ್ಲಿ ವಿಶೇಷತೆಯಿರುತ್ತದೆಯೋ ಅದಕ್ಕೆ ಸಂಹನನ ನಾಮಕರ್ಮವೆಂದು ಹೆಸರು. ಇದರಲ್ಲಿ ೬ ಭೇದಗಳಿವೆ. ವಜ್ರವೃಷಭನಾರಾಚ ಸಂಹನನ ೨ ವಜ್ರನಾರಾಚಸಂಹನನ ೩ ನಾರಾಚಸಂಹನನ ೪ ಅರ್ಧನಾರಾಚಸಂಹನನ ೫ ಕೀಲಕಸಂಹನನ ೬ ಅಸಂಪ್ರಾಪ್ತಾಸೃಪಾಟಿಕಾಸಂಹನನ.

ವಜ್ರವೃಷಭನಾರಾಚಸಂಹನನ— ಇದರ ಉದಯದಿಂದ ಶರೀರದ ಮೇಲ್ಪೈ ಕೀಲು ಮತ್ತು ಎಲುಬುಗಳು ವಜ್ರಮಯವಾಗಿರುತ್ತವೆ.

ವಜ್ರನಾರಾಚಸಂಹನನ— ಇದರ ಉದಯದಿಂದ ಕೀಲು ಮತ್ತು ಎಲುಬುಗಳು ವಜ್ರಮಯ ವಾಗಿರುತ್ತವೆ. ಮೇಲ್ಪೈ ವಜ್ರಮಯವಾಗಿರುವುದಿಲ್ಲ.

ನಾರಾಚಸಂಹನನ—ಇದರ ಉದಯದಿಂದ ಸಾಮಾನ್ಯಮೇಲ್ಪೈಮತ್ತು ಕೀಲುಗಳಿಂದ ಯುಕ್ತವಾದ ಎಲುಬುಗಳಿರುತ್ತವೆ.

ಅರ್ಧನಾರಾಚಸಂಹನನ—ಇದರ ಉದಯದಿಂದ ಎಲುಬುಗಳು ಕೀಲಿತವಾಗಿರುತ್ತವೆ,

ಕೀಲಕಸಂಹನನ—ಇದರ ಉದಯದಿಂದ ಎಲುಬುಗಳು ಕೀಲಿತವಾಗಿರುತ್ತವೆ.

ಅಸಂಪ್ರಾಪ್ತಾಸೃಪಾಟಿಕಾಸಂಹನನ—ಇದರ ಉದಯದಿಂದಎಲುಬುಗಳು ನರಗಳಿಂದ ಬದ್ಧವಾಗಿರುತ್ತವೆ. ಪರಸ್ಪರ ಕೀಲಿತವಾಗಿರುವುದಿಲ್ಲ.

೧೦ ಸ್ಪರ್ಶನಾಮ—ಯಾವುದರ ಉದಯದಿಂದ ಶರೀರವಲ್ಲಿ ಸ್ಪರ್ಶಗುಣ ಪ್ರಕಟವಾಗುತ್ತದೋ ಅದಕ್ಕೆ ಸ್ಪರ್ಶಗುಣ ನಾಮಕರ್ಮವೆಂದು ಹೆಸರು. ಇದರಲ್ಲಿ ೮ ಭೇದಗಳಿವೆ, ೧ ಮೃದು ೨ ಕಠೋರ ೩ ಗುರು ೪ ಲಘು ೫ ಶೀತ ೬ ಉಷ್ಣ ೭ ಸ್ನಿಗ್ಧ ೮ ರೂಕ್ಷ.

೧೧ ರಸ–ಇದರ ಉದಯದಿಂದ ರಸವು ಪ್ರಕಟವಾಗುತ್ತದೆ. ಇದರಲ್ಲಿ ೫ ಭೇದವಿವೆ, ೧ ತಿಕ್ತ (ಕಾರ) ೨ ಕಟು (ಕಹಿ) ೩ ಕಷಾಯ (ಒಗರು) ೪ ಆಮ್ಲ (ಹುಳಿ) ಮತ್ತು ೫ ಮಧುರ (ಸಿಹಿ).

೧೨ ಗಂಧ– ಇದರ ಉದಯದಿಂದ ಶರೀರದಲ್ಲಿ ಗಂಧವಾಗುತ್ತದೆ. ಇದರಲ್ಲಿ ೨ ಭೇದ ೧ ಸುಗಂಧ ೨ ದುರ್ಗಂಧ.

೧೩ ವರ್ಣ-ಇದರ ಉದಯದಿಂದ ಶರೀರದಲ್ಲಿ ವರ್ಣವಾಗುತ್ತದೆ. ಇದರಲ್ಲಿ ೫ ಭೇದಗಳಿವೆ. ೧ ಶುಕ್ಲ ೨ ಕೃಷ್ಣ ೩ ನೀಲ ೪ ರಕ್ತ ಮತ್ತು ೫ ಪೀತ.

೧೪ ಆನುಪೂರ್ವ್ಯ–ಯಾವ ಕರ್ಮದ ಉದಯದಿಂದ ವಿಗ್ರಹಗತಿಯಲ್ಲಿ ಪೂರ್ವದ ಮೊದಲಿನ ಶರೀರದ ಆಕಾರವೇ ಈ ಜೀವನಿಗೆ ಇರುತ್ತದೆಯೋ ಅದಕ್ಕೆ ಆನುಪೂರ್ವ್ಯವೆಂದು ಹೆಸರು. ಇದರಲ್ಲಿ ೪ ಭೇದಗಳಿವೆ. ೧ ನರಕಗತ್ಯಾನುಪೂರ್ವ್ಯ ೨ ತಿರ್ಯಗ್ಗತ್ಯಾನುಪೂರ್ವ್ಯ ೩ ಮನುಷ್ಯಗತ್ಯಾನುಪೂರ್ವ್ಯ ಮತ್ತು ೪ ದೇವಗತ್ಯಾನುಪೂರ್ವ್ಯ.

ಯಾವ ಸಮಯದಲ್ಲಿ ಈ ಜೀವನು ಮನುಷ್ಯಗತಿಯ ಆಯುಷ್ಯವನ್ನು ಮುಗಿಸಿಕೊಂಡು ನರಕಗತಿಗೆ ಹೋಗುತ್ತಾನೆಯೋ ಆ ಸಮಯದಲ್ಲಿ ಪೂರ್ವದ ಮನುಷ್ಯಗತಿಯ ಆಕಾರದಲ್ಲಿ ಈ ಜೀವನ ಪ್ರದೇಶಗಳಿರುತ್ತವೆ. ಅದಕ್ಕೆ ನರಕಗತ್ಯಾನುಪೂರ್ವ್ಯ ಎಂದು ಹೆಸರು. ಹೀಗೆಯೇ ಬೇರೆ ಆನುಪೂರ್ವ್ಯಗಳ ವಿಷಯದಲ್ಲಿ ತಿಳಿಯಬೇಕು.

೧೫ ಅಗುರುಲಘುನಾಮ–ಇದರ ಉದಯದಿಂದ ಶರೀರವು ಲೋಹ ಪಿಂಡದಂತೆ ಭಾರವಾಗಿಯೂ ಅರಳಿಯಂತೆ ಹಗುರವಾಗಿಯೂ ಆಗುವುದಿಲ್ಲ.

೧೬ ಉಪಘಾತ-ಯಾವ ಕರ್ಮದ ಉದಯದಿಂದ ತನ್ನ ಅಂಗಗಳಿಂದಲೇ ತನ್ನ ಘಾತವಾಗುತ್ತದೆಯೋ ಅದಕ್ಕೆ ಉಪಘಾತವೆಂದು ಹೆಸರು.

೧೭ ಪರಘಾತ-ಯಾವ ಕರ್ಮದ ಉದಯದಿಂದ ಬೇರೆಯವರನ್ನು ಘಾತಿಸುವ ಅಂಗೋಪಾಂಗಗಳಾಗುತ್ತವೆಯೋ ಅದಕ್ಕೆ ಪರಘಾತವೆಂದು ಹೆಸರು.

೧೮ ಆತಪ- ಯಾವ ಕರ್ಮದ ಉದಯದಿಂದ ಆತಪ ರೂಪವಾದ ಶರೀರವು ಪ್ರಾಪ್ತವಾಗುತ್ತದೆಯೋ ಅದಕ್ಕೆ ಆತಪವೆನ್ನುತ್ತಾರೆ. ಇದು ಸೂರ್ಯನ ವಿಮಾನದಲ್ಲಿ ಕಾಣುತ್ತದೆ.

೧೯ ಉದ್ಯೋತ- ಯಾವುದರ ಉದಯದಿಂದ ಉದ್ಯೋತ ರೂಪ ವಾದ ಶರೀರವಾಗುತ್ತದೆಯೋ ಅದಕ್ಕೆ ಉದ್ಯೋತವೆನ್ನುವರು. ಇದು ಚಂದ್ರನ ವಿಮಾನದಲ್ಲಿ ನೋಡಲಿಕ್ಕೆ ಸಿಗುವುದು.

೨೦ ಉಛ್ವಾಸ- ಇದರ ಉದಯದಿಂದ ಶರೀರದಲ್ಲಿ ಶ್ವಾಸೋಛ್ವಾಸ ಗಳಾಗುತ್ತವೆ.

೨೧ ವಿಹಾಯೋಗತಿ-ಯಾವುದರ ಉದಯದಿಂದ ಆಕಾಶದಲ್ಲಿ ಗಮನ ಆಗುತ್ತದೋ ಅದಕ್ಕೆ ವಿಹಾಯೋಗತಿ ಎಂದು ಹೆಸರು. ಇದರಲ್ಲಿ ಎರಡು ಭೇದ ೧ ಪ್ರಶಸ್ತವಿಹಾಯೋಗತಿ ೨ ಅಪ್ರಶಸ್ತವಿಹಾಯೋಗತಿ.

೨೨ ಪ್ರತ್ಯೇಕ ಶರೀರ-ಯಾವುದರ ಉದಯದಿಂದ ಒಂದು ಶರೀರಕ್ಕೆ ಒಬ್ಬನೇ ಜೀವನು ಸ್ವಾಮಿಯೋ ಅದಕ್ಕೆ ಪ್ರತ್ಯೇಕ ಶರೀರವೆಂದು ಹೆಸರು.

೨೩ ಸಾಧಾರಣ ಶರೀರ- ಯಾವುದರ ಉದಯದಿಂದ ಒಂದು ಶರೀ ರಕ್ಕೆ ಅನೇಕ ಜೀವರು ಸ್ವಾಮಿಗಳೋ ಅದಕ್ಕೆ ಸಾಧಾರಣ ಶರೀರವೆಂದು ಹೆಸರು.

೨೪ ತ್ರಸನಾಮ-ಯಾವುದರ ಉದಯದಿಂದ ದ್ವೀಂದ್ರಿಯಾದಿ ಜೀವ ಗಳಲ್ಲಿ ಜನ್ಮವಾಗುತ್ತದೆಯೋ ಅದಕ್ಕೆ ತ್ರಸವೆಂದು ಹೆಸರು.

೨೫ ಸ್ಥಾವರನಾಮ-ಯಾವುದರ ಉದಯದಿಂದ ಈ ಜೀವನು ಏಕೇಂ ದ್ರಿಯ ಪರ್ಯಾಯದಲ್ಲಿ ಹುಟ್ಟುವನೋ ಅದಕ್ಕೆ ಸ್ಥಾವರನಾಮ ಕರ್ಮ ವೆನ್ನುವರು.

೨೬ ಸುಭಗ— ಇದರ ಉದಯದಿಂದ ಬೇರೆಯವರಿಗೆ ತನ್ನಲ್ಲಿ ಪ್ರೇಮ ಉಂಟಾಗುವುದು.

೨೭ ದುರ್ಭಗ—ಇದರ ಉದಯದಿಂದ ತನ್ನಲ್ಲಿ ರೂಪಾದಿಗುಣಗಳಿದ್ದರೂ ಕೂಡ ಬೇರೆಯವರಿಗೆ ಅಪ್ರೀತಿ ಉಂಟಾಗುತ್ತದೆ.

೨೮ ಸುಸ್ವರ-ಇದರ ಉದಯದಿಂದ ಉತ್ತಮವಾದ ಸ್ವರದ ಪ್ರಾಪ್ತಿಯಾಗುತ್ತದೆ.

೨೯ ದುಸ್ವರ—ಇದರ ಉದಯದಿಂದ ಕೆಟ್ಟಸ್ವರವು ಪ್ರಾಪ್ತವಾಗುತ್ತದೆ.

೩೦ ಶುಭ-ಇದರ ಉದಯದಿಂದ ಶರೀರದಲ್ಲಿ ಸುಂದರ ಅವಯವಗಳಾಗುತ್ತವೆ

೩೧ ಅಶುಭ—ಇದರ ಉದಯದಿಂದ ಶರೀರದಲ್ಲಿ ಕುರೂಪ ಅವಯವಗಳಾಗುತ್ತವೆ.

೩೨ ಸೂಕ್ಷ್ಮ-ಯಾವ ಕರ್ಮದ ಉದಯದಿಂದ ಬೇರೆಯವರನ್ನು ತಡೆಯದಿರುವ ಮತ್ತು ಬೇರೆಯವರಿಂದ ತಡೆಯಲ್ಪಡದಿರುವ ಶರೀರವು ಆಗುತ್ತದೋ ಅದಕ್ಕೆ ಸೂಕ್ಷ್ಮವೆಂದು ಹೆಸರು.

೩೩ ಬಾದರ-ಯಾವ ಕರ್ಮದ ಉದಯದಿಂದ ಬೇರೆಯವರನ್ನು ತಡೆಯುವ, ಬೇರೆಯವರಿಂದ ತಡೆಯಲ್ಪಡುವ ಸ್ಥೂಲ ಶರೀರವು ಪ್ರಾಪ್ತವಾಗುತ್ತದೆಯೋ ಅದಕ್ಕೆ ಬಾದರವೆಂದು ಹೆಸರು.

೩೪ ಪರ್ಯಾಪ್ತಿ—ಇದರ ಉದಯದಿಂದ ತನಗೆ ಯೋಗ್ಯವಾದ ಪರ್ಯಾಪ್ತಿಯು ಪೂರ್ಣವಾಗುತ್ತದೆ. ಆಹಾರವರ್ಗಣೆ, ಭಾಷಾವರ್ಗಣೆ, ಮತ್ತು ಮನೋವರ್ಗಣೆಯ ಪರಮಾಣುಗಳನ್ನು ಶರೀರ ಇಂದ್ರಿಯಾದಿ ರೂಪದಲ್ಲಿ ಪರಿವರ್ತಿಸುವ ಶಕ್ತಿಯ ಪೂರ್ಣತೆಗೆ ಪರ್ಯಾಪ್ತಿ ಎಂದು ಹೇಳುತ್ತಾರೆ. ಇದರಲ್ಲಿ ೬ ಭೇದಗಳಿವೆ. ೧ ಆಹಾರ ಪರ್ಯಾಪ್ತಿ ೨ ಶರೀರ ಪರ್ಯಾಪ್ತಿ ೩ ಇಂದ್ರಿಯ ಪರ್ಯಾಪ್ತಿ ೪ ಶ್ವಾಸೋಚ್ಛ್ವಾಸ ಪರ್ಯಾಪ್ತಿ ೫ ಭಾಷಾ ಪರ್ಯಾಪ್ತಿ ೬ ಮನಃಪರ್ಯಾಪ್ತಿ. ಇವುಗಳಲ್ಲಿ ಏಕೇಂದ್ರಿಯ ಜೀವನಿಗೆ ಭಾಷಾ ಮತ್ತು ಮನಃಪರ್ಯಾಪ್ತಿಗಳನ್ನು ಬಿಟ್ಟು ಉಳಿದ ನಾಲ್ಕು ಪರ್ಯಾಪ್ತಿಗಳು,

ಅಸಂಜ್ಞಿ ಪಂಚೇಂದ್ರಿಯ ಜೀವನಿಗೆ ಮನಃಪರ್ಯಾಪ್ತಿಯನ್ನು ಬಿಟ್ಟು ಐದು ಪಂಚೇಂದ್ರಿಯಗಳು ಮತ್ತು ಸಂಜ್ಞಿಗಳಿಗೆ ಆರು ಪರ್ಯಾಪ್ತಿಗಳೂ ಇರುತ್ತವೆ. ಯಾವ ಜೀವನಿಗೆ ಶರೀರ ಪರ್ಯಾಪ್ತಿಯು ಪೂರ್ಣವಾಗುತ್ತದೋ ಅವನಿಗೆ ಪರ್ಯಾಪ್ತಕನೆಂದು ಹೇಳುವರು.

೩೫ ಅಪರ್ಯಾಪ್ತಿ—ಯಾವುದರ ಉದಯದಿಂದ ಈ ಜೀವನಿಗೆ ಒಂದು ಪರ್ಯಾಪ್ತಿಯೂ ಪೂರ್ಣವಾಗುವುದಿಲ್ಲವೋ ಅದಕ್ಕೆ ಅಪರ್ಯಾಪ್ತಿ ನಾಮ ಕರ್ಮವೆಂದು ಹೇಳುತ್ತಾರೆ. ಯಾವ ಜೀವನಿಗೆ ಪರ್ಯಾಪ್ತಿಗಳು ಪೂರ್ಣವಾಗುವುದಿಲ್ಲವೋ ಅವನಿಗೆ ಅಪರ್ಯಾಪ್ತಕನೆಂದು ಹೇಳುತ್ತಾರೆ. ಅಪರ್ಯಾಪ್ತಕರಲ್ಲಿ ಎರಡು ಭೇದ ೧ ನಿವೃತ್ಯಪರ್ಯಾಪ್ತಕ ೨ ಲಬ್ಧ್ಯಪ್ರರ್ಯಾಪ್ತಕ. ಯಾರಿಗೆ ಶರೀರ ಪರ್ಯಾಪ್ತಿಯು ಪೂರ್ಣವಾಗಲಿಲ್ಲವೋ ಆದರೆ ಶೀಘ್ರವೇ ನಿಶ್ಚಿತವಾಗಿ ಅದರ ಪೂರ್ಣತೆಯು ಆಗುತ್ತದೆಯೋ ಅವನು ನಿವೃತ್ತ್ಯಪರ್ಯಾಪ್ತಕನೆಂದು ಹೇಳಲ್ಪಡುತ್ತಾನೆ. ಯಾರಿಗೆ ಒಂದು ಪರ್ಯಾಪ್ತಿಯೂ ಪೂರ್ಣವಾಗಲಿಲ್ಲ. ಪೂರ್ಣವಾಗುವ ಸಂಭವವೂ ಇಲ್ಲ ಅವನು ಲಬ್ಧ್ಯಪರ್ಯಾಪ್ತಕನು.

೩೬ ಸ್ಥಿರ—ಯಾವ ಕರ್ಮದ ಉದಯದಿಂದ ಶರೀರದ ಧಾತು ಮತ್ತು ಉಪಧಾತುಗಳು ತಮ್ಮ ತಮ್ಮ ಸ್ಥಾನದಲ್ಲಿ ಸ್ಥಿರತೆಯನ್ನು ಹೊಂದಿ ಇರುತ್ತವೆಯೋ ಅದಕ್ಕೆ ಸ್ಥಿರನಾಮಕರ್ಮವೆಂದು ಹೆಸರು

೩೭ ಅಸ್ಥಿರ—ಇದರ ಉದಯದಿಂದ ಶರೀರದ ಧಾತು ಉಪಧಾತುಗಳು ತನ್ನ ತನ್ನ ಸ್ಥಾನಗಳಲ್ಲಿ ಸ್ಥಿರವಾಗಿರುವುದಿಲ್ಲ.

೩೮ ಆದೇಯ—ಇದರ ಉದಯದಿಂದ ಪ್ರಭೆಯಿಂದ ಯುಕ್ತವಾದ ಶರೀರದ ಪ್ರಾಪ್ತಿಯಾಗುತ್ತದೆ.

೩೯ ಅನಾದೇಯ—ಇದರ ಉದಯದಿಂದ, ಪ್ರಭೆಯಿಂದ ರಹಿತವಾದ ಶರೀರದ ಪ್ರಾಪ್ತಿಯಾಗುತ್ತದೆ.

೪೦ ಯಶಃಕೀರ್ತಿ—ಇದರ ಉದಯದಿಂದ ಸಂಸಾರದಲ್ಲಿ ಯಶಸ್ಸು ಕೀರ್ತಿ ಲಭಿಸುತ್ತದೆ.

೪೧ ಆಯುಶಃಕೀರ್ತಿ—ಇದರ ಉದಯುದಿಂದ ಸಂಸಾರದಲ್ಲಿ ನಿಂದ ಅಪಕೀರ್ತಿ ಉಂಟಾಗುತ್ತದೆ.

೪೨ ತೀರ್ಥಕರತ್ವ—ತೀರ್ಥಂಕರ ಪಧವಿಗೆ ಕಾರಣಭೂತವಾಧ ನಾಮ ಕರ್ಮಕ್ಕೆ ತೀರ್ಥಕರತ್ವವೆಂದು ಹೆಸರು.

### ಗೋತ್ರಕರ್ಮದ ಭೇದ

## ಉಚ್ಚೈರ್ನೀಚೈಶ್ಚ ॥೧೨॥

ಅರ್ಥ—ಗೋತ್ರ ಕರ್ಮದಲ್ಲಿ ಉಚ್ಚ ಗೋತ್ರ ಮತ್ತು ನೀಚಗೋತ್ರವೆಂದು ಎರಡು ವಿಧ. ಯಾವುದರ ಉದಯದಿಂದ ಲೋಕಮಾನ್ಯವಾದ ಕುಲಗಳಲ್ಲಿ ಜನ್ಮವಾಗುತ್ತದೋ ಅದಕ್ಕೆ ಉಚ್ಚ ಗೋತ್ರವೆಂದೂ, ಲೋಕ ನಿಂದ್ಯವಾದ ಕುಲದಲ್ಲಿ ಜನ್ಮವಾಗುವುದಕ್ಕೆ ನೀಚಗೋತ್ರವೆಂದೂ ಹೇಳುತ್ತಾರೆ.

### ಅಂತರಾಯ ಕರ್ಮದ ಭೇದ

## ದಾನಲಾಭಭೋಗೋಪಭೋಗವೀರ್ಯಾಣಾಂ

ಅರ್ಥ — ದಾನಾಂತರಾಯ, ಲಾಭಾಂತರಾಯ, ಭೋಗಾಂತರಾಯ ಉಪಭೋಗಾಂತರಾಯ, ಮತ್ತು ವೀರ್ಯಾಂತರಾಯ ಈ ಪ್ರಕಾರ ಅಂತರಾಯ ಕರ್ಮವು ೫ ಭೇದಗಳಿಂದ ಕೂಡಿದೆ. ಯಾವುದರ ಉದಯದಿಂದ ದಾನ ಕೊಡುವ ಇಚ್ಛೆ ಇದ್ದರೂ ಕೂಡ ದಾನವನ್ನು ಕೊಡುವುದಕ್ಕೆ ಆಗುವುದಿಲ್ಲವೋ ಅದಕ್ಕೆ ದಾನಾಂತರಾಯವೆಂದು ಹೆಸರು. ಹೀಗೆಯೇ ಮುಂದಿನ ಭೇದಗಳನ್ನು ತಿಳಿಯಬೇಕು.

### ಸ್ಥಿತಿಬಂಧದ ವರ್ಣನೆ

ಜ್ಞಾನಾವರಣ, ದರ್ಶನಾವರಣ, ವೇದನೀಯ ಮತ್ತು ಅಂತರಾಯದ

### ಉತ್ಕೃಷ್ಟಸ್ಥಿತಿ

## ಅದಿತಸ್ತಿಸೃಣಾಮಂತರಾಯಸ್ಯ ಚ ತ್ರಿಂಶತ್ಸಾಗರೋಪಮಕೋಟೀಕೋಟ್ಯಃ ಪರಾಸ್ಥಿತಿಃ ॥೧೪॥

ಅರ್ಥ—ಮೊದಲಿನ ಮೂರು ಅಂದರೆ ಜ್ಞಾನಾವರಣ, ದರ್ಶನಾವರಣ ಮತ್ತು ವೇದನೀಯ, ಅಂತರಾಯ ಈ ನಾಲ್ಕು ಕರ್ಮಗಳ ಉತ್ಕೃಷ್ಟ ಸ್ಥಿತಿಯು ಮೂವತ್ತು *ಕೋಟಾಕೋಟಿ ಸಾಗರ ಪ್ರಮಾಣವಾಗಿದೆ ಈ ಉತ್ಕೃಷ್ಟ ಸ್ಥಿತಿಯ ಬಂಧವು ಮಿಥ್ಯಾದೃಷ್ಟಿ ಸಂಜ್ಞಿಪಂಚೇಂದ್ರಿಯ ಜೀವಗಳಿಗೇ ಆಗುತ್ತದೆ.

ಮೋಹನೀಯಸ್ಥಿತಿ.

## ಸಪ್ತತಿರ್ಮೋಹನೀಯಸ್ಯ ||೧೫||

ಅರ್ಥ— ಮೋಹನೀಯ ಕರ್ಮದ ಉತ್ಕೃಷ್ಟ ಸ್ಥಿತಿಯು ಎಪ್ಪತ್ತು ಕೋಟಾಕೋಟಿಸಾಗರವಾಗಿರುತ್ತದೆ.

ನಾಮ ಮತ್ತು ಗೋತ್ರದ ಸ್ಥಿತಿ

## ವಿಂಶತಿರ್ನಾಮಗೋತ್ರಯೋಃ||೧೬||

ಅರ್ಥ—ನಾಮ ಮತ್ತು ಗೋತ್ರ ಕರ್ಮಗಳ ಉತ್ಕೃಷ್ಟ ಸ್ಥಿತಿಯು ಇಪ್ಪತುಕೋಟಾಕೋಟಿಸಾಗರವಾಗಿರುತ್ತದೆ.

ಆಯುಕರ್ಮದ ಸ್ಥಿತಿ

## ತ್ರಯಸ್ತ್ರಿಂಶತ್ಸಾಗರೋಪಮಾಣ್ಯಾಯುಷಃ ||೧೭||

ಅರ್ಥ— ಆಯುಷ್ಯ ಕರ್ಮದ ಉತ್ಕೃಷ್ಟ ಸ್ಥಿತಿಯು ೩೩ ಸಾಗರ ವರ್ಷಗಳಾಗಿದೆ.

ವೇದನೀಯದ ಜಘನ್ಯ ಸ್ಥಿತಿ

## ಅಪರಾ ದ್ವಾದಶಮುಹೂರ್ತಾ ವೇದನೀಯಸ್ಯ

*ಕೋಟಿಯಿಂದ ಕೋಟಿಗೆ ಗುಣಿಸಿ ಬರುವ ಗುಣಲಬ್ಧ ಕೋಟಾಕೋಟಿ ಎಂದು ಹೆಸರು.

ಅರ್ಥ— ವೇದನೀಯ ಕರ್ಮದ ಜಘನ್ಯ ಸ್ಥಿತಿಯು ಹನ್ನೆರಡು ಮುಹೂರ್ತಗಳೆಂದು ತಿಳಿಯಬೇಕು.

ನಾಮ ಮತ್ತು ಗೋತ್ರದ ಜಘನ್ಯ ಸ್ಥಿತಿ

ನಾಮಗೋತ್ರಯೋರಷ್ಟೌ ॥೧೯॥

ಅರ್ಥ— ನಾಮ ಮತ್ತು ಗೋತ್ರ ಕರ್ಮದ ಜಘನ್ಯಸ್ಥಿತಿಯು ಎಂಟು ಮುಹೂರ್ತಗಳೆಂದು ತಿಳಿಯಬೇಕು.

ಉಳಿದಕರ್ಮಗಳ ಜಘನ್ಯ ಸ್ಥಿತಿ.

ಶೇಷಾಣಾಮಂತರ್ಮುಹೂರ್ತಾ ॥೨೦॥

ಅರ್ಥ— ಉಳಿದ ಅಂದರೆ ಜ್ಞಾನಾವರಣ, ದರ್ಶನಾವರಣ, ಮೋಹನೀಯ, ಅಂತರಾಯ ಮತ್ತು ಆಯುಃಕರ್ಮದ ಜಘನ್ಯ ಸ್ಥಿತಿಯು ಅಂತರ್ಮುಹೂರ್ತವೆಂದು ತಿಳಿಯಬೇಕು.

ಅನುಭಾಗ ಬಂಧ

ವಿಪಾಕೋಽನುಭವಃ ॥೨೧॥

ಅರ್ಥ—ಕಷಾಯಗಳ ತೀವ್ರತೆ, ಮಂದತೆ, ಮತ್ತು ಮಧ್ಯಮಗತಿಗಳಿಂದಾಗುವ ಆಸ್ರವಗಲ್ಲಿಯೂ ವ್ಯತ್ಯಾಸವಾಗಿ ಆದರಿಂದಾಗುವ ವಿಶೇಷ ಪಾಕಕ್ಕೆ ವಿಪಾಕವೆಂದು ಹೇಳುತ್ತಾರೆ. ಅಥವಾ ದ್ರವ್ಯಕ್ಷೇತ್ರಕಾಲಭಾವಗಳ ನಿಮಿತ್ತದಿಂದ ನಾನಾ ಪ್ರಕಾರವಾಗಿ ಫಲಕೊಡುವ ಸಾಮರ್ಥ್ಯವನ್ನು ಪ್ರಾಪ್ತ ಮಾಡುವುದಕ್ಕೆ ವಿಪಾಕವೆಂದು ಹೇಳುತ್ತಾರೆ. ಇದಕ್ಕೇನೆ ಅನುಭಾಗಬಂಧವೆಂದೂ ಹೇಳುವರು. ಶುಭಪರಿಣಾಮಗಳು ಹೆಚ್ಚಿರಲು ಶುಭ ಪ್ರಕೃತಿಗಳಲ್ಲಿ ಅಧಿಕವೂ, ಅಶುಭ ಪ್ರಕೃತಿಗಳಲ್ಲಿ ಹೀನವೂ ಮತ್ತು ಅಶುಭ ಪರಿಣಾಮಗಳು ಹೆಚ್ಚಾಗಿರಲು ಅಶುಭ ಪ್ರಕೃತಿಗಳಲ್ಲಿ ಹೆಚ್ಚು ಮತ್ತು ಶುಭ ಪ್ರಕೃತಿಗಳಲ್ಲಿ ಹೀನವೂ ಆಗಿ ಅನುಭಾಗವಾಗುತ್ತದೆ.

## ಸ ಯಥಾನಾಮ ॥೨೨॥

ಅರ್ಥ— ಆ ಅನುಭಾಗ ಬಂಧವು ಕರ್ಮಗಳ ಹೆಸರಿನಂತೆಯೇ ಆಗುವದು. ಅಂದರೆ ಜ್ಞಾನಾವರಣ ಕರ್ಮದ ಅನುಭಾಗವು ಜ್ಞಾನವನ್ನು ತಡೆಯುವುದು. ದರ್ಶನಾವರಣದ ಅನುಭಾಗವು ದರ್ಶನವನ್ನು ತಡೆಯುವುದು ಹೀಗೆ ಇತರ ಕರ್ಮಗಳ ಅನುಭಾಗವೆಂಬು ತಿಳಿಯಬೇಕು,

## ತತಶ್ಚ ನಿರ್ಜರಾ ॥೨೩॥

ಅರ್ಥ— ಕರ್ಮಗಳು ಫಲ ಕೊಟ್ಟ ನಂತರ ಅವುಗಳ ನಿರ್ಜರೆಯಾಗುತ್ತದೆ. ಆದರೆ ಕರ್ಮಗಳು ಉದಯಕ್ಕೆ ಬಂದು ಆತ್ಮಪ್ರದೇಶದಿಂದು ಸ್ವಲ್ಪ ಸ್ವಲ್ಪವಾಗಿ ಬೇರೆಯಾಗುತ್ತವೆ,

ನಿರ್ಜರೆಯಲ್ಲಿ ಎರಡು ಭೇದವಿದೆ. ೧ ಸವಿಪಾಕನಿರ್ಜರೆ ೨ ಅವಿಪಾಕನಿರ್ಜರೆ. ಶುಭಾಶುಭ ಕರ್ಮಗಳು ತನ್ನ ಸ್ಥಿತಿಯನ್ನು ಪೂರ್ಣಮಾಡಿ ಉದಯಕ್ಕೆ ಬಂದು ಫಲವನ್ನು ಕೊಟ್ಟು ಆತ್ಮಪ್ರದೇಶದಿಂದ ಬೇರೆಯಾಗುವುದಕ್ಕೆ ಸವಿಪಾಕ ನಿರ್ಜರೆ ಎಂದು ಹೆಸರು. ಉದಯಕಾಲ ಬರದಿದ್ದರೂ ತಪಶ್ಚರ್ಯೆ ಮೊದಲಾದ ಕಾರಣಗಳಿಂದ ಕರ್ಮಗಳು ಮಧ್ಯದಲ್ಲಿಯೇ ಫಲಕೊಟ್ಟು ಹೋಗುವುದಕ್ಕೆ ಅವಿಪಾಕ ನಿರ್ಜರೆ ಎಂದು ಹೆಸರು.

### ಪ್ರದೇಶ ಬಂಧ

## ನಾಮಪ್ರತ್ಯಯಾಃ ಸರ್ವತೋ ಯೋಗವಿಶೇಷಾತ್ಸೂಕ್ಷ್ಮೈಕಕ್ಷೇತ್ರಾವಗಾಹಸ್ಥಿತಾಃ ಸರ್ವಾತ್ಮಪ್ರದೇಶೇಷ್ವನಂತಾನಂತ ಪ್ರದೇಶಾಃ ॥೨೪॥

ಅರ್ಥ—ನಾಮಪ್ರತ್ಯಯಾ— ಜ್ಞಾನಾವರಣಾದಿ ಕರ್ಮ ಪ್ರಕೃತಿಗಳಿಗೆ ಕಾರಣ ಸ್ವರೂಪ. ಎಲ್ಲಾ ಕಡೆಯಿಂದ ಸುತ್ತು ಎಲ್ಲಾ ಕಡೆಗಳಲ್ಲಿ ಮನ ವಚನ ಕಾಯಗಳೆಂಬ ಯೋಗವಿಶೇಷದಿಂದ ಸೂಕ್ಷ್ಮ ಏಕಕ್ಷೇತ್ರಾ

ವಗಾಹ ಸ್ವರೂಪದಲ್ಲಿರುವ ಸಂಪೂರ್ಣ ಆತ್ಮಪ್ರದೇಶದಲ್ಲಿ ಕರ್ಮರೂಪ ಪುದ್ಗಲಗಳ ಅನಂತಾನಂತ ಪ್ರದೇಶಗಳಿವೆ. ಅದಕ್ಕೆ ಪ್ರದೇಶಬಂಧ ವೆನ್ನುತ್ತಾರೆ.

ಭಾವಾರ್ಥ—ಈ ಆತ್ಮನ ಮನ ವಚನ ಕಾಯಗಳ ದೆಸೆಯಿಂದ ಆಗುವ ಪರಿಣಾಮಗಳಿಂದ ತ್ರಿಕಾಲದಲ್ಲಿ ಬದ್ಧವಾಗುವ ಜ್ಞಾನಾವರಣಾದಿ ಕರ್ಮಗಳಿಗೆ ಕಾರಣಭೂತ ಮತ್ತು ಆತ್ಮನ ಎಲ್ಲಾ ಪ್ರದೇಶಗಳಲ್ಲಿಯೂ ವ್ಯಾಪ್ತವಾಗಿ ಕರ್ಮ ರೂಪವನ್ನು ಮತ್ತು ಆತ್ಮನ ಪ್ರದೇಶದಲ್ಲಿ ಕ್ಷೀರ ನೀರಿನಂತೆ ಏಕರೂಪವಾಗಿ ಸ್ಥಿರವಾಗಿರುವ ಅನಂತಾನಂತ ಪ್ರದೇಶಗಳ ಪ್ರಮಾಣದಿಂದ ಪರಿಮಿತವಾಗಿರುವ ಪ್ರದೇಶಬಂಧರೂಪವಾದ ಪುದ್ಗಲಸ್ಕಂಧಗಳಿಗೆ ಪ್ರದೇಶಬಂಧವೆನ್ನುವುದು.

## ಪುಣ್ಯಪ್ರಕೃತಿಗಳು

## ಸದ್ವೇದ್ಯಶುಭಾಯುರ್ನಾಮಗೋತ್ರಾಣಿ ಪುಣ್ಯಂ ॥

ಅರ್ಥ—ಸಾತಾವೇದನೀಯ, ಶುಭಆಯು, ಶುಭನಾಮ, ಶುಭ ಗೋತ್ರ ಇವು ಪುಣ್ಯಪ್ರಕೃತಿಗಳು.

ಘಾತಿಯಾ ಕರ್ಮದ ಕೆಲವು ಪ್ರಕೃತಿಗಳು ಹಾಗೂ ಅಘಾತಿಯಾ ಕರ್ಮದ ಕೆಲವು ಪ್ರಕೃತಿಗಳು ಪುಣ್ಯ ಪ್ರಕೃತಿಗಳು. ಕೆಲವು ಪಾಪ ಪ್ರಕೃತಿ ಗಳು.

ಸಾತಾವೇದನೀಯ, ತಿರ್ಯಂಚ, ಮನುಷ್ಯ ದೇವವೆಂಬ ಮೂರು ಆಯು ಉಚ್ಚ ಗೋತ್ರ, ಮನುಷ್ಯಗತಿ, ಮನುಷ್ಯಗತ್ಯಾನುಪೂರ್ವ್ಯ, ದೇವಗತಿ ದೇವಗತ್ಯಾನುಪೂರ್ವಿ, ಪಂಚೇಂದ್ರಿಯಜಾತಿ, ಐದು ಶರೀರ, ಐದು ಬಂಧನ, ಐದು ಸಂಘಾತ, ಮೂರು ಅಂಗೋಪಾಂಗ, ೨೦ ವರ್ಣ ಮೊದಲಾದವುಗಳು, ಸಮಚತುರಸ್ರಸಂಸ್ಥಾನ, ವಜ್ರನಾರಾಚಸಂಹನನ, ಅಗುರುಲಘು, ಪರಘಾತ, ಉಛ್ವಾಸ, ಆತಪ, ಉದ್ಯೋತ, ಪ್ರಶಸ್ತ ವಿಹಾಯೋ ಗತಿ, ತ್ರಸ, ಬಾದರ, ಪರ್ಯಾಪ್ತಿ; ಪ್ರತ್ಯೇಕ ಶರೀರ, ಸ್ಥಾವರ, ಶುಭ, ಸುಭಗ, ಸುಸ್ವರ, ಆದೇಯ, ಯಶಃಕೀರ್ತಿ, ಮತ್ತು ತೀರ್ಥಂಕರತ್ವ ಈ ೬೮ ಪ್ರಕೃತಿಗಳು ಪುಣ್ಯಪ್ರಕೃತಿಗಳು.

ಪಾಪಪ್ರಕೃತಿಗಳು.

## ಅತೋಽನ್ಯತ್ಪಾಪಂ ||೨೬||

ಘಾತಿಯಾ ಕರ್ಮದ ೪೭ ಪ್ರಕೃತಿಗಳು, ನೀಚಗೋತ್ರ, ಅಸಾತಾ ವೇದನೀಯ, ನರಕಗತಿ, ನರಕಗತ್ಯಾನುಪೂರ್ವಿ, ತಿರ್ಯಂಚಗತಿ, ತಿರ್ಯಂಚ ಗತ್ಯಾನುಪೂರ್ವಿ, ಮೊದಲಿನ ನಾಲ್ಕು ಜಾತಿ, ಐದು ಸಂಸ್ಥಾನ ಐದು ಸಂಹನನ, ವರ್ಣ ಮೊದಲಾದವುಗಳು ೧೦, ಉಪಘಾತ, ಅ ಪ್ರ ಶ ಸ್ತ ವಿಹಾಯೋಗತಿ, ಸ್ಥಾವರ, ಸೂಕ್ಷ್ಮ, ಅಪರ್ಯಾಪ್ತಿ, ಸಾಧಾರಣ, ಅಸ್ಥಿರ, ಅಶುಭ, ದುರ್ಭಗ, ದುಃಸ್ವರ, ಅನಾದೇಯ, ಅಯಶಃಕೀರ್ತಿ, ಈ ಪ್ರಕೃ ತಿಗಳು ಪಾಪ ಪ್ರಕೃತಿಗಳು.

ಇತಿ ಶ್ರೀಮದುಮಾಸ್ವಾಮಿವಿರಚಿತೆ ಮೋಕ್ಷಶಾಸ್ತ್ರೇ

ಅಷ್ಟಮೋಽಧ್ಯಾಯಃ



## ಪ್ರಶ್ನೆಗಳು

೧ ಬಂಧವೆಂದರೇನು ? ಅದರ ಭೇದಗಳೆಷ್ಟು ?

೨ ದರ್ಶನಮೋಹನೀಯ ಕರ್ಮದ ಭೇದವೆಷ್ಟು, ಸ್ಥಿತಿ ಎಷ್ಟು ?

೩ ಎಲ್ಲಾ ಕರ್ಮಗಳ ಉತ್ಕೃಷ್ಟ ಮತ್ತು ಜಘನ್ಯ ಸ್ಥಿತಿಗಳೆಷ್ಟು ?

೪ ಪ್ರದೇಶಬಂಧವೆಂದರೇನು ?

೫ ಪಾಪಪ್ರಕೃತಿಗಳೆಷ್ಟು ? ಪುಣ್ಯಪ್ರಕೃತಿಗಳೆಷ್ಟು ?





# ಒಂಭತ್ತನೆಯ ಅಧ್ಯಾಯ
## (ನವಮ ಅಧ್ಯಾಯ)

### ಸಂವರದ ಲಕ್ಷಣ

**ಆಸ್ರವನಿರೋಧಃ ಸಂವರಃ ||೧||**

ಅರ್ಥ—ಆಸ್ರವವನ್ನು ತಡೆಯುವುದಕ್ಕೆ ಸಂವರವೆನ್ನುವರು. ಅದು ಈ ಆತ್ಮನಲ್ಲಿ ಯಾವ ಕಾರಣಗಳಿಂದ ಕರ್ಮಗಳ ಆಗಮನವಾಗುತ್ತದೋ ಆ ಕಾರಣಗಳನ್ನು ದೂರಮಾಡುವುದರಿಂದ ಕರ್ಮಗಳ ಬರುವಿಕೆಯು ನಿಲ್ಲುತ್ತದೆ. ಅದಕ್ಕೆ ಸಂವರವೆಂದು ಹೆಸರು.

ಸಂವರದಲ್ಲಿ ಎರಡು ಭೇದವಿದೆ. ೧ ದ್ರವ್ಯ ಸಂವರ (ಪುದ್ಗಲಮಯವಾದ ದ್ರವ್ಯಕರ್ಮಗಳನ್ನು ತಡೆಯುವುದು) ೨ ಭಾವ ಸಂವರ (ಕರ್ಮಾಸ್ರವಕ್ಕೆ ಕಾರಣವಾದ ಪರಿಣಾಮಗಳಿಲ್ಲದಿರುವಂತೆ ಮಾಡುವುದು)

### ಸಂವರದ ಕಾರಣ

**ಸ ಗುಪ್ತಿಸಮಿತಿಧರ್ಮಾನುಪ್ರೇಕ್ಷಾಪರೀಷಹ ಜಯಚಾರಿತ್ರೈಃ ||೨||**

ಅರ್ಥ—ಆ ಸಂವರವು ಮೂರು ಗುಪ್ತಿ, ಐದು ಸಮಿತಿ, ಹತ್ತು ಧರ್ಮ ಹನ್ನೆರಡು ಅನುಪ್ರೇಕ್ಷೆ ಇಪ್ಪತ್ತೆರಡು ಪರೀಷಹಗಳ ಜಯ ಮತ್ತು ಐದು ಚಾರಿತ್ರಗಳೆಂಬ ಈ ಆರು ಕಾರಣಗಳಿಂದಾಗುತ್ತದೆ.

ಗುಪ್ತಿ—ಸಂಸಾರ ಪರಿಭ್ರಮಣಕ್ಕೆ ಕಾರಣವಾದ ಮನ ವಚನ ಕಾಯಗಳೆಂಬ ಮೂರು ಯೋಗಗಳನ್ನು ತಡೆಯುವುದಕ್ಕೆ ಗುಪ್ತಿ ಎಂದು ಹೆಸರು.

ಸಮಿತಿ–ಪ್ರಾಣಿಗಳ ಹಿಂಸೆಯಾಗದಂತೆ ಪ್ರಯತ್ನಪೂರ್ವಕವಾದ ಆಚರಣೆಯನ್ನು ಮಾಡುವುದಕ್ಕೆ ಸಮಿತಿ ಎಂದು ಹೆಸರು.

ಧರ್ಮ- ಈ ಆತ್ಮನನ್ನು ಸಂಸಾರದ ದುಃಖದಿಂದ ಬಿಡಿಸಿ ಉತ್ತಮ ಸುಖದಲ್ಲಿ ನೆಲೆಸುವಂತೆ ಮಾಡಿಸುವ ಪರಿಣಾಮಗಳಿಗೆ ಧರ್ಮವೆಂದು ಹೆಸರು.

ಅನುಪ್ರೇಕ್ಷಾ– ಶರೀರಾದಿಗಳ ಸ್ವರೂಪವನ್ನು ಬಾರಿ ಬಾರಿ ಚಿಂತನೆ ಮಾಡುವುದಕ್ಕೆ ಅನುಪ್ರೇಕ್ಷೆ ಎಂದು ಹೆಸರು.

ಪರೀಷಹಜಯ- ಹಸಿವು. ಬಾಯಾರಿಕೆ ಮೊದಲಾದ ಕಷ್ಟಗಳಾಗುತ್ತಿದ್ದರೂ ಕರ್ಮಗಳ ನಿರ್ಜರೆಯನ್ನು ಮಾಡುವುದಕ್ಕೆ ಅವುಗಳನ್ನು ಶಾಂತಪರಿಣಾಮದಿಂದ ಸಹನೆ ಮಾಡುವುದಕ್ಕೆ ಪರೀಷಹಜಯ ಎಂದು ಹೆಸರು.

ಚಾರಿತ್ರ-ಕರ್ಮಗಳ ಆಸ್ರವಕ್ಕೆ ಕಾರಣವಾದ ಬಾಹ್ಯ ಅಭ್ಯಂತರ ಕ್ರಿಯೆಯನ್ನು ತಡೆಯುವುದಕ್ಕೆ ಚಾರಿತ್ರವನ್ನುತ್ತಾರೆ.

ನಿರ್ಜರಾ ಮತ್ತು ಸಂವರದ ಕಾರಣ

## ತಪಸಾ ನಿರ್ಜರಾ ಚ ॥೩॥

ಅರ್ಥ—ತಪದಿಂದ ನಿರ್ಜರೆ ಮತ್ತು ಸಂವರಗಳೆರಡೂ ಆಗುತ್ತವೆ.

ಹತ್ತು ವಿಧವಾದ ಧರ್ಮಗಳಲ್ಲಿ ತಪವು ಅಂತರ್ಭೂತವಾದರೂ ಅದು ಸಂವರ ಮತ್ತು ನಿರ್ಜರೆಗೆ ಕಾರಣವಾಗಿರುವುದರಿಂದ ಇಲ್ಲಿ ಬೇರೆಯೇ ಹೇಳಲಾಗಿದೆ. ತಪದಿಂದ ಪುಣ್ಯಬಂಧವೂ ಆಗುತ್ತದೆ. ಆದರೆ ಕರ್ಮಗಳ ನಿರ್ಜರೆಯಾಗುವುದು ಅದರ ಪ್ರಧಾನ ಫಲವಾಗಿದೆ. ಪುಣ್ಯಬಂಧವಾಗುವುದು ಅದರ ಗೌಣಫಲವೆಂದು ತಿಳಿಯಬೇಕು.

ಗುಪ್ತಿಯ ಲಕ್ಷಣ

## ಸಮ್ಯಗ್ಯೋಗನಿಗ್ರಹೋ ಗುಪ್ತಿಃ ॥೪॥

ಅರ್ಥ- ವಿಷಯಾಭಿಲಾಷೆಯಲ್ಲಿ ತೊಡಗಿರುವ ಮನ-ವಚನ-ಕಾಯಗಳ ಸ್ವಚ್ಛಂದ ಪ್ರವೃತ್ತಿಯನ್ನು ಚೆನ್ನಾಗಿ ತಡೆಯುವುದಕ್ಕೆ ಗುಪ್ತಿ ಎಂದು ಹೆಸರು. ಇದರಲ್ಲಿ ಮನೋಗುಪ್ತಿ, ವಚನಗುಪ್ತಿ, ಕಾಯಗುಪ್ತಿ ಎಂದು ಮೂರು ವಿಧವಿದೆ.

### ಸಮಿತಿಯ ಭೇದ

**ಈರ್ಯಾಭಾಷೈಷಣಾದಾನನಿಕ್ಷೇಪೋತ್ಸರ್ಗಾಃ ಸಮಿತಯಃ ||೫||**

ಅರ್ಥ– ಈರ್ಯಾಸಮಿತಿ ಎಂದರೆ ನಾಲ್ಕು ಹಸ್ತ ಭೂಮಿಯನ್ನು ನೋಡುತ್ತಾ ಪ್ರಾಣಿಗಳಿಗೆ ಬಾಧೆಯಾಗದಂತೆ ನಡೆಯುವುದು. ಭಾಷಾಸಮಿತಿ ಹಿತಮಿತ ಮಧುರವಾದ ವಚನಗಳನ್ನಾಡುವುದು. ಏಷಣಾಸಮಿತಿ—ದಿನದಲ್ಲಿ ಒಂದುಸಾರಿ ನಿರ್ದೋಷವಾದ ಆಹಾರವನ್ನು ತೆಗೆದುಕೊಳ್ಳುವುದು. ಆದಾನನಿಕ್ಷೇಪಣಾ ಸಮಿತಿ— ನೋಡಿ ಪರಿಶೋಧಿಸಿ ಯಾವುದಾದರೊಂದು ಪದಾರ್ಥವನು, ತೆಗೆದುಕೊಳ್ಳುವುದು, ಇಡುವುದು ಮತ್ತು ಉತ್ಸರ್ಗ ಸಮಿತಿ— ಜೀವಜಂತುಗಳಿಲ್ಲದ ಸ್ಥಾನದಲ್ಲಿ ಮಲಮೂತ್ರಗಳನ್ನು ವಿಸರ್ಜಿಸುವುದು ಇವು ಐದು ಸಮಿತಿಗಳು. ಈ ೫ ಸಮಿತಿಗಳಲ್ಲಿ ಸಮ್ಯಕ್ ಎಂಬ ವಿಶೇಷಣವು ಮೇಲಿನ ಸೂತ್ರದಿಂದ ಕೂಡಿಸಿಕೊಳ್ಳಬೇಕು.

### ದಶವಿಧ ಧರ್ಮಗಳು

**ಉತ್ತಮಕ್ಷಮಾಮಾರ್ದವಾರ್ಜವಸತ್ಯಶೌಚಸಂಯಮತಪಸ್ತ್ಯಾಗಾಕಿಂಚನ್ಯಬ್ರಹ್ಮಚರ್ಯಾಣಿ ಧರ್ಮಃ ||೬||**

ಅರ್ಥ— ಉತ್ತಮಕ್ಷಮಾ— ಕ್ರೋಧದ ಕಾರಣಗಳಿದ್ದರೂ ಕೂಡ ಕ್ರೋಧವನ್ನು ಮಾಡದಿರುವುದು. ಉತ್ತಮ ಮಾರ್ದವ— ಕುಲ. ಶೀಲ ಬಲ ಮೊದಲಾದವುಗಳ ಗರ್ವವನ್ನು ಮಾಡದೆ ನಮ್ರತೆಯುಳ್ಳವರಾಗಿರುವುದು. ಉತ್ತಮ ಆರ್ಜವ — ಮಾಯಾಚಾರವನ್ನು ಮಾಡದಿರುವುದು ಉತ್ತಮ ಸತ್ಯ—ರಾಗದ್ವೇಷಪೂರ್ವಕವಾದ ಅಸತ್ಯ ವಚನಗಳನ್ನು ಬಿಟ್ಟು ಹಿತಮಿತ

ಮಧುರ ವಚನಗಳನ್ನು ಮಾತನಾಡುವುದು. ಉತ್ತಮ ಶೌಚ—ಲೋಭವನ್ನು ಬಿಟ್ಟು ಆತ್ಮ ವಿಶುದ್ಧಿಯನ್ನು ಹೊಂದುವುದು. ಉತ್ತಮ ಸಂಯಮ — ಇಂದ್ರಿಯ ಮತ್ತು ಮನಸ್ಸನ್ನು ವಶದಲ್ಲಿಡುವುದು ಮತ್ತು ಷಟ್ಕಾಯ ಜೀವಗಳನ್ನು ರಕ್ಷಿಸುವುದು. ಉತ್ತಮ ತಪ— ಬಾಹ್ಯಾಭ್ಯಂತರ ರೂಪವಾದ ಹನ್ನೆರಡು ಪ್ರಕಾರದ ತಪಸ್ಸನಾಚರಿಸುವುದು ಮತ್ತು ಉತ್ತಮತ್ಯಾಗ — ಶುಭಪರಿಣಾಮದಿಂದ ನಾಲ್ಕು ಪ್ರಕಾರದ ದಾನವನ್ನು ಮಾಡುವುದು. ಉತ್ತಮಆಕಿಂಚನ್ಯ — ಪರಪದಾರ್ಥಗಳಲ್ಲಿ ಮಮತ್ವ ಪರಿಣಾಮವನ್ನು ಬಿಟ್ಟು ಸಂಸಾರದ ಸ್ಥಿತಿಯನ್ನು ತಿಳಿಯುವುದು. ಮತ್ತು ಉತ್ತಮ ಬ್ರಹ್ಮಚರ್ಯ— ಸ್ತ್ರೀಯರ ಸಂಸರ್ಗವನ್ನು ಬಿಟ್ಟು ಆತ್ಮ ವಿಶುದ್ಧಿಯಲ್ಲಿ ಲೀನನಾಗುವುದು ಇವು ಹತ್ತು ಧರ್ಮಗಳು.

### ಅನುಪ್ರೇಕ್ಷೆಗಳು

**ಅನಿತ್ಯಾಶರಣಸಂಸಾರೈಕತ್ವಾನ್ಯತ್ವಾಶುಚ್ಯಾಸ್ರವಸಂ – ವರನಿರ್ಜರಾಲೋಕಬೋಧಿದುರ್ಲಭಧರ್ಮಸ್ವಾಖ್ಯಾತತ್ವಾನುಚಿಂತನಮನುಪ್ರೇಕ್ಷಾಃ ॥೭॥**

ಅರ್ಥ—ಅನಿತ್ಯ, ಅಶರಣ, ಸಂಸಾರ, ಏಕತ್ವ, ಅನ್ಯತ್ವ, ಅಶುಚಿತ್ವ, ಆಸ್ರವ ಸಂವರ, ನಿರ್ಜರಾ, ಲೋಕ, ಬೋಧಿದುರ್ಲಭ, ಧರ್ಮ ಈ ಹನ್ನೆರಡು ವಿಷಯಗಳನ್ನು ಮೇಲಿಂದ ಮೇಲೆ ಚಿಂತನೆ ಮಾಡುವುದಕ್ಕೆ ಅನುಪ್ರೇಕ್ಷೆ ಎಂದು ಹೆಸರು.

ಅನಿತ್ಯಾನುಪ್ರೇಕ್ಷಾ—ಸಂಸಾರದ ಸಮಸ್ತ ಪದಾರ್ಥಗಳು ಕಾಮನ ಬಿಲ್ಲು ಮೊದಲಾದ ಮತ್ತು ನೀರಿನ ಗುಳ್ಳೆಯಂತೆ ಅನಿತ್ಯವಾಗಿವೆ, ಎಂದು ಮೇಲಿಂದ ಮೇಲೆ ವಿಚಾರ ಮಾಡುವುದು ಅನಿತ್ಯಾನುಪ್ರೇಕ್ಷೆ.

ಅಶರಣಾನುಪ್ರೇಕ್ಷಾ—ಯಾವ ಪ್ರಕಾರವಾಗಿ ನಿರ್ಜನವಾದ ಕಾಡಿನಲ್ಲಿ ಹುಲಿಯಿಂದ ಹಿಡಿಯಲ್ಪಟ್ಟ ದನದ ಕರುವನ್ನು ರಕ್ಷಿಸುವವರು ಯಾರೂ

ಇಲ್ಲವೋ ಅದೇ ಪ್ರಕಾರವಾಗಿ ಈ ಸಂಸಾರದಲ್ಲಿ ದುಃಖ ಪಡುತ್ತಿರುವ ಪ್ರಾಣಿಯನ್ನು ರಕ್ಷಿಸುವವರು ಯಾರೂ ಇಲ್ಲವೆಂದು ವಿಚಾರ ಮಾಡುವದು, ಧರ್ಮವೇ ರಕ್ಷಕನೆಂದು ತಿಳಿಯುವುದು ಅಶರಣಾನುಪ್ರೇಕ್ಷೆಯು.

ಸಂಸಾರಾನುಪ್ರೇಕ್ಷೆ—ದುಃಖಮಯವಾದ ಸಂಸಾರದ ಸ್ವರೂಪವನ್ನು ವಿಚಾರ ಮಾಡುವುದು ಸಂಸಾರಾನುಪ್ರೇಕ್ಷೆ.

ಏಕತ್ವಾನುಪ್ರೇಕ್ಷೆ—ಜನ್ಮ ಜರಾ ಮರಣ ಮೊದಲಾದ ದುಃಖಗಳನ್ನು, ನಾನೊಬ್ಬನೇ ಸಹನೆ ಮಾಡಬೇಕಲ್ಲದೆ ಬಂಧು ಬಳಗ ಮೊದಲಾದವರು ಇದರಲ್ಲಿ ಸಹಭಾಗಿಗಳಾಗುವುದಿಲ್ಲವೆಂದು, ವಿಚಾರಿಸುವುದು. ಏಕತ್ವಾನುಪ್ರೇಕ್ಷೆ.

ಅನ್ಯತ್ವಾನುಪ್ರೇಕ್ಷೆ—ಶರೀರ ಮೊದಲಾದವುಗಳಿಂದ ಈ ಆತ್ಮನು ಭಿನ್ನನಾಗಿದ್ದಾನೆಂದು ತಿಳಿಯುವುದು ಅನ್ಯತ್ವಾನುಪ್ರೇಕ್ಷೆ.

ಅಶುಚಿತ್ವಾನುಪ್ರೇಕ್ಷೆ—ಈ ಶರೀರವು ಅಪವಿತ್ರವಾಗಿದೆ. ರಕ್ತ ಮಾಂಸ ಮೊದಲಾದವುಗಳಿಂದ ತುಂಬಿದೆ. ಸ್ನಾನ ಮೊದಲಾದವುಗಳಿಂದ ಎಂದೂ ಪವಿತ್ರವಾಗುವುದಿಲ್ಲ. ಈ ಶರೀರದ ಸಂಸರ್ಗದಿಂದ ಪವಿತ್ರ ವಸ್ತುಗಳೂ ಅಪವಿತ್ರವಾಗುತ್ತವೆ. ಎಂದು ಶರೀರದ ಅಪವಿತ್ರ ರೂಪವನ್ನು ವಿಚಾರಿಸುವುದು. ಅಶುಚಿತ್ವಾನುಪ್ರೇಕ್ಷೆ.

ಆಸ್ರವಾನುಪ್ರೇಕ್ಷಾ — ಮಿಥ್ಯಾತ್ವ ಮೊದಲಾದ ಪರಿಣಾಮಗಳಿಂದ ಕರ್ಮದ ಆಸ್ರವವಾಗುತ್ತದೆ. ಕರ್ಮಗಳ ಆಸ್ರವವೇ ಸಂಸಾರಕ್ಕೆ ಕಾರಣ ವಾಗಿದೆ ಎಂದು ವಿಚಾರ ಮಾಡುವುದು ಆಸ್ರವಾನುಪ್ರೇಕ್ಷಾ.

ಸಂವರಾನುಪ್ರೇಕ್ಷಾ—ನವೀನ ಕರ್ಮಗಳ ಪ್ರವೇಶವಾಗದಂತೆ ತಡೆಯುವುದು ಸಂವರ. ಸಂವರದಿಂದಲೇ ಆತ್ಮಕಲ್ಯಾಣವಾಗುತ್ತದೆ. ಎಂದು ಮುಂತಾಗಿ ವಿಚಾರ ಮಾಡುವುದು ಸಂವರಾನುಪ್ರೇಕ್ಷೆ.

ನಿರ್ಜರಾನುಪ್ರೇಕ್ಷಾ — ಸವಿಪಾಕ ನಿರ್ಜರೆ ಎಂಬ ಭೇದಗಳನ್ನೊಳಗೊಂಡ ಕರ್ಮದ ನಿರ್ಜರೆಯ ವಿಷಯದಲ್ಲಿ ವಿಚಾರ ಮಾಡುವುದು ನಿರ್ಜರಾನುಪ್ರೇಕ್ಷೆ.

ಲೋಕಾನುಪ್ರೇಕ್ಷಾ—ಅನಂತ ಆಕಾಶದ ಮಧ್ಯದಲ್ಲಿರುವ ಹದಿನಾಲ್ಕು ರಜ್ಜು ಪ್ರಮಾಣವಾಗಿರುವ ಈ ಲೋಕದ ಆಕಾರಾದಿಗಳ ವಿಷಯಗಳಲ್ಲಿ ವಿಚಾರ ಮಾಡುವುದು ಲೋಕಾನುಪ್ರೇಕ್ಷೆ.

ಬೋಧಿದುರ್ಲಭಾನುಪ್ರೇಕ್ಷೆ—ರತ್ನತ್ರಯ ಸ್ವರೂಪವಾದಂತಹ ಜ್ಞಾನ ವನ್ನು ಪಡೆಯುವುದು ಬಹಳ ಕಠಿಣವಾಗಿದೆ, ಎಂದು ವಿಚಾರ ಮಾಡು ವುದು ಬೋಧಿದುರ್ಲಭಾನುಪ್ರೇಕ್ಷೆ.

ಧರ್ಮಸ್ವಾಖ್ಯಾತತ್ವಾನುಪ್ರೇಕ್ಷಾ—ಜಿನೇಂದ್ರ ಭಗವಂತನು ಉಪದೇಶಿ ಸಿದ ಅಹಿಂಸಾ ಮೊದಲಾದ ಧರ್ಮಗಳೇ ಈ ಪ್ರಾಣಿಗಳ ಕಲ್ಯಾಣಕ್ಕೆ ಕಾರಣವಾಗಿದೆ, ಈ ಧರ್ಮದ ಪ್ರಾಪ್ತಿ ಯಾಗದಿರುವುದರಿಂದ ಈ ಜೀವನು ಸಂಸಾರ ಪರಿಭ್ರಮಣೆಯನ್ನು ಮಾಡುತ್ತಿದ್ದಾನೆ ಎಂದು ಮೊದಲಾದ ವಿಚಾರ ಮಾಡುವುದು ಧರ್ಮಾನುಪ್ರೇಕ್ಷೆ.

ಈ ಪ್ರಕಾರವಾಗಿ ಹನ್ನೆರಡು ಪ್ರಕಾರವಾದ ಭಾವನೆಗಳನ್ನು ಭಾವಿ ಸುವುದರಿಂದ ಉತ್ತಮಕ್ಷಮಾದಿ ದಶಧರ್ಮಗಳ ಪ್ರಾಪ್ತಿಯೂ ಪರೀಷಹ ಜಯವನ್ನು ಮಾಡುವ ಸಾಮರ್ಥ್ಯವೂ ಪ್ರಾಪ್ತಿಯಾಗುತ್ತದೆ.

### ಪರೀಷಹಜಯದ ಅವಶ್ಯಕತೆ

## ಮಾರ್ಗಾಚ್ಯವನನಿರ್ಜರಾರ್ಥಂ ಪರಿಷೋಢವ್ಯಾಃ ಪರೀಷಹಾಃ ॥೮॥

ಅರ್ಥ—ಸಂವರದ ಮಾರ್ಗದಿಂದ ಚ್ಯುತನಾಗದಿರಲೋಸುಗ ಮತ್ತು ನಿರ್ಜರೆಯನ್ನು ಸಾಧಿಸಲೋಸುಗ ಇಪ್ಪತ್ತೆರಡು ವಿಧವಾದ ಪರೀಷಹಗಳನ್ನು ಸಹನೆ ಮಾಡಬೇಕು.

### ಇಪ್ಪತ್ತೆರಡು ವಿಧದ ಪರೀಷಹಗಳು

## ಕ್ಷುತ್ಪಿಪಾಸಾಶೀತೋಷ್ಣದಂಶಮಶಕನಾಗ್ನ್ಯರತಿಸ್ತ್ರೀ ಚರ್ಯಾನಿಷದ್ಯಾಶಯ್ಯಾಕ್ರೋಶವಧಯಾಚನಾ ಲಾಭರೋಗತೃಣಸ್ಪರ್ಶಮಲಸತ್ಕಾರಪುರಸ್ಕಾರ– ಪ್ರಜ್ಞಾಜ್ಞಾನಾದರ್ಶನಾನಿ ॥೯॥

ಅರ್ಥ — ಕ್ಷುಧಾ, ಪಿಪಾಸಾ, ಶೀತ, ಉಷ್ಣ, ದಂಶಮಶಕ ನಾಗ್ನ್ಯ, ಅರತಿ, ಸ್ತ್ರೀ, ಚರ್ಯಾ, ನಿಷದ್ಯಾ, ಶಯ್ಯಾ, ಆಕ್ರೋಶ, ವಧ, ಯಾಚನಾ ಅಲಾಭ, ರೋಗ, ತೃಣಸ್ಪರ್ಶ, ಮಲ, ಸತ್ಕಾರಪುರಸ್ಕಾರ, ಪ್ರಜ್ಞಾ, ಅಜ್ಞಾನ ಮತ್ತು ಅದರ್ಶನ ಇವು ಇಪ್ಪತ್ತೆರಡು ಪರೀಷಹಗಳು.

ಕ್ಷುಧಾ—ಹಸಿವಿನ ದುಃಖವನ್ನು ಶಾಂತಭಾವದಿಂದ ಸಹನೆ ಮಾಡುವುದಕ್ಕೆ ಕ್ಷುಧಾಪರೀಷಹಜಯವೆಂದು ಹೆಸರು.

ಪಿಪಾಸಾ— ಬಾಯಾರಿಕೆಯ ಪೀಡೆಯನ್ನು ಸಹನೆ ಮಾಡುವುದು.

ಶೀತ— ಛಳಿಯ ವೇದನೆಯನ್ನು ಸಹನೆ ಮಾಡುವುದು.

ಉಷ್ಣ— ಸೆಕೆಯ ತಾಪವನ್ನು ಸಹನೆ ಮಾಡುವುದು

ದಂಶಮಶಕ— ನುಸಿ, ಸೊಣ, ಸೊಳ್ಳೆ, ಇರುವೆ, ಚೇಳು ಮೊದಲಾದವುಗಳ ಬಾಧೆಯನ್ನು ಸಹನೆ ಮಾಡುವುದು.

ನಾಗ್ನ್ಯ— ನಗ್ನತೆಯಲ್ಲಿರುವಾಗ ಮನಸ್ಸಿನಲ್ಲಿ ಯಾವ ಪ್ರಕಾರವಾಗಿಯೂ ವಿಕಾರಸಂಕೋಚಗಳನ್ನು ಮಾಡದಿರುವುದು.

ಅರತಿ — ಅಪ್ರೀತಿಯ ಕಾರಣಗಳು ಒದಗಿದರೂ ಸಂಯಮದಲ್ಲಿ ಅನುರಾಗವನ್ನು ಬಿಡದಿರುವುದು.

ಸ್ತ್ರೀ — ಸ್ತ್ರೀಯರ ಹಾವಭಾವಾದಿಗಳನ್ನು ನೋಡಿಯೂ ಕೂಡ ಅವರಲ್ಲಿ ಮೋಹಿತನಾಗದಿರುವುದು.

ಚರ್ಯಾ — ನಡೆಯುವಾಗ ಬರುವ ಕಷ್ಟಗಳನ್ನು ಸಹನೆ ಮಾಡುವುದು.

ನಿಷದ್ಯಾ—ಧ್ಯಾನ ಕಾಲದಲ್ಲಿ ಅಥವಾ ಇತರ ಸಮಯದಲ್ಲಿ ಕೂತುಕೊಳುವಾಗ ಆಗುವ ಕಷ್ಟಗಳನ್ನು ಸಹದೆ ಮಾಡಿ ತನ್ನ ಆಸನದಿಂದ ಚ್ಯುತನಾಗದಿರುವುದು.

ಶಯ್ಯಾ—ವಿಷಮವಾದ ಕಠೋರ ಸ್ಥಾನದಲ್ಲಿಯೂ ಒಂದೆ ಮಗ್ಗಲಿನಿಂದ ಮಲಗುವುದು. ಯಾವ ಉಪಸರ್ಗ ಬಂದರೂ ಶರೀರವನ್ನು ಚಲಾಯಮಾನ ಮಾಡದಿರುವುದು.

ಆಕ್ರೋಶ— ದುಷ್ಟ ಜನರ ಕಠೋರ ವಚನಗಳನ್ನು ಶಾಂತಭಾವದಿಂದ ಸಹನೆ ಮಾಡುವದು.

ವಧ—ದುಷ್ಟರು ಖಡ್ಗ ಮೊದಲಾದವುಗಳಿಂದ ಪ್ರಹಾರ ಮಾಡಿದರೂ ಅದನ್ನು ಶಾಂತಭಾವದಿಂದ ಸಹನೆ ಮಾಡುವದು.

ಯಾಚನಾ— ಪ್ರಾಣ ಹೋದರೂ ಆಹಾರ ಮೊದಲಾದವುಗಳನ್ನು ಬೇರೆಯವರಿಂದ ಬೇಡದಿರುವುದು.

ಅಲಾಭ— ಆಹಾರವು ದೊರೆಯದಿದ್ದರೂ ಸಂತೋಷ ಧಾರಣೆ ಮಾಡುವುದು.

ರೋಗ— ಅನೇಕ ರೋಗಗಳು ಬಂದರೂ ಅವುಗಳ ವೇದನೆಯನ್ನು ಶಾಂತಭಾವದಿಂದ ಸಹನೆ ಮಾಡುವುದು.

ತೃಣಸ್ಪರ್ಶ— ನಡೆಯುತ್ತಿರುವಾಗ ಕಾಲಿಗೆ ತಾಗುವ ಹುಲ್ಲು ಮುಳ್ಳು ಮೊದಲಾದವುಗಳ ಬಾಧೆಯನ್ನು ಸಹನೆ ಮಾಡುವುದು.

ಮಲ— ಜಲಕಾಯಿಕ ಜೀವಗಳ ಹಿಂಸೆಯಿಂದ ನಿವೃತ್ತನಾಗುವುದಕ್ಕಾಗಿ ಸ್ನಾನವನ್ನು ಮಾಡದಿರುವಾಗ ತನ್ನ ಮಲಿನ ಶರೀರವನ್ನು ನೋಡಿ ಜುಗುಪ್ಸೆಯನ್ನು ಮಾಡದಿರುವುದು.

ಸತ್ಕಾರಪುರಸ್ಕಾರ— ತನ್ನಲ್ಲಿ ವಿಪುಲಗುಣಗಳಿದ್ದರೂ. ಬೇರೆಯವರು ತನ್ನನ್ನು ಸತ್ಕಾರ ಮಾಡದಿದ್ದರೆ ಅದರಿಂದ ಖಿನ್ನನಾಗದಿರುವುದು.

ಪ್ರಜ್ಞಾ— ವಿಶೇಷ ಜ್ಞಾನವಿದ್ದರೂ ಅಭಿಮಾನವನ್ನು ಮಾಡದಿರುವುದು.

ಅಜ್ಞಾನ— ಜ್ಞಾನದ ಕೊರತೆ ಇದ್ದರೂ ಬೇರೆಯವರ ತಿರಸ್ಕಾರವನ್ನು ಶಾಂತ ಭಾವದಿಂದ ಸಹನೆ ಮಾಡುವುದು.

ಅದರ್ಶನ— ಬಹಳ ಸಮಯದವರೆಗೆ ಕಠಿಣ ತಪಶ್ಚರ್ಯೆಯನ್ನು ಮಾಡಿದರೂ ಅವಧಿಜ್ಞಾನ, ಚಾರಣಋದ್ಧಿ ಮೊದಲಾದ ಅತಿಶಯಗಳು ಪ್ರಾಪ್ತವಾಗಲಿಲ್ಲವಲ್ಲಾ ಎಂದು ಖಿನ್ನನಾಗದಿರುವುದು.

ಈ ಪ್ರಕಾರ ಮೇಲೆ ಹೇಳಿದ ಇಪ್ಪತ್ತೆರಡು ಪರೀಷಹಗಳನ್ನು ಶಾಂತ ಭಾವದಿಂದ ಸಹನೆ ಮಾಡುವುದರಿಂದ ಸಂವರವಾಗುತ್ತದೆ.

### ಯಾವ ಗುಣಸ್ಥಾನದಲ್ಲಿ ಎಷ್ಟು ಪರೀಷಹ

## ಸೂಕ್ಷ್ಮಸಾಂಪರಾಯಛದ್ಮಸ್ಥವೀತರಾಗಯೋ-ಶ್ಚತುರ್ದಶ ||೧೦||

ಅರ್ಥ– ಸೂಕ್ಷ್ಮ ಸಾಂಪರಾಯವೆಂಬ ಹತ್ತನೆಯ ಗುಣಸ್ಥಾನ ಮತ್ತು ಛದ್ಮಸ್ಥ ವೀತರಾಗವೆಂಬ ಹನ್ನೊಂದನೆಯ ಹನ್ನೆರಡನೆಯ ಗುಣಸ್ಥಾನದಲ್ಲಿ ೧೪ ಪರೀಷಹಗಳಾಗುತ್ತವೆ. ೧ ಕ್ಷುಧಾ ೨ ತೃಷಾ ೩ ಶೀತ ೪ ಉಷ್ಣ ೫ ದಂಶಮಶಕ ೬ ಚರ್ಯಾ ೭ ಶಯ್ಯಾ ೮ ವಧ ೯ ಅಲಾಭ ೧೦ ರೋಗ ೧೧ ತೃಣಸ್ಪರ್ಶ ೧೨ ಮಲ ೧೩ ಪ್ರಜ್ಞಾ ೧೪ ಅಜ್ಞಾನ ಇವು ೧೪ ಪರೀಷಹಗಳು.

## ಏಕಾದಶ ಜಿನೇ ||೧೧||

ಅರ್ಥ–ಸಯೋಗ ಕೇವಲಿ ಎಂಬ ಹದಿಮೂರನೆ ಗುಣಸ್ಥಾನದಲ್ಲಿರುವ ಜಿನೇಂದ್ರರಿಗೆ ಮೇಲೆ ಹೇಳಿದ ೧೪ ಪರೀಷಹಗಳಲ್ಲಿ ಅಲಾಭ, ಪ್ರಜ್ಞಾ, ಅಜ್ಞಾನಗಳನ್ನು ಬಿಟ್ಟು ಹನ್ನೊಂದು ಪರೀಷಹಗಳು ಇರುತ್ತವೆ.

ವಿಶೇಷ–ಜಿನೇಂದ್ರ ಭಗವಂತರಿಗೆ ಪರೀಷಹ ಹೇಗೆ ಎಂದು ಸಂದೇಹವಾಗಬಹುದು. ಆದರೆ ವೇದನೀಯ ಕರ್ಮದ ಉದಯದಿಂದಾಗುವ ಪರೀಷಹಗಳು ಅವರಿಗೆ ಆಗಬಹುದು. ಮೋಹನೀಯ ಕರ್ಮವು ಅಲ್ಲಿ ಸರ್ವಥಾ ನಷ್ಟವಾಗಿರುವದರಿಂದ ಮೋಹಮಮತೆಯ ದುಃಖವಾಗುವುದಿಲ್ಲ, ಆದರೂ ಪರೀಷಹಕ್ಕೆ ಕಾರಣವಾದ ವೇದನೀಯ ಕರ್ಮವು ಇರುವುದರಿಂದ ಅದರ ಅಸ್ತಿತ್ವ ಮಾತ್ರ ಹೇಳಲಾಗಿದೆ. ಆ ಪರೀಷಹಗಳ ದುಃಖವಾಗುವುದಿಲ್ಲ.

## ಬಾದರಸಾಂಪರಾಯೇ ಸರ್ವೇ ||೧೨||

ಅರ್ಥ–ಬಾದರ ಸಾಂಪರಾಯವೆಂಬ ಆರನೆಯಿಂದ ಒಂಭತ್ತನೆಯ ಗುಣಸ್ಥಾನಗಳವರೆಗೆ ಎಲ್ಲಾ ಪರೀಷಹಗಳಾಗುತ್ತವೆ.

## ಜ್ಞಾನಾವರಣೇ ಪ್ರಜ್ಞಾಜ್ಞಾನೇ ॥೧೩॥

ಅರ್ಥ–ಪ್ರಜ್ಞಾ ಮತ್ತು ಅಜ್ಞಾನ ಎಂಬ ಪರೀಷಹಗಳು ಜ್ಞಾನಾವರಣ ಕರ್ಮದ ಉದಯದಿಂದ ಆಗುತ್ತವೆ.

## ದರ್ಶನಮೋಹಾಂತರಾಯಯೋರದರ್ಶನಾಲಾಭೌ॥

ಅರ್ಥ-ದರ್ಶನ ಮೋಹನೀಯದ ಉದಯದಿಂದ ಅದರ್ಶನ ಪರೀಷಹವೂ ಅಂತರಾಯ ಕರ್ಮದ ಉದಯದಿಂದ ಅಲಾಭ ಪರೀಷಹವೂ ಆಗುತ್ತವೆ.

## ಚಾರಿತ್ರಮೋಹೇ ನಾಗ್ನ್ಯಾರತಿಸ್ತ್ರೀನಿಷದ್ಯಾಕ್ರೋಶ-ಯಾಚನಾಸತ್ಕಾರಪುರಸ್ಕಾರಾಃ ॥೧೫॥

ಅರ್ಥ–ಚಾರಿತ್ರ ಮೋಹನೀಯ ಕರ್ಮದ ಉದಯದಿಂದ ನಾಗ್ನ್ಯ, ಅರತಿ, ಸ್ತ್ರೀ, ನಿಷದ್ಯಾ, ಆಕ್ರೋಶ, ಯಾಚನಾ, ಸತ್ಕಾರಪುರಸ್ಕಾರಗಳೆಂಬ ಏಳು ಪರೀಷಹಗಳಾಗುತ್ತವೆ.

## ವೇದನೀಯೇ ಶೇಷಾಃ ॥೧೬॥

ಅರ್ಥ-ಬಾಕಿ ಉಳಿದ (ಕ್ಷುಧಾ, ತೃಷಾ, ಶೀತ, ಉಷ್ಣ, ದಂಶಮಶಕ. ಚರ್ಯಾ, ಶಯ್ಯಾ, ವಧ, ರೋಗ, ತೃಣಸ್ಪರ್ಶ ಮತ್ತು ಮಲ) ೧೧ ಪರೀಷಹಗಳು ವೇದನೀಯ ಕರ್ಮದ ಉದಯದಿಂದಾಗುತ್ತವೆ.

### ಒಟ್ಟಿಗಿರುವ ಪರೀಷಹಗಳು

## ಏಕಾದಯೋ ಭಾಜ್ಯಾ ಯುಗಪದೇಕಸ್ಮಿನ್ನೈಕೋನವಿಂಶತೇಃ ॥೧೭॥

ಅರ್ಥ–ಒಂದೇ ಸಾರಿ ಒಬ್ಬ ಜೀವನದಲ್ಲಿ ಒಂದು ಮೊದಲಾಗಿ ಹತ್ತೊಂಬತ್ತರವರೆಗೆ ಪರೀಷಹಗಳು ಇರಬಹುದು. ಅಂದರೆ ಹೆಚ್ಚಿನಿಂದ ಹೆಚ್ಚು ಹತ್ತೊಂಬತ್ತು ಪರೀಷಹಗಳು ಒಂದೇ ಸಾರಿ ಆಗಲಿಕ್ಕೆ ಸಾಧ್ಯವಿದೆ.

ಯಾಕೆಂದರೆ ಶೀತ ಮತ್ತು ಉಷ್ಣ ಪರೀಷಹಗಳಲ್ಲಿ ಯಾವುದಾದರೊಂದು ಮತ್ತು ಶಯ್ಯಾ, ಚರ್ಯಾ, ನಿಷದ್ಯಾ ಈ ಮೂರರಲ್ಲೊಂದಾಗಬಹುದು. ಹೀಗೆ ಮೂರು ಪರೀಷಹಗಳನ್ನು ಕಡಿಮೆ ಮಾಡಿದರೆ ೧೯ ಪರೀಷಹಗಳು ಮಾತ್ರ ಏಕಕಾಲದಲ್ಲಿ ಆಗಬಹುದು.

ಐದು ಚಾರಿತ್ರಗಳು

**ಸಾಮಾಯಿಕಚ್ಛೇದೋಪಸ್ಥಾಪನಾಪರಿಹಾರವಿಶುದ್ಧಿ ಸೂಕ್ಷ್ಮಸಾಂಪರಾಯಯಥಾಖ್ಯಾತಮಿತಿ ಚಾರಿತ್ರಂ॥**

ಅರ್ಥ—ಸಾಮಾಯಿಕ, ಛೇದೋಪಸ್ಥಾಪನಾ, ಪರಿಹಾರವಿಶುದ್ಧಿ, ಸೂಕ್ಷ್ಮ ಸಾಂಪರಾಯ ಮತ್ತು ಯಥಾಖ್ಯಾತ ಈ ಪ್ರಕಾರವಾಗಿ ಐದು ಚಾರಿತ್ರಗಳು.

ಸಾಮಾಯಿಕ–ಸರ್ವ ಪಾಪಗಳ ನಿವೃತ್ತಿಯನ್ನು ಮಾಡುವುದಕ್ಕೆ ಸಾಮಾಯಿಕ ಚಾರಿತ್ರವೆಂದು ಹೇಳುತ್ತಾರೆ.

ಛೇದೋಪಸ್ಥಾಪನಾ–ಪ್ರಮಾದದ ದೆಸೆಯಿಂದ ಚಾರಿತ್ರದಲ್ಲಿ ಏನಾದರೂ ದೋಷ ಸಂಭವಿಸಿದರೆ ಪ್ರಾಯಶ್ಚಿತ್ತವನ್ನು ಸ್ವೀಕಾರ ಮಾಡಿ ಪುನಃ ನಿರ್ದೋಷವಾದ ಚಾರಿತ್ರವನ್ನು ಸ್ವೀಕರಿಸುವುದಕ್ಕೆ ಛೇದೋಪಸ್ಥಾಪನೆ ಎಂದು ಹೆಸರು.

ಪರಿಹಾರವಿಶುದ್ಧಿ–ಜೀವ ಹಿಂಸೆಯನ್ನು ಸರ್ವಥಾ ತ್ಯಾಗ ಮಾಡಿದುದರಿಂದ ಆತ್ಮನಲ್ಲಿ ಪ್ರಕಟವಾಗುವ ವಿಶೇಷ ವಿಶುದ್ಧಿಗೆ ಪರಿಹಾರವಿಶುದ್ಧಿ ಎಂದು ಹೆಸರು.

ಸೂಕ್ಷ್ಮ ಸಾಂಪರಾಯ–ಅತ್ಯಂತ ಸೂಕ್ಷ್ಮವಾದ ಲೋಭ ಕಷಾಯದ ಉದಯವಾಗುವುದರಿಂದ ಯಾವ ಚಾರಿತ್ರವಾಗುತ್ತದೆಯೋ ಅದಕ್ಕೆ ಸೂಕ್ಷ್ಮ ಸಾಂಪರಾಯವೆಂದು ಹೆಸರು.

ಯಥಾಖ್ಯಾತ–ಸಂಪೂರ್ಣ ಮೋಹನೀಯ ಕರ್ಮದ ಕ್ಷಯ ಅಥವಾ ಉಪಶಮದಿಂದ ಆತ್ಮಸ್ವರೂಪದಲ್ಲಿ ಸ್ಥಿರವಾಗಿರುವಂಥ ಚಾರಿತ್ರಕ್ಕೆ ಯಥಾಖ್ಯಾತ ಚಾರಿತ್ರವೆಂದು ಹೆಸರು.

### ಬಾಹ್ಯ ತಪ

## ಅನಶನಾವಮೋದರ್ಯವೃತ್ತಿಪರಿಸಂಖ್ಯಾನರಸಪರಿತ್ಯಾಗವಿವಿಕ್ತಶಯ್ಯಾಸನಕಾಯಕ್ಲೇಶಾ ಬಾಹ್ಯಂ ತಪಃ

ಅರ್ಥ–ಅನಶನ—ಸಂಯಮವೃದ್ಧಿಗೋಸ್ಕರವಾಗಿ ನಾಲ್ಕು ಪ್ರಕಾರವಾದ ಆಹಾರಗಳನ್ನು ಬಿಡುವುದು. ಅವಮೌದರ್ಯ–ರಾಗಭಾವವನ್ನು ತ್ಯಜಿಸುವುದಕ್ಕೋಸ್ಕರ ಹಸಿವಿನಿಂದ ಕಮ್ಮಿ ಊಟ ಮಾಡುವುದು. ವೃತ್ತಿಪರಿಸಂಖ್ಯಾನ-ಬಿಕ್ಷೆಗೆ ಹೋಗುವಾಗ ಮನೆ. ಬೀದಿ, ಮೊದಲಾದುವುಗಳ ನಿಯಮವನ್ನು ಮಾಡುವುದು. ರಸಪರಿತ್ಯಾಗ-ಇಂದ್ರಿಯಗಳನ್ನು ವಶದಲ್ಲಿ ಇರಿಸುವುದಕ್ಕೆ ತುಪ್ಪ, ಹಾಲು ಮೊದಲಾದ ರಸಗಳನ್ನು ಬಿಡುವುದು. ವಿವಿಕ್ತಶಯ್ಯಾಸನ-ಸ್ವಾಧ್ಯಾಯ ಧ್ಯಾನಾದಿಗಳ ಸಿದ್ಧಿಗೋಸ್ಕರ ಏಕಾಂತ ಸ್ಥಾನದಲ್ಲಿರುವುದು. ಕಾಯಕ್ಲೇಶ-ಶರೀರದ ಮಮತ್ವವನ್ನು ದೂರ ಮಾಡುವುದಕ್ಕೋಸ್ಕರ ಶೀತ ಋತುವಿನಲ್ಲಿ ನದಿತೀರದಲ್ಲಿಯೂ ಉಷ್ಣಋತುವಿನಲ್ಲಿ ಪರ್ವತದ ಮೇಲೆಯೂ, ಮಳೆಗಾಲದಲ್ಲಿ ಮರದ ಬುಡದಲ್ಲಿಯೂ ಇವೇ ಮೊದಲಾದ ಆತಾಪನಯೋಗವನ್ನು ಧಾರಣೆ ಮಾಡುವುದು. ಇವು ಆರು ಬಾಹ್ಯ ತಪಗಳು. ಈ ತಪಗಳಲ್ಲಿ ಪರವಸ್ತುಗಳ ಸಂಬಂಧ ಇರುವುದರಿಂದಲೂ ಮತ್ತು ಹೊರಗಿನಿಂದ ಸ್ಪಷ್ಟವಾಗಿ ಕಾಣುವುದರಿಂದಲೂ ಇವುಗಳನ್ನು ಬಾಹ್ಯ ತಪಗಳೆಂದು ಹೇಳುವರು.

### ಅಭ್ಯಂತರ ತಪ

## ಪ್ರಾಯಶ್ಚಿತ್ತವಿನಯವೈಯ್ಯಾವೃತ್ಯಸ್ವಾಧ್ಯಾಯವ್ಯುತ್ಸರ್ಗಧ್ಯಾನಾನ್ಯುತ್ತರಂ ॥೨೦॥

ಅರ್ಥ– ಪ್ರಾಯಶ್ಚಿತ್ತ- ಪ್ರಮಾದ ಅಥವಾ ಅಜ್ಞಾನದಿಂದುಂಟಾದ ದೋಷಗಳ ವಿಶುದ್ಧಿಯನ್ನು ಮಾಡುವುದು. ವಿನಯ-ಪೂಜ್ಯ ಪುರುಷರ ಆದರ ಮಾಡುವುದು. ಸ್ವಾಧ್ಯಾಯ-ನಿರಲಸ ಪರಿಣಾಮದಿಂದ ಜ್ಞಾನಾಭ್ಯಾಸ ಮಾಡುವದು. ವ್ಯುತ್ಸರ್ಗ-ಬಾಹ್ಯ ಮತ್ತು ಅಭ್ಯಂತರ ಪರಿಗ್ರಹಗ

ಳನ್ನು ತ್ಯಜಿಸುವದು. ಧ್ಯಾನ-ಚಿತ್ತದ ಚಂಚಲತೆಯನ್ನು ದೂರ ಮಾಡಿ ಏಕಾಗ್ರ ಪರಿಣಾಮದಿಂದ ಆತ್ಮನ ಚೇತನೆಯನ್ನು ಮಾಡುವುದು, ಇವು ಆರು ಅಭ್ಯಂತರ ತಪಗಳು ಈ ತಪಸ್ಸುಗಳ ಸಂಬಂಧ ಆತ್ಮನೊಡನೆ ಇರುವು ದರಿಂದ ಇವುಗಳಿಗೆ ಅಭ್ಯಂತರ ತಪಗಳೆಂದು ಹೇಳುತ್ತಾರೆ.

### ಅಭ್ಯಂತರ ತಪಗಳ ಉತ್ತರ ಭೇದಗಳು

**ನವಚತುರ್ದಶಪಂಚದ್ವಿಭೇದಾ ಯಥಾಕ್ರಮಂ ಪ್ರಾಗ್ಧ್ಯಾನಾತ್ ॥೨೧॥**

ಅರ್ಥ-- ಕೊನೆಯ ಧ್ಯಾನವನ್ನು ಬಿಟ್ಟು ಮೊದಲಿರುವ ತಪದ ಭೇದಗಳಲ್ಲಿ ಕ್ರಮದಿಂದ ೯, ೪, ೧೦, ೫ ಮತ್ತು ೨ ಭೇದಗಳಿವೆ.

### ಪ್ರಾಯಶ್ಚಿತ್ತದ ೯ ಭೇದಗಳು

**ಆಲೋಚನಾಪ್ರತಿಕ್ರಮಣತದುಭಯವಿವೇಕವ್ಯುತ್ಸರ್ಗ ತಪಚ್ಛೇದಪರಿಹಾರೋಪಸ್ಥಾಪನಾಃ ॥೨೨॥**

ಅರ್ಥ--ಆಲೋಚನಾ - ಪ್ರಮಾದದ ದೆಸೆಯಿಂದ ಒದಗಿದ ದೋಷ ಗಳನ್ನು ಗುರುಗಳ ಸನ್ನಿಧಿಯಲ್ಲಿ ನಿಷ್ಕಪಟ ಭಾವದಿಂದ ನಿವೇದನೆ ಮಾಡು ವುದು. ಪ್ರತಿಕ್ರಮಣ- ನಾನು ಮಾಡಿದ ಅಪರಾಧಗಳು ದೂರವಾಗಲಿ ಎಂದು ಪ್ರಾರ್ಥಿಸುವುದು. ತದುಭಯ - ವಿಶೇಷದೋಷದ ಸಮಯದಲ್ಲಿ ಆಲೋಚನಾ ಪ್ರತಿಕ್ರಮಣ ಎರಡನ್ನು ಮಾಡುವುದು. ವಿವೇಕ- ನಿಯಮಿತ ಸಮಯದವರೆಗೆ ಆಹಾರ ಜಲ ಮತ್ತು ಇತರ ಉಪಕರಣಾದಿಗಳನ್ನು ತ್ಯಾಗ ಮಾಡುವುದು. ವ್ಯುತ್ಸರ್ಗ - ಕಾಯೋತ್ಸರ್ಗದಿಂದ ತಪಸ್ಸು ಮಾಡುವುದು. ತಪ-ಅನಶನಾದಿಗಳನ್ನಾಚರಿಸುವುದು ಛೇದ - ದಿನ, ವಾರ, ತಿಂಗಳು ಮೊದ ಲಾದ ಅವಧಿಯಿಂದ ದೀಕ್ಷೆಯನ್ನು ಛೇದಿಸುವುದು. ಪರಿಹಾರ - ದಿನ,ವಾರ, ತಿಂಗಳು ಮೊದಲಾದ ಅವಧಿಯಿಂದ ಸಂಘದಿಂದ ಬೇರೆ ಮಾಡುವುದು. ಉಪಸ್ಥಾಪನಾ - ಸಂಪೂರ್ಣ ದೀಕ್ಷೆಯನ್ನು ಛೇದಿಸಿ ಪುನಃ ನವೀನ ದೀಕ್ಷೆ ಯನ್ನು ಕೊಡುವುದು. ಇವು ೯ ಪ್ರಾಯಶ್ಚಿತ್ತ ತಪದ ಭೇದಗಳು.

ವಿನಯ ತಪದ ಭೇದಗಳು

## ಜ್ಞಾನದರ್ಶನಚಾರಿತ್ರೋಪಚಾರಾಃ ||೨೩||

ಅರ್ಥ— ಜ್ಞಾನವಿನಯ- ವಿನಯದಿಂದ ಯೋಗ್ಯ ಸಮಯದಲ್ಲಿ ಶಾಸ್ತ್ರಗಳನ್ನು ಓದುವುದು ಅಭ್ಯಾಸ ಮಾಡುವುದು. ದರ್ಶನವಿನಯ ಶಂಕಾ ಕಾಂಕ್ಷಾ ಮೊದಲಾದ ದೋಷಗಳಿಂದ ರಹಿತನಾಗಿ ಸಮ್ಯಗ್ದರ್ಶನವನ್ನು ಧಾರಣೆ ಮಾಡುವುದು. ಚಾರಿತ್ರವಿನಯ- ಚಾರಿತ್ರವನ್ನು ನಿರ್ದೋಷ ರೀತಿಯಿಂದ ಪಾಲನೆ ಮಾಡುವುದು. ಉಪಚಾರವಿನಯ - ಆಚಾರ್ಯ ಮೊದಲಾದ ಪೂಜ್ಯ ಪುರುಷರನ್ನು ನೋಡಿ ಎದ್ದು ನಿಲ್ಲುವುದು, ನಮಸ್ಕಾರ ಮಾಡುವುದು. ಇವು ನಾಲ್ಕು ವಿನಯ ತಪನಭೇದಗಳು.

ವೈಯ್ಯಾವೃತ್ಯದಭೇದಗಳು

## ಆಚಾರ್ಯೋಪಾಧ್ಯಾಯತಪಸ್ವಿಶೈಕ್ಷ್ಯಗ್ಲಾನಗಣ-ಕುಲಸಂಘಸಾಧುಮನೋಜ್ಞಾನಾಂ ||೨೪||

ಅರ್ಥ—ಆಚಾರ್ಯ, ಉಪಾಧ್ಯಾಯ ತಪಸ್ವಿ, ಶೈಕ್ಷ್ಯ, ಗ್ಲಾನ, ಗಣ ಕುಲ, ಸಂಘ, ಸಾಧು, ಮತ್ತು ಮನೋಜ್ಞ ಈ ಪ್ರಕಾರವಾಗಿ ೧೦ ವಿಧದ ಮುನಿಗಳ ಸೇವೆಯನ್ನು ಮಾಡುವುದು ವೈಯ್ಯಾವೃತ್ಯವೆಂದು ಹೇಳಲ್ಪಡುತ್ತದೆ. ಆದುದರಿಂದ ಅದರ ಭೇದ ಹತ್ತು ಎಂದು ಹೇಳಲಾಗಿದೆ.

ಆಚಾರ್ಯ—ಯಾವ ಮುನಿಗಳು ತಾನು ಪಂಚಾಚಾರವನ್ನು ಪಾಲನೆ ಮಾಡಿ ಬೇರೆಯವರಿಂದಲೂ ಪಾಲನೆ ಮಾಡಿಸುತ್ತಾರೆಯೋ ಅವರು ಆಚಾರ್ಯರು.

ಉಪಾಧ್ಯಾಯ—ಯಾರು ಬೇರೆ ಸಾಧುಗಳಿಗೆ ಪಠನ ಪಾಠನವನ್ನು ಮಾಡಿಸುತ್ತಾರೆಯೋ ಅವರು ಉಪಾಧ್ಯಾಯರು.

ತಪಸ್ವೀ—ಉಪವಾಸಾದಿ ತಪಶ್ಚರ್ಯೆಯನ್ನು ಮಾಡುವ ಸಾಧುಗಳಿಗೆ ತಪಸ್ವಿ ಎಂದು ಹೆಸರು.

ಶೈಕ್ಷ್ಯ—ಶಾಸ್ತ್ರದ ಅಧ್ಯಯನದಲ್ಲಿಯೇ ತತ್ಪರರಾದ ಮುನಿಗಳು ಶೈಕ್ಷ್ಯರು.

ಗ್ಲಾನ—ರೋಗದಿಂದ ಪೀಡಿತರಾದವರು ಗ್ಲಾನರು.

ಗಣ—ವೃದ್ಧ ಮುನಿಗಳ ಪರಂಪರೆಯಂತೆ ನಡೆಯುವ ಮುನಿಗಳ ಸಮೂಹಕ್ಕೆ ಗಣವೆಂದು ಹೆಸರು.

ಕುಲ—ದೀಕ್ಷೆ ಕೊಡುವಂಥಾ ಆಚಾರ್ಯರ ಶಿಷ್ಯರಿಗೆ ಕುಲವೆಂದು ಹೇಳುತ್ತಾರೆ.

ಸಂಘ—ಋಷಿ, ಯತಿ, ಮುನಿ ಮತ್ತು ಅನಗಾರ ಈ ನಾಲ್ಕು ಪ್ರಕಾರದ ಮುನಿಗಳ ಸಮೂಹಕ್ಕೆ ಸಂಘವೆಂದು ಹೆಸರು.

ಸಾಧು—ಬಹಳ ಸಮಯದ ಮೊದಲು ದೀಕ್ಷಿತರಾದ ಮುನಿಗಳಿಗೆ ಸಾಧುಗಳೆಂದು ಹೆಸರು.

ಮನೋಜ್ಞ—ಲೋಕದಲ್ಲಿ ಯಾರ ಪ್ರಶಂಸೆಯು ವಿಶೇಷವಾಗಿ ಆಗುತ್ತದೆಯೋ ಆ ಸಾಧುಗಳಿಗೆ ಮನೋಜ್ಞ ಸಾಧುಗಳೆಂದು ಹೇಳುತ್ತಾರೆ.

### ಸ್ವಾಧ್ಯಾಯ ತಪದ ಭೇದಗಳು

## ವಾಚನಾಪೃಚ್ಛನಾನುಪ್ರೇಕ್ಷಾಮ್ನಾಯಧರ್ಮೋಪದೇಶಾಃ ॥೨೫॥

ಅರ್ಥ—ವಾಚನಾ, ಗ್ರಂಥಗಳ ನಿರ್ದೋಷ ರೂಪವಾದ ಅರ್ಥ ವಿವರಣೆ ಮತ್ತು ಗ್ರಂಥವನ್ನು ಭವ್ಯಜನರಿಗೆ ಓದಿ ಹೇಳುವುದು. ಪೃಚ್ಛನಾ ಸಂಶಯ ನಿವೃತ್ತಿಗೋಸ್ಕರ ಮತ್ತು ತಿಳಿದ ವಿಷಯವನ್ನು ಖಚಿತಪಡಿಸುವುದಕ್ಕೆ ಪ್ರಶ್ನೆ ಕೇಳುವುದು. ಅನುಪ್ರೇಕ್ಷಾ—ತಿಳಿದ ವಿಷಯಗಳನ್ನು ಅನೇಕ ಸಾರಿ ವಿಚಾರ ಮಾಡುವುದು. ಆಮ್ನಾಯ—ನಿರ್ದೋಷ ರೂಪವಾಗಿ

ಯಥಾಕ್ರಮದಿಂದ ಗ್ರಂಥಗಳ ಪಾಠವನ್ನು ಮಾಡುವುದು. ಧರ್ಮೋಪದೇಶ-ಧರ್ಮದ ಉಪದೇಶವನ್ನು ಮಾಡುವುದು. ಈ ಐದು ಸ್ವಾಧ್ಯಾಯದ ಭೇದಗಳು.

### ವ್ಯುತ್ಸರ್ಗತಪ

## ಬಾಹ್ಯಾಭ್ಯಂತರೋಪಧ್ಯೋಃ ॥೨೬॥

ಅರ್ಥ--ಧನ ಧಾನ್ಯ ದಾಸೀ ದಾಸ ಮೊದಲಾದ ಬಾಹ್ಯಪರಿಗ್ರಹಗಳನ್ನು ಮತ್ತು ಕ್ರೋಧ ಮಾನ ಮೊದಲಾದ ಅಶುಭ ಪರಿಣಾಮ ರೂಪವಾದ ಅಭ್ಯಂತರ ಪರಿಗ್ರಹಗಳನ್ನು ಬಿಡುವುದಕ್ಕೆ ವ್ಯುತ್ಸರ್ಗತಪವೆಂದು ಹೆಸರು. ಈ ಪ್ರಕಾರ ವ್ಯುತ್ಸರ್ಗ ತಪದ ಎರಡು ಭೇದಗಳು.

### ಧ್ಯಾನದ ಲಕ್ಷಣ

## ಉತ್ತಮಸಂಹನನಸ್ಯೈಕಾಗ್ರಚಿಂತಾನಿರೋಧೋ ಧ್ಯಾನಮಾಂತರ್ಮುಹೂರ್ತಾತ್ ॥೨೭॥

ಅರ್ಥ--ಉತ್ತಮ ಸಂಹನನವನ್ನು ಧಾರಣೆ ಮಾಡುವವರು ಅಂತರ್ಮುಹೂರ್ತದವರೆಗೆ ಒಂದೇ ವಿಷಯದಲ್ಲಿ ಚಿತ್ತವನ್ನು ಸ್ಥಿರಗೊಳಿಸುವುದಕ್ಕೆ ಧ್ಯಾನವೆಂದು ಹೆಸರು.

ಒಂದೇ ವಿಷಯದಲ್ಲಿ ಚಿತ್ತವನ್ನು ನೆಲೆಗೊಳಿಸುವುದಕ್ಕೆ ಧ್ಯಾನವೆಂದು ಹೇಳುತ್ತಾರೆ. ಅದು ಉತ್ತಮ ಸಂಹನನವನ್ನು ಧಾರಣೆಮಾಡುವವರಿಗೇನೆಯೇ ಸಾಧ್ಯ ಆಗುತ್ತದೆ. ಮತ್ತು ಆ ಧ್ಯಾನವು ಹೆಚ್ಚಿಂದ ಹೆಚ್ಚು ಅಂತರ್ಮುಹೂರ್ತದವರೆಗೆ ಮಾತ್ರ ಆಗುತ್ತದೆ.

### ಧ್ಯಾನದ ಭೇದಗಳು

## ಆರ್ತರೌದ್ರಧರ್ಮ್ಯಶುಕ್ಲಾನಿ ॥೨೮॥

ಅರ್ಥ—ಆರ್ತಧ್ಯಾನ, ರೌದ್ರಧ್ಯಾನ, ಧರ್ಮ್ಯಧ್ಯಾನ ಮತ್ತು ಶುಕ್ಲಧ್ಯಾನವೆಂದು ಧ್ಯಾನದಲ್ಲಿ ನಾಲ್ಕು ಭೇದಗಳು.

## ಪರೇ ಮೋಕ್ಷಹೇತೂ ||೨೯||

ಅರ್ಥ--ನಾಲ್ಕು ಧ್ಯಾನಗಳಲ್ಲಿ ಧರ್ಮ್ಯ ಮತ್ತು ಶುಕ್ಲ ಧ್ಯಾನಗಳು ಮೋಕ್ಷಕ್ಕೆ ಕಾರಣಗಳಾಗಿರುತ್ತವೆ. ಧರ್ಮಧ್ಯಾನವು ಪರಂಪರೆಯಿಂದಲೂ ಶುಕ್ಲಧ್ಯಾನವು ಸಾಕ್ಷಾತ್ ರೂಪವಾಗಿಯೂ ಮೋಕ್ಷಕ್ಕೆ ಕಾರಣಗಳಾಗಿರುತ್ತವೆ.

### ಆರ್ತಧ್ಯಾನದ ಲಕ್ಷಣ ಮತ್ತು ಭೇದ

## ಆರ್ತಮಮನೋಜ್ಞಸ್ಯ ಸಂಪ್ರಯೋಗೇ ತದ್ವಿಪ್ರ-ಯೋಗಾಯ ಸ್ಮೃತಿಸಮನ್ವಾಹಾರಃ ||೩೦||

ಅರ್ಥ—ತನಗೆ ಅನಿಷ್ಟವಾದ ಪದಾರ್ಥಗಳ ಸಂಯೋಗವಾಗಲು ಅವು ದೂರವಾಗಬೇಕೆಂದು ಅಹರ್ನಿಶಿ ಚಿಂತೆ ಮಾಡುವುದು ಅಥವಾ ವಿಚಾರ ಮಾಡುವುದು ಅನಿಷ್ಟಸಂಯೋಗಜವೆಂಬ ಆರ್ತಧ್ಯಾನವು.

## ವಿಪರೀತಂ ಮನೋಜ್ಞಸ್ಯ ||೩೧||

ಅರ್ಥ—ಸ್ತ್ರೀ ಪುತ್ರ ಮೊದಲಾದ ಇಷ್ಟಪದಾರ್ಥಗಳ ವಿಯೋಗವಾಗಲು ಅವುಗಳ ಪ್ರಾಪ್ತಿಗೋಸ್ಕರ ಪ್ರಯತ್ನ ಮಾಡುವುದು ಮತ್ತು ಅದರ ವಿಚಾರ ಮಾಡುವುದು ಇಷ್ಟವಿಯೋಗಜವೆಂಬ ಆರ್ತಧ್ಯಾನವು.

## ವೇದನಾಯಾಶ್ಚ ||೩೨||

ಅರ್ಥ— ರೋಗ ಮೊದಲಾದವುಗಳು ಒದಗಿದಾಗ ವೇದನೆಯಿಂದ ಸದಾ ಚಿತ್ತದಲ್ಲಿ ಚಿಂತಿತನಾಗಿರುವುದು ವೇದನಾಜನಿತ ಆರ್ತಧ್ಯಾನವು

## ನಿದಾನಂ ಚ ||೩೩||

ಅರ್ಥ— ಮುಂದಿನ ಭವದಲ್ಲಿ ಭೋಗಗಳ ಅಪೇಕ್ಷೆಯಿಂದ ಚಿತ್ತದ ಆಕುಲತೆಯಲ್ಲಿ ಲೀನನಾಗಿರುವುದು ನಿದಾನಜವೆಂಬ ಆರ್ತಧ್ಯಾನವು ಹೀಗೆ ಆರ್ತಧ್ಯಾನದಲ್ಲಿ ನಾಲ್ಕು ಭೇದಗಳು.

ತದವಿರತದೇಶವಿರತಪ್ರಮತ್ತಸಂಯತಾನಾಂ ||೩೪||

ಅರ್ಥ— ಈ ಆರ್ತಧ್ಯಾನವು ಅವಿರತ ಅಂದರೆ ಮೊದಲಿನ ನಾಲ್ಕು ಗುಣಸ್ಥಾನ, ದೇಶವಿರತ ಅಂದರೆ ಐದನೇ ಗುಣಸ್ಥಾನ, ಮತ್ತು ಪ್ರಮತ್ತ ಸಂಯತವೆಂಬ ಆರನೇ ಗುಣಸ್ಥಾನದವರೆಗೆ ಆಗುತ್ತದೆ. ಆರನೇ ಗುಣಸ್ಥಾನದಲ್ಲಿ ನಿದಾನಜ ಆರ್ತಧ್ಯಾನವಾಗುವುದಿಲ್ಲ.

ರೌದ್ರಧ್ಯಾನದ ಭೇದಗಳು

ಹಿಂಸಾನೃತಸ್ತೇಯವಿಷಯಸಂರಕ್ಷಣೇಭ್ಯೋ ರೌದ್ರಮವಿರತದೇಶವಿರತಯೋಃ ||೩೫||

ಅರ್ಥ— ಹಿಂಸೆ, ಅನೃತ, ಚೌರ್ಯ ಮತ್ತು ಪರಿಗ್ರಹಗಳ ಸಂರಕ್ಷಣೆಯ ವಿಷಯದಿಂದ ಉತ್ಪನ್ನವಾದ ಧ್ಯಾನವು ರೌದ್ರ ಧ್ಯಾನವೆಂದು ಹೇಳಲ್ಪಡುತ್ತದೆ. ಆ ರೌದ್ರ ಧ್ಯಾನವು ಅವಿರತ ಮತ್ತು ದೇಶವಿರತ ಗುಣಸ್ಥಾನಗಳಲ್ಲಿ ಆಗುತ್ತದೆ.

ತಾತ್ಪರ್ಯ — ಮೇಲೆ ಹೇಳಿದ ಕಾರಣಗಳ ಭೇದದಿಂದ ರೌದ್ರ ಧ್ಯಾನವನ್ನು ನಾಲ್ಕು ಪ್ರಕಾರವಾಗಿ ವಿಭಾಗಿಸಬಹುದು.

[೧] ಹಿಂಸಾನಂದೀ— ಹಿಂಸೆಯಲ್ಲಿಯೇ ಮಗ್ನನಾಗಿ ಆನಂದ ಪಡುತ್ತಿರುವುದು. ಮತ್ತು ಅದರ ಸಾಧನಗಳನ್ನು ಸಂಗ್ರಹಿಸುತ್ತಿರುವುದು.

[೨] ಮೃಷಾನಂದೀ– ಸುಳ್ಳು ಹೇಳುವುದರಲ್ಲಿ ಸಂತುಷ್ಟನಾಗಿರುವುದು

[೩] ಚೌರ್ಯಾನಂದೀ — ಕಳ್ಳತನ ಮಾಡುವುದರಲ್ಲಿಯೇ ಆನಂದ ಪಡುವುದು ಮತ್ತು ಅದರ ಉಪಾಯಗಳನ್ನು ವಿಚಾರಿಸುತ್ತಿರುವುದು.

[೪] ಪರಿಗ್ರಹಾನಂದೀ- ಪರಿಗ್ರಹಗಳನ್ನು ಕೂಡಿಸುವುದರಲ್ಲಿ ಮತ್ತು ಅವುಗಳನ್ನು ರಕ್ಷಿಸುವುದರಲ್ಲಿಯೇ ಮಗ್ನನಾಗಿರುವುದು ಪರಿಗ್ರಹಾನಂದಿ ರೌದ್ರಧ್ಯಾನವು.

ಧರ್ಮಧ್ಯಾನದ ಭೇದಗಳು.

## ಆಜ್ಞಾಪಾಯವಿಪಾಕಸಂಸ್ಥಾನವಿಚಯಾಯ ಧರ್ಮ್ಯಂ ||೩೬||

ಅರ್ಥ— ಆಜ್ಞಾ, ಅಪಾಯ, ವಿಪಾಕ ಮತ್ತು ಸಂಸ್ಥಾನ ಈ ವಿಷಯಗಳಲ್ಲಿ ವಿಚಾರ ಮಾಡುವುದಕ್ಕೆ ಧರ್ಮ್ಯಧ್ಯಾನವೆಂದು ಹೆಸರು. ಅಂದರೆ ಇವು ಧರ್ಮ್ಯಧ್ಯಾನದಲ್ಲಿ ನಾಲ್ಕು ಭೇದಗಳು:- ಆಜ್ಞಾವಿಚಯ, ಅಪಾಯ ವಿಚಯ, ವಿಪಾಕವಿಚಯ ಮತ್ತು ಸಂಸ್ಥಾನವಿಚಯ.

ಆಜ್ಞಾ ವಿಚಯ:— ಆಗಮದ ಆಜ್ಞೆಯಂತೆ ತತ್ವಗಳ ವಿಚಾರಮಾಡುವುದಕ್ಕೆ ಆಜ್ಞಾವಿಚಯವೆಂದು ಹೆಸರು.

ಅಪಾಯ ವಿಚಯ:— ಸಂಸಾರದಲ್ಲಿರುವ ಅನೇಕ ಸಂಕಟ ಪರಂಪರೆಗಳನ್ನು ವಿಚಾರ ಮಾಡಿ, ದುರ್ಮಾರ್ಗಗಳಿಂದ ದೂರನಾಗುವ ಉಪಾಯವನ್ನು ವಿಚಾರ ಮಾಡುವುದಕ್ಕೆ ಅಪಾಯವಿಚಯ ವೆಂದು ಹೆಸರು.

ವಿಪಾಕ ವಿಚಯ:— ಶುಭಾಶುಭ ಕರ್ಮಗಳು ಮತ್ತು ಅವುಗಳ ಫಲಗಳ ವಿಷಯದಲ್ಲಿ ವಿಚಾರ ಮಾಡಿ ಅದರಿಂದ ಬಿಡುಗಡೆಯನ್ನು ಹೊಂದುವ ಉಪಾಯವನ್ನು ಯೋಚಿಸುವುದಕ್ಕೆ ವಿಪಾಕ ವಿಚಯವೆನ್ನುವರು.

ಸಂಸ್ಥಾನ ವಿಚಯ:— ಲೋಕದ ಆಕಾರ, ಅದರಲ್ಲಿರುವ ದ್ರವ್ಯಗಳು ಆ ದ್ರವ್ಯಗಳ ಸ್ವಭಾವ, ಮೊದಲಾದುವುಗಳನ್ನು ವಿಚಾರ ಮಾಡುವುದಕ್ಕೆ ಸಂಸ್ಥಾನ ವಿಚಯವೆನ್ನುವರು.

ಈ ಧರ್ಮಧ್ಯಾನವು ನಾಲ್ಕನೇ, ಐದನೇ, ಆರನೇ ಮತ್ತು ಏಳನೆಯ ಗುಣಸ್ಥಾನದಲ್ಲಿ ಆಗುತ್ತದೆ.

ಶುಕ್ಲಧ್ಯಾನದ ಪಾತ್ರ



## ಶುಕ್ಲೇಚಾದ್ಯೇ ಪೂರ್ವವಿದಃ ||೩೭||

ಅರ್ಥ — ಪ್ರಾರಂಭದ ಪೃಥಕ್ತ್ವವಿತರ್ಕ ಮತ್ತು ಏಕತ್ವವಿತರ್ಕವೆಂಬ ಎರಡು ಶುಕ್ಲಧ್ಯಾನಗಳು ಚತುರ್ದಶ ಪೂರ್ವಜ್ಞಾನಧಾರಿಗಳಾದ ಶ್ರುತಕೇವಲಿಗಳಿಗೇನೆಯೇ ಆಗುತ್ತವೆ. ಸೂತ್ರದಲ್ಲಿ ಬಂದಿರುವ ಚಕಾರ ಶಬ್ದದಿಂದ ಅವರಿಗೆ ಧರ್ಮ್ಯಧ್ಯಾನವೂ ಆಗುತ್ತದೆಂದು ತಿಳಿಯಬೇಕು.

## ಪರೇ ಕೇವಲಿನಃ ||೩೮||

ಅರ್ಥ— ಮುಂದಿನ ಎರಡು ಶುಕ್ಲಧ್ಯಾನಗಳು ಅಂದರೆ ಸೂಕ್ಷ್ಮಕ್ರಿಯಾಪ್ರತಿಪಾತಿವ್ಯುಪರತಕ್ರಿಯಾನಿವರ್ತಿ ಎಂಬ ಎರಡು ಶುಕ್ಲಧಾನಗಳು ಸಯೋಗಕೇವಲಿ ಮತ್ತು ಅಯೋಗ ಕೇವಲಿಗಳಿಗಾಗುತ್ತವೆ.

### ಶುಕ್ಲಧ್ಯಾನದ ಭೇಧ

## ಪೃಥಕ್ತ್ವೈಕತ್ವವಿತರ್ಕಸೂಕ್ಷ್ಮಕ್ರಿಯಾಪ್ರತಿಪಾತಿವ್ಯುಪರತಕ್ರಿಯಾನಿವರ್ತೀನಿ ||೩೯||

ಅರ್ಥ — ಪೃಥಕ್ತ್ವವಿತರ್ಕ, ಏಕತ್ವವಿತರ್ಕ. ಸೂಕ್ಷ್ಮಕ್ರಿಯಾ ಪ್ರತಿಪಾತಿ ಮತ್ತು ವ್ಯುಪರತಕ್ರಿಯಾ ನಿವರ್ತಿ ಈ ಪ್ರಕಾರ ಶುಕ್ಲಧ್ಯಾನದಲ್ಲಿ ನಾಲ್ಕು ಭೇದಗಳು.

### ಶುಕ್ಲ ಧ್ಯಾನದ ಆಧಾರ

## ತ್ರ್ಯೇಕಯೋಗಕಾಯಯೋಗಾಯೋಗಾನಾಂ||೪೦||

ಅರ್ಥ— ಮೇಲೆ ಹೇಳಿದ ಶುಕ್ಲಧ್ಯಾನಗಳು ಕ್ರಮದಿಂದ ಮೂರು ಯೋಗ ಧಾರಣೆ ಮಾಡುವವರಿಗೆ, ಒಂದು ಯೋಗ ಧಾರಣೆ ಮಾಡುವವರಿಗೆ, ಕಾಯಯೋಗವನ್ನು ಧಾರಣೆ ಮಾಡುವವರಿಗೆ ಮತ್ತು ಅಯೋಗಿಗಳಿಗೆ ಆಗುತ್ತವೆ, ಅಂದರೆ ಪೃಥಕ್ತ್ವವಿತರ್ಕವು ಮನ ವಚನ ಕಾಯವನ್ನು ಧಾರಣೆ ಮಾಡುವಂಥಾ ತ್ರಿಯೋಗಿಗಳಿಗೆ ಆಗುತ್ತದೆ. ಏಕತ್ವವಿತರ್ಕವು ಮೂರು ಯೋಗಗಳಲ್ಲಿ ಯಾವುದಾದರೊಂದು ಯೋಗವನ್ನು

ಧಾರಣೆ ಮಾಡುವವರಿಗಾಗುತ್ತದೆ. ಮೂರನೇ ಸೂಕ್ಷ್ಮಕ್ರಿಯಾಪ್ರತಿಪಾತಿ ಎಂಬ ಶುಕ್ಲಧ್ಯಾನವು ಕಾಯಯೋಗವನ್ನು ಧರಿಸುವ ಸಯೋಗ ಕೇವಲಿಗಳಿಗಾಗುತ್ತದೆ. ನಾಲ್ಕನೆಯ ವ್ಯುಪರತಕ್ರಿಯಾನಿವರ್ತಿ ಎಂಬ ಶುಕ್ಲ ಧ್ಯಾನವು ಅಯೋಗಿಗಳಿಗಾಗುತ್ತದೆ.

### ಮೊದಲಿನ ಎರಡು ಧ್ಯಾನಗಳ ವಿಶೇಷತೆ.

## ಏಕಾಶ್ರಯೇ ಸವಿತರ್ಕವಿಚಾರೇ ಪೂರ್ವೇ ||೪೧||

ಅರ್ಥ— ಶ್ರುತಕೇವಲಿಯ ಆಶ್ರಯದಲ್ಲಿರುವ ಮೊದಲಿನ ಎರಡು ಶುಕ್ಲಧ್ಯಾನಗಳು ವಿತರ್ಕ ಮತ್ತು ವಿಚಾರದಿಂದ ಯುಕ್ತವಾಗಿವೆ.

## ಅವೀಚಾರಂ ದ್ವಿತೀಯಂ ||೪೨||

ಅರ್ಥ — ಆದರೆ ಎರಡನೆಯ ಶುಕ್ಲಧ್ಯಾನವು ವಿಚಾರ ರಹಿತವಾಗಿರುತ್ತದೆ. ಯಾವ ಧ್ಯಾನದಲ್ಲಿ ವಿತರ್ಕ ಮತ್ತು ವಿಚಾರಗಳು ಎರಡೂ ಆಗುತ್ತವೆಯೋ ಆದಕ್ಕೆ ಪೃಥಕ್ತ್ವವಿತರ್ಕವೆಂದೂ, ಯಾವುದರಲ್ಲಿ ಕೇವಲ ವಿತರ್ಕವೇ ಅಲ್ಲದೆ ವಿಚಾರವಾಗುವುದಿಲ್ಲವೋ ಅದಕ್ಕೆ ಏಕತ್ವ ವಿತರ್ಕವೆಂದು ಹೇಳುತ್ತಾರೆ.

ಸೂಕ್ಷ್ಮಕ್ರಿಯೆಯ ಅವಲಂಬನದಿಂದ ಆಗುವ ಶುಕ್ಲಧ್ಯಾನಕ್ಕೆ ಸೂಕ್ಷ್ಮಕ್ರಿಯಾಪ್ರತಿಪಾತಿ ಎಂದು ಹೆಸರು. ಆತ್ಮಪ್ರದೇಶದಲ್ಲಿ ಪ್ರತಿಸ್ಪಂದನೆಯನ್ನು ಉಂಟುಮಾಡುವ ಶ್ವಾಸೋಚ್ಛ್ವಾಸ ಮೊದಲಾದ ಕ್ರಿಯೆಗಳಿಂದ ನಿವೃತ್ತವಾಗಿರುವ ಧ್ಯಾನಕ್ಕೆ ವ್ಯುಪರತಕ್ರಿಯಾನಿವರ್ತಿ ಎಂದು ಹೇಳುತ್ತಾರೆ.

### ವಿತರ್ಕ ಯಾವುದು?

## ವಿತರ್ಕಃ ಶ್ರುತಂ ||೪೩||

ಅರ್ಥ– ಶ್ರುತಜ್ಞಾನಕ್ಕೆ ವಿತರ್ಕವೆನ್ನುತ್ತಾರೆ.

ವಿಚಾರ ಎಂದರೇನು?

**ವಿಚಾರೋಽರ್ಥವ್ಯಂಜನಯೋಗಸಂಕ್ರಾಂತಿಃ ॥೪೪॥**

ಅರ್ಥ—ಅರ್ಥ, ವ್ಯಂಜನ, ಮತ್ತು ಯೋಗಗಳ ಪರಿವರ್ತನೆಗೆ ವಿಚಾರ ವೆಂದು ಹೆಸರು.

ಅರ್ಥಸಂಕ್ರಾಂತಿ—ಧ್ಯಾನಮಾಡುತ್ತಿರುವ ಪದಾರ್ಥವನ್ನು ಬಿಟ್ಟು ಅದರ ಪರ್ಯಾಯಗಳ ಕಡೆ ವಿಚಾರ ಹೋಗುವುದು, ಪರ್ಯಾಯಗಳನ್ನು ಬಿಟ್ಟು ದ್ರವ್ಯದ ಕಡೆ ಹೋಗುವುದು ಅರ್ಥ ಸಂಕ್ರಾಂತಿ.

ವ್ಯಂಜನ ಸಂಕ್ರಾಂತಿ—ಶ್ರುತದ ಒಂದು ವಿಷಯ (ವಚನ) ವನ್ನು ಬಿಟ್ಟು ಇನ್ನೊಂದು ವಿಚಾರವನ್ನು ಅವಲಂಬಿಸುವುದು ಅದನ್ನು ಬಿಟ್ಟು ಮಗು ದೊಂದರ ಅವಲಂಬನೆ ಮಾಡುವದು, ವ್ಯಂಜನ ಸಂಕ್ರಾಂತಿ.

ಯೋಗ ಸಂಕ್ರಾಂತಿ— ಕಾಯಯೋಗವನ್ನು ಬಿಟ್ಟು ಮನೋಯೋಗ ಅಥವಾ ವಚನಯೋಗವನ್ನು ಅವಲಂಬಿಸುವುದು, ಮನೋಯೋಗವನ್ನು ಬಿಟ್ಟು ಇನ್ನು ಬೇರೆ ಯೋಗವನ್ನು ಅವಲಂಬಿಸುವುದು, ಹೀಗೆ ಯೋಗಗಳ ಪರಿವರ್ತನೆಗೆ ಯೋಗಸಂಕ್ರಾಂತಿ ಎನ್ನುವರು.

ಸಮ್ಯಗ್‌ದೃಷ್ಟಿಗಳ ಪರಿಶುದ್ಧತೆಯ ದೃಷ್ಟಿಯಿಂದ ನಿರ್ಜರೆ ಯಲ್ಲಿ ನ್ಯೂನಾಧಿಕತೆ.

**ಸಮ್ಯಗ್ದೃಷ್ಟಿಶ್ರಾವಕವಿರತಾನಂತವಿಯೋಜಕ—ದರ್ಶನಮೋಹಕ್ಷಪಕೋಪಶಮಕೋಪಶಾಂತಮೋಹಕ್ಷಪಕಕ್ಷೀಣಮೋಹಜಿನಾಃ ಕ್ರಮಶೋಽಸಂಖ್ಯೇ-ಯಗುಣನಿರ್ಜರಾಃ ॥೪೫॥**

ಅರ್ಥ— ಸಮ್ಯಗ್‌ದೃಷ್ಟಿ, ಶ್ರಾವಕ, ವಿರತ (ಮುನಿ), ಅನಂತಾನುಬಂಧಿ ಕಷಾಯಗಳನ್ನು ವಿಯೋಜನ ಎಂದರೆ ಅಪ್ರತ್ಯಾಖ್ಯಾನಾದಿ ರೂಪಕ್ಕೆ ಪರಿವ

ತ್ರಿಗಿಸಿಕೊಳ್ಳುವವನು, ದರ್ಶನಮೋಹನೀಯದ ಕ್ಷಯವನ್ನು ಮಾಡುವವನು, ಚಾರಿತ್ರಮೋಹದ ಉಪಶಮವನ್ನು ಮಾಡುವ ಉಪಶಾಂತಮೋಹಗುಣಸ್ಥಾನ ಧಾರಿಯು ಕ್ಷಪಕ ಶ್ರೇಣಿಯನ್ನು ಏರುತ್ತಿರುವ ಮೋಹವನ್ನು ಕ್ಷೀಣ ಮಾಡಿ ರುವ ಹನ್ನೆರಡನೆಯ ಗುಣಸ್ಥಾನಧಾರಿ, ಮತ್ತು ಜಿನೇಂದ್ರ ಭಗವಂತ, ಇವರು ಒಬ್ಬರಿಂದೊಬ್ಬರು ಅಸಂಖ್ಯಾತ ಗುಣ ಅಧಿಕ ನಿರ್ಜರೆಯನ್ನು ಮಾಡುತ್ತಿರು ತ್ತಾರೆ. ಮೇಲೆ ಹೇಳಿದ ಕ್ರಮದಲ್ಲಿ ಒಬ್ಬರಿಂದ ಮತ್ತೊಬ್ಬರಿಗೆ ಆಗುವ ನಿರ್ಜರೆಯಲ್ಲಿ ಅಸಂಖ್ಯಾತಗುಣ ಹೆಚ್ಚು ಆಗುತ್ತದೆಂದು ತಿಳಿಯಬೇಕು.

## ನಿರ್ಗ್ರಂಥ ಸಾಧುಗಳ ಭೇದ

**ಪುಲಾಕಬಕುಶಕುಶೀಲನಿಗ್ರ್ರಂಥಸ್ನಾತಕಾ ನಿಗ್ರ್ರಂಥಾಃ ||೪೬||**

ಅರ್ಥ—ಪುಲಾಕ, ಬಕುಶ, ಕುಶೀಲ, ನಿಗ್ರ್ರಂಥ ಮತ್ತು ಸ್ನಾತಕ ಈ ಐದು ನಿಗ್ರ್ರಂಥ ಸಾಧುಗಳ ಭೇದಗಳು.

ಪುಲಾಕ—ಉತ್ತರ ಗುಣಗಳ ಭಾವನೆಯಿಂದ ಕೂಡಿದವರಾದರೂ ಮೂಲ ಗುಣಗಳಲ್ಲಿ ಕ್ಷೇತ್ರ ಕಾಲಗಳ ಅಪೇಕ್ಷೆಯಿಂದ ದೋಷಗಳು ಸಂಭವಿಸುವವರಿಗೆ ಪುಲಾಕ ಸಾಧುಗಳೆಂದು ಹೇಳುತ್ತಾರೆ.

ಬಕುಶಃ—ಮೂಲಗುಣಗಳನ್ನು ನಿರ್ದೋಷವಾಗಿ ಪಾಲಿಸುತ್ತಿದ್ದರೂ ತನ್ನ ಶರೀರ ಉಪಕರಣಾದಿಗಳ ಶೋಭೆಗಳನ್ನು ವೃದ್ಧಿಗೊಳಿಸುವ ಸ್ವಲ್ಪ ಇಚ್ಛೆಯು ಯಾರ ಹೃದಯದಲ್ಲಿದೆಯೋ ಆ ಸಾಧುಗಳು ಬಕುಶರು.

ಕುಶೀಲ—ಕುಶೀಲರಲ್ಲಿ ಎರಡು ಭೇದ. ಪ್ರತಿಸೇವನಾಕುಶೀಲ ಕಷಾಯ ಕುಶೀಲ.

ಉಪಕರಣ, ಶರೀರಾದಿಗಳ ವಿಷಯದಲ್ಲಿ ಪೂರ್ಣ ವಿರಕ್ತರಾಗದೆ ಮೂಲಗುಣ ಉತ್ತರಗುಣಗಳನ್ನು ಪರಿಪೂರ್ಣವಾಗಿ ಪಾಲಿಸುವವರು ಮತ್ತು ಉತ್ತರಗುಣಗಳಲ್ಲಿ ಕೆಲವು ಸಮಯ ದೋಷ ಉಳ್ಳವರು, ಅವರಿಗೆ ಪ್ರತಿ ಸೇವನಾ ಕುಶೀಲರೆನ್ನುತ್ತಾರೆ.

ಸಂಜ್ವಲನವನ್ನು ಬಿಟ್ಟು ಬೇರೆ ಕಷಾಯಗಳನ್ನು ಜಯಿಸಿದ ಸಾಧು ಗಳಿಗೆ ಕಷಾಯಕುಶೀಲರೆಂದು ಹೇಳುತ್ತಾರೆ.

ನಿರ್ಗ್ರಂಥ :—ಮೋಹನೀಯ ಕರ್ಮವು ಕ್ಷೀಣವಾಗಿರವ ಹನ್ನೆರಡನೆಯ ಗುಣಸ್ಥಾನವರ್ತಿಸಾಧುಗಳಿಗೆ ನಿರ್ಗ್ರಂಥರೆಂದು ಹೇಳುತ್ತಾರೆ.

ಸ್ನಾತಕ :— ಸಮಸ್ತ ಘಾತಿಯಾಕರ್ಮಗಳನ್ನು ಘಾತ ಮಾಡಿದ ಕೇವಲಿ ಗಳಿಗೆ ಸ್ನಾತಕರೆಂದು ಹೇಳುತ್ತಾರೆ.

### ಪುಲಾಕಾದಿಗಳಲ್ಲಿ ವಿಶೇಷತೆ.

## ಸಂಯಮಶ್ರುತಪ್ರತಿಸೇವನಾತೀರ್ಥ ಲಿಂಗಲೇಶ್ಯೋಪ -ಪಾದಸ್ಥಾನವಿಕಲ್ಪತಃ ಸಾಧ್ಯಾಃ ॥೪೭॥

ಅರ್ಥ :— ಮೇಲೆ ಹೇಳಿದ ಪುಲಾಕ ಬಕುಶ ಮೊದಲಾದ ಸಾಧುಗಳಲ್ಲಿ ಸಂಯಮ, ಶ್ರುತ, ಪ್ರತಿಸೇವನೆ, ತೀರ್ಥ, ಲಿಂಗ, ಲೇಶ್ಯೆ ಉಪಪಾದ ಮತ್ತು ಸ್ಥಾನ ಈ ಎಂಟು ಕಾರಣಗಳಿಂದ ಭೇದಗಳಾಗುತ್ತವೆ. ಅಂದರೆ ಈ ಎಂಟು ಕಾರಣಗಳಿಂದ ಆ ಪುಲಾಕಾದಿ ಮುನಿಗಳಲ್ಲಿಯೂ ಭೇದಗಳನ್ನು ಮಾಡಬಹುದು .

ತಾತ್ಪರ್ಯ :— ಈ ಮುನಿಗಳಲ್ಲಿ ಯಾವ ಚಾರಿತ್ರವನ್ನು ಧಾರಣೆ ಮಾಡಿದವರು, ಯಾವ ಜ್ಞಾನವನ್ನು ಧರಿಸಿದವರು, ಬೇರೆ ಯಾರಿಂದಲಾದರೂ ಬಲಾತ್ಕಾರದಿಂದ ದೋಷ ಹೊಂದಿದವರು. ಯಾವ ತೀರ್ಥಂಕರರ ಕಾಲ ದಲ್ಲಿರುವವರು, ದ್ರವ್ಯಲಿಂಗ ಭಾವಲಿಂಗಗಳಲ್ಲಿ ಯಾವ ಲಿಂಗವನ್ನು ಧರಿಸಿ ದವರು, ಲೇಶ್ಯೆಯಾವುದು. ಜನ್ಮವೇನು, ಈ ವಿಷಯಗಳಿಂದ ಭೇದ ಕಲ್ಪನೆ ಯನ್ನು ಮಾಬಹುದು.

ಇತಿ ಶ್ರೀಮದುಮಾಸ್ವಾಮಿ ವಿರಚಿತೇ ಮೋಕ್ಷಶಾಸ್ತ್ರೇ ನವಮೋಧ್ಯಾಯಃ॥

## -ಪ್ರಶ್ನೆಗಳು-

೧—ಸಂವರ ಎಂದರೇನು ? ಅದಕ್ಕೆ ಕಾರಣಗಳು ಯಾವುವು ?

೨—ಗುಪ್ತಿಗಳೆಂದರೇನು ? ಸಮಿತಿಗಳೆಷ್ಟು ?

೩— ಸಲ್ಲೇಖನಾ ಧಾರಣೆ ಮಾಡುವ ಉದ್ದೇಶವೇನು ?

೪—ತಪಸ್ಸಿನ ಭೇದಗಳು ಎಷ್ಟು ? ಅದರ ಉತ್ತರ ಭೇದಗಳೆಷ್ಟು ?

೫—ಧ್ಯಾನದ ಭೇದಗಳನ್ನು ಬರೆದು ಆ ಧ್ಯಾನಗಳು ಯಾರಿಗೆ ಆಗುತ್ತವೆಂದು ಬರೆಯಬೇಕು,

# ಹತ್ತನೆಯ ಅಧ್ಯಾಯ

### ಮೋಕ್ಷತತ್ವದ ವರ್ಣನೆ

**ಮೋಹಕ್ಷಯಾಜ್ಜ್ಞಾನದರ್ಶನಾವರಣಾಂತರಾಯ ಕ್ಷಯಾಚ್ಚ ಕೇವಲಂ ॥೧॥**

ಅರ್ಥ :–ಅಂತರ್ಮುಹೂರ್ತ ಸಮಯ ಮಾತ್ರವಿರುವ ಹನ್ನೆರಡನೆಯ ಗುಣಸ್ಥಾನಪಲ್ಲಿ ಮೋಹನೀಯ ಕರ್ಮವು ಸರ್ವಥಾ ನಷ್ಟವಾಗಲು ಜ್ಞಾನಾವರಣ, ದರ್ಶನಾವರಣ ಮತ್ತು ಅಂತರಾಯ ಕರ್ಮದ ಕ್ಷಯವಾಗುವುದು. ಆಗ ಕೇವಲ ಜ್ಞಾನದ ಉತ್ಪತ್ತಿಯಾಗುತ್ತದೆ. ಅಂದರೆ ಘಾತಿಯಾ ಕರ್ಮಗಳು ನಾಶವಾಗಲು ಕೇವಲ ಜ್ಞಾನವು ಪ್ರಾಪ್ತವಾಗುತ್ತದೆ. ಘಾತಿಯಾ ಕರ್ಮಗಳಲ್ಲಿ ಮೋಹನೀಯ ಕರ್ಮವು ಪ್ರಬಲವಾಗಿದೆ. ಅದು ನಷ್ಟವಾಗಲು ಜ್ಞಾನಾವರಣೀಯ, ದರ್ಶನಾವರಣೀಯ ಮತ್ತು ಅಂತರಾಯ ಕರ್ಮಗಳು ನಷ್ಟವಾಗುತ್ತವೆ. ಮೋಹನೀಯ ಕರ್ಮದ ಕ್ಷಯವು ಮೊದಲು ಆಗುತ್ತದೆ. ಆದುದರಿಂದ ಈ ಸೂತ್ರದಲ್ಲಿ ಮೊದಲು ಮುಖ್ಯರೂಪವಾಗಿ ಅದರ ಉಲ್ಲೇಖನವನ್ನು ಮಾಡಲಾಗಿದೆ.

### ಮೋಕ್ಷದ ಕಾರಣ ಮತ್ತು ಲಕ್ಷಣ

**ಬಂಧಹೇತ್ವಭಾವನಿರ್ಜರಾಭ್ಯಾಂ ಕೃತ್ಸ್ನಕರ್ಮ-ವಿಪ್ರಮೋಕ್ಷೋ ಮೋಕ್ಷಃ ॥೨॥**

ಅರ್ಥ:-ಬಂಧದ ಕಾರಣಗಳ ಅಭಾವವಾಗುವುದರಿಂದ ಮತ್ತು ನಿರ್ಜರೆಯಿಂದ ಜ್ಞಾನಾವರಣ ಮೊದಲಾದ ಸಮಸ್ತ ಕರ್ಮ ಪ್ರಕೃತಿಗಳ ಬಂಧನದಿಂದ ಬಿಡುಗಡೆ ಪಡೆಯುವುದಕ್ಕೆ ಮೋಕ್ಷವೆಂದು ಹೆಸರು. ಅಂದರೆ ಈ ಆತ್ಮ ಪ್ರದೇಶದಿಂದ ಕರ್ಮಗಳು ದೂರವಾಗಲು ಅವುಗಳಿಂದ ಈ ಆತ್ಮನು ಬಿಡುಗಡೆ ಪಡೆಯುತ್ತಾನೆ. ಇದು ಸಂವರ ಮತ್ತು ನಿರ್ಜರೆಯಿಂದಾಗುತ್ತದೆ.

**ಔಪಶಮಿಕಾದಿಭವ್ಯತ್ವಾನಾಂ ಚ ॥೩॥**

ಅರ್ಥ--ಮುಕ್ತ ಜೀವನಲ್ಲಿ ಔಪಶಮಿಕಾದಿ ಭಾವಗಳು ಮತ್ತು ಪಾರಿಣಾಮಿಕ ಭಾವಗಳಲ್ಲಿ ಭವ್ಯತ್ವಭಾವವು ಇಲ್ಲವಾಗುತ್ತದೆ.

## ಅನ್ಯತ್ರ ಕೇವಲಸಮ್ಯಕ್ತ್ವಜ್ಞಾನದರ್ಶನ-
## ಸಿದ್ಧತ್ವೇಭ್ಯಃ ||೪||

ಅರ್ಥ:-ಕೇವಲಸಮ್ಯಕ್ತ್ವ, ಕೇವಲಜ್ಞಾನ, ಕೇವಲದರ್ಶನ, ಮತ್ತು ಸಿದ್ಧತ್ವ ಈ ಭಾವಗಳನ್ನು ಬಿಟ್ಟು ಇತರ ಸರ್ವಭಾವಗಳ ಅಭಾವವು ಮುಕ್ತಿಯಲ್ಲಿ ಆಗುತ್ತದೆ. ಅಂದರೆ ಮುಕ್ತಿಯಲ್ಲಿ ಜೀವತ್ವವೆಂಬ ಪಾರಿಣಾಮಿಕ ಭಾವ ಮತ್ತು ಕರ್ಮದ ಕ್ಷಯದಿಂದ ಉತ್ಪನ್ನವಾಗುವ ಆತ್ಮೀಯ ಭಾವಗಳು ಇರುತ್ತವಲ್ಲದೆ ಬೇರೆ ಭಾವಗಳು ಇರುವುದಿಲ್ಲ. ಅನಂತಜ್ಞಾನಾದಿಗಳೊಡನೆ ಇರುವ ಅನಂತ ವೀರ್ಯ, ಅನಂತಸುಖ ಮೊದಲಾದ ಗುಣಗಳೂ ಅಲ್ಲಿ ಇರುತ್ತವೆ.

### ಕರ್ಮಕ್ಷಯದ ಅನಂತರ ಏನು ?

## ತದನಂತರಮೂರ್ಧ್ವಂ ಗಚ್ಛತ್ಯಾಲೋಕಾಂತಾತ್||೫||

ಅರ್ಥ— ಸಮಸ್ತ ಕರ್ಮಗಳು ಕ್ಷಯವಾದನಂತರ ಈ ಮುಕ್ತ ಜೀವರು ಲೋಕದ ಅಗ್ರಭಾಗದವರೆಗೆ ಮೇಲೆ ಹೋಗುತ್ತಾರೆ.

### ಮೇಲೆ ಹೋಗಲು ಏನು ಕಾರಣ. ?

## ಪೂರ್ವಪ್ರಯೋಗಾದಸಂಗತ್ವಾದ್‌ಬಂಧಚ್ಛೇದಾತ್ತ-
## ಥಾಗತಿಪರಿಣಾಮಾಚ್ಚ ||೬||

ಅರ್ಥ :— ಪೂರ್ವಪ್ರಯೋಗ – ಪೂರ್ವಸಂಸ್ಕಾರದಿಂದ, ಕರ್ಮದ ಸಂಪರ್ಕವಿಲ್ಲದುದರಿಂದ, ಕರ್ಮಬಂಧದ ವಿಚ್ಛೇದವಾಗಿರುವುದರಿಂದ ಮತ್ತು ಸ್ವಾಭಾವಿಕವಾಗಿ ಮೇಲೆ ಹೋಗುವ ಸ್ವಭಾವಯುಕ್ತನಾಗಿರುವುದರಿಂದ ಈ ಜೀವನು ಮೇಲೆಯೇ ಹೋಗುತ್ತಾನೆ.

ಇದಕ್ಕೆ ದೃಷ್ಟಾಂತ

**ಆವಿದ್ಧಕುಲಾಲಚಕ್ರವದ್ವ್ಯಪಗತಲೇಪಾಲಾಬುವ ದೇರಂಡಬೀಜವದಗ್ನಿಶಿಖಾವಚ್ಚ॥೭॥**

ಅರ್ಥ :—ಈ ಜೀವನು ಕರ್ಮ ಬಂಧನದಿಂದ ಮುಕ್ತನಾದನಂತರ ಮೇಲೆ ಹೋಗುವನೆಂಬುದಕ್ಕೆ ಮೇಲೆ ಕೊಟ್ಟನಾಲ್ಕು ಕಾರಣಗಳನ್ನು ಈ ಸೂತ್ರದಲ್ಲಿ ಹೇಳುವ ನಾಲ್ಕು ದೃಷ್ಟಾಂತಗಳೊಡನೆ ಹೋಲಿಸಿ ನೋಡಬೇಕು.

[ ೧ ] ಯಾವ ಪ್ರಕಾರವಾಗಿ ಕುಂಬಾರನ ಚಕ್ರವು ಪೂರ್ವಪ್ರಯೋಗ ದಿಂದ ಅಂದರೆ ಒಂದು ಸಾರಿ ತಿರುಗಿಸಿ ಬಿಡುವುದರಿಂದ ಮೊದಲಿನ ವೇಗ ದಿಂದಲೇ ತಿರುಗುತ್ತಾ ಇರುತ್ತದೆಯೋ ಅದೇ ಪ್ರಕಾರವಾಗಿ ಈ ಜೀವನೂ ಸಂಸಾರ ಅವಸ್ಥೆಯಲ್ಲಿರುವಾಗಲೇ ಮೋಕ್ಷವನ್ನು ಪಡೆಯಲಿಕ್ಕೆ ಪ್ರಯತ್ನ, ಪ್ರಯೋಗಗಳನ್ನು ಮಾಡುತ್ತಿರುತ್ತಾನೆ. ಆ ಪ್ರಯೋಗದ ವೇಗದಿಂದ ಅವನು ಮೇಲೆ ಹೋಗುವನು.

[ ೨ ] ಮಣ್ಣಿನ ಲೇಪವು ದೂರವಾದ ಕೂಡಲೇ ಅಲಾಬು ಅಂದರೆ ಸೋರೆ ಬುರುಡೆಯು ಯಾವ ಪ್ರಕಾರವಾಗಿ ನೀರಿನ ಮೇಲೆ ಬರುತ್ತದೆಯೋ ಅದೇ ಪ್ರಕಾರವಾಗಿ ಕರ್ಮಲೇಪದಿಂದ ಮುಕ್ತನಾದ ಜೀವನು ಮೇಲೆಯೇ ಹೋಗುತ್ತಾನೆ. ಸೋರೆ ಬುರುಡೆಯ ಮೇಲೆ ಮಣ್ಣಿನ ಲೇಪವನ್ನು ಮಾಡಿ ಅದನ್ನು ನೀರಿನಲ್ಲಿ ಹಾಕಿದರೆ ಅದು ಭಾರದಿಂದ ನೀರಿನಲ್ಲಿ ಮುಳುಗಿ ಹೋಗುತ್ತದೆ. ಆದರೆ ಆ ಮಣ್ಣಿನ ಲೇಪವು ದೂರವಾದ ಕೂಡಲೇ ಆ ಸೋರೆ ಬುರುಡೆಯು ಹಗುರವಾಗಿ ಮೇಲೆ ಬರುತ್ತದೆ. ಹೀಗೆ ಕರ್ಮ ಭಾರದಿಂದ ಈ ಜೀವನು ಸಂಸಾರದಲ್ಲಿದ್ದರೂ ಕರ್ಮಭಾರವು ದೂರವಾದ ಕೂಡಲೇ ಮೇಲೆ ಹೋಗುತ್ತಾನೆ.

[ ೩ ] ಪಕ್ವವಾಗಿ ಒಣಗಿದ ಏರಂಡ ಬೀಜವು ಯಾವ ಪ್ರಕಾರವಾಗಿ ಬಂಧನ ದೂರವಾಗಲು ಮೇಲೆ ಹಾರಿ ಹೋಗುತ್ತದೆಯೋ ಅದೇ ಪ್ರಕಾರ ವಾಗಿ ಈ ಜೀವನೂ ಕರ್ಮಬಂಧನದಿಂದ ಮುಕ್ತನಾಗಲು ಮೇಲೆಯೇ ಹಾರುತ್ತಾನೆ.

[ ೪ ] ಅಗ್ನಿಯ ಜ್ವಾಲೆಯು ಸ್ವಾಭಾವಿಕವಾಗಿ ಮೇಲ್ಮುಖವಾಗಿ ಚಾಚಿಕೊಳ್ಳುತ್ತದೆ. ಹೇಗೆ ಹಿಡಿದರೂ ಅಗ್ನಿಯ ಜ್ವಾಲೆ ಮೇಲ್ಮುಖ ವಾಗಿಯೇ ಉರಿಯುವುದು ಅದರ ಸ್ವಭಾವ. ಇದೇ ಪ್ರಕಾರವಾಗಿ ಕರ್ಮದ ಅಭಾವದಿಂದ ಕೂಡಿದ ಜೀವನ ಸ್ವಭಾವವು ಊರ್ಧ್ವಗಮನ ಸ್ವರೂಪವೇ ಆಗಿದೆ.

ಲೋಕಾಗ್ರದ ಮೇಲೆ ಹೋಗದಿರುವ ಕಾರಣ.

## ಧರ್ಮಾಸ್ತಿಕಾಯಾಭಾವಾತ್ ॥೮॥

ಅರ್ಥ— ಧರ್ಮಾಸ್ತಿ ಕಾಯವು ಮುಂದೆ ಇಲ್ಲದಿರುವುದರಿಂದ ಮುಕ್ತ ಜೀವನು ಲೋಕಾಗ್ರಭಾಗದಿಂದ ಮುಂದೆ ಹೋಗುವುದಿಲ್ಲ.ಯಾಕೆಂದರೆ ಜೀವ ಪುದ್ಗಲಗಳ ಗಮನವು ಧರ್ಮ ದ್ರವ್ಯದ ಸಹಾಯದಿಂದಲೇ ಆಗುತ್ತದೆ. ಅಲೋಕಾಕಾಶದಲ್ಲಿ ಧರ್ಮದ್ರವ್ಯವಿಲ್ಲ. ಆದುದರಿಂದ ಅಲ್ಲಿ ಗಮನವೂ ಇಲ್ಲವೆಂದು ತಿಳಿಯಬೇಕು. ಈ ಮುಕ್ತ ಜೀವನು ಲೋಕಾಗ್ರಭಾಗದಲ್ಲಿರುವ ಸಿದ್ಧ ಶಿಲೆಯಲ್ಲಿ ಅನಂತ ಸುಖಸಮುದ್ರದಲ್ಲಿ ಮಗ್ನನಾಗಿ ಅನಂತಕಾಲದವರೆಗೆ ನಿಲ್ಲುವನು.

ಮುಕ್ತ ಜೀವರಲ್ಲಿ ಭೇದ

## ಕ್ಷೇತ್ರಕಾಲಗತಿಲಿಂಗತೀರ್ಥ ಚಾರಿತ್ರಪ್ರತ್ಯೇಕ ಬುದ್ಧಬೋಧಿತ ಜ್ಞಾನಾವಗಾಹನಾಂತರ ಸಂಖ್ಯಾಲ್ಪ ಬಹುತ್ವತಃ ಸಾಧ್ಯಾಃ ॥೯॥

ಅರ್ಥ :— ಕ್ಷೇತ್ರ, ಕಾಲ, ಗತಿ, ಲಿಂಗ, ತೀರ್ಥ, ಚಾರಿತ್ರ ಪ್ರತ್ಯೇಕ ಬುದ್ಧ ಬೋಧಿತಬುದ್ಧ, ಜ್ಞಾನ, ಅವಗಾಹನ, ಅನಂತರ, ಸಂಖ್ಯಾ, ಅಲ್ಪಬಹುತ್ವ, ಈ ಹನ್ನೆರಡು ಅನುಯೋಗ ಭೇದಗಳಿಂದ ಮುಕ್ತ ಜೀವರಲ್ಲಿಯೂ ಭೇದ ವಾಗುತ್ತದೆ.

ಕ್ಷೇತ್ರ— ಕೆಲವರು ಭರತಕ್ಷೇತ್ರದಿಂದ ಸಿದ್ಧರಾದವರು, ಕೆಲವರು ಐರಾವತದಿಂದ, ಕೆಲವರು ವಿದೇಹ ಕ್ಷೇತ್ರದಿಂದ, ಹೀಗೆ ಕ್ಷೇತ್ರ ಭೇದದ ದೆಸೆಯಿಂದ ಸಿದ್ಧರಲ್ಲಿ ಭೇದವಿದೆ.

ಕಾಲ— ಉತ್ಸರ್ಪಿಣೀ ಅವಸರ್ಪಿಣೀ ಕಾಲದ ಭೇದದಿಂದ ಸಿದ್ಧರಲ್ಲಿಯೂ ಭೇದವಾಗುತ್ತದೆ.

ಗತಿ— ಗತಿಯ ಅಪೇಕ್ಷೆಯಿಂದ ಭೇದವಿದೆ.

ಲಿಂಗ— ಯದ್ಯಪಿ ಸಿದ್ಧರಾಗುವ ಸಮಯದಲ್ಲಿ ಯಾವ ಲಿಂಗವೂ ಇರುವುದಿಲ್ಲ. ಆದರೂ ದ್ರವ್ಯ ಭಾವಲಿಂಗಗಳ ಅಪೇಕ್ಷೆಯಿಂದ ಭೇದ ಮಾಡಬಹುದು. ಅಂದರೆ ಸಿದ್ಧರಾಗುವ ಮೊದಲು ದ್ರವ್ಯಪುರುಷ ಲಿಂಗ ವಿತ್ತು. ಭಾವಲಿಂಗವು ಮೂರರಲ್ಲಿ ಯಾವುದೂ ಇರಬಹುದು.

ತೀರ್ಥ— ಕೆಲವರು ತೀರ್ಥಂಕರರಾಗಿ ಸಿದ್ಧರಾಗುವವರು. ಕೆಲವರು ತೀರ್ಥಂಕರರಾಗದೆ ಸಿದ್ಧರಾಗುವವರು. ಕೆಲವರು ತೀರ್ಥಂಕರರ ಸಮಯದಲ್ಲಿ ಸಿದ್ಧರಾಗುವರು. ಕೆಲವರು ತೀರ್ಥಂಕರರಿಲ್ಲದ ಸಮಯದಲ್ಲಿಸಿದ್ಧರಾಗುವರು.

ಚಾರಿತ್ರ— ಚಾರಿತ್ರದ ಅಪೇಕ್ಷೆಯಿಂದ ಭೇದ, ಯಥಾಖ್ಯಾತಚಾರಿತ್ರ ದಿಂದಲೇ ಸಿದ್ಧರಾಗುವುದಾದರೂ ಭೂತಪೂರ್ವನಯದ ಅಪೇಕ್ಷೆಯಿದ ಬೇರೆ ಬೇರೆ ಚಾರಿತ್ರಗಳ ಅಪೇಕ್ಷೆಯಿಂದ ಭೇದವಾಗುತ್ತದೆ.

ಪ್ರತ್ಯೇಕ ಬುದ್ಧ ಬೋಧಿತ ಬುದ್ಧ— ಕೆಲವರು ಸ್ವಯಂ ಪ್ರಜ್ಞರಾಗಿ ಸಿದ್ಧರಾಗುವರು, ಕೆಲವರು ಬೇರೆಯವರ ಉಪದೇಶದ ಪ್ರಭಾವದಿಂದ ವಿರಕ್ತರಾದವರು. ಹೀಗೆ ಭೇದವಾಗುತ್ತದೆ.

ಜ್ಞಾನ— ಕೆಲವರು ಒಂದೇ ಜ್ಞಾನದಿಂದ, ಕೆಲವರು ಭೂತ ಪೂರ್ವ ನಯ ಅಪೇಕ್ಷೆಯಿಂದ, ಕೆಲವು ಜ್ಞಾನಗಳಿಂದ ಮುಕ್ತರಾಗುವರು.

ಅವಗಾಹನಾ— ಉತ್ಕೃಷ್ಟ ಮಧ್ಯಮ ಜಘನ್ಯ ಅವಗಾಹನೆಗಳಿಂದ ಮುಕ್ತರಾಗುವವರಲ್ಲಿ ಭೇದ.

ಅಂತರ— ಒಂದು ಸಿದ್ಧರಾದನಂತರ ಇನ್ನೊಂದು ಸಿದ್ಧರಾಗವವರೆಗೆ ಅಂತರ ಜಘನ್ಯ ಒಂದು ಸಮಯ ಮತ್ತು ಉತ್ಕೃಷ್ಟ ೪ ಸಮಯ. ವಿರಹ

ಕಾಲ ಜಘನ್ಯ ಒಂದು ಸಮಯ ಮತ್ತು ಉತ್ಕೃಷ್ಟ ಆರು ತಿಂಗಳು.

ಸಂಖ್ಯಾ— ಜಘನ್ಯದಿಂದ ಒಂದು ಸಮಯದಲ್ಲಿ ಒಬ್ಬರೇ ಸಿದ್ಧರಾಗುತ್ತಾರೆ. ಉತ್ಕೃಷ್ಟದಿಂದ ೧೦೮ ಸಿದ್ಧರಾಗುತ್ತಾರೆ.

ಅಲ್ಪ ಬಹುತ್ವ—ಸಮುದ್ರ ಮೊದಲಾದ ಜಲ ಕ್ಷೇತ್ರಗಳಿಂದ ಸಿದ್ಧರಾಗುವವರು ಕಡಿಮೆ. ವಿದೇಹಾದಿ ಕ್ಷೇತ್ರಗಳಿಂದ ಸಿದ್ಧರಾಗುವವರು ಹೆಚ್ಚು.

ಈಪ್ರಕಾರ ಬಾಹ್ಯನಿಮಿತ್ತ ಭೇದಗಳಿಂದ ಸಿದ್ಧರಾಗುವವರಲ್ಲಿಯೂ ಭೇದವನ್ನು ಮಾಡಬಹುದು.

ಇತಿ ಶ್ರೀಮದುಮಾಸ್ವಾಮಿವಿರಚಿತೇ ಮೋಕ್ಷಶಾಸ್ತ್ರೇ
ದಶಮೋಧ್ಯಾಯಃ॥

ಅಕ್ಷರಮಾತ್ರಪದಸ್ವರಹೀನಂ, ವ್ಯಂಜನಸಂಧಿವಿವರ್ಜಿತರೇಫಂ.
ಸಾಧುಭಿರತ್ರ ಮಮ ಕ್ಷಮಿತವ್ಯಂ ಕೋ ನ ವಿಮುಹ್ಯತಿ ಶಾಸ್ತ್ರಸಮುದ್ರೇ
ದಶಾಧ್ಯಾಯೇ ಪರಿಚ್ಛಿನ್ನೇ । ತತ್ವಾರ್ಥೇ ಪಠಿತೇ ಸತಿ ।
ಫಲಂ ಸ್ಯಾದುಪವಾಸಸ್ಯ । ಭಾಷಿತಂ ಮುನಿಪುಂಗವೈಃ ।
ತತ್ವಾರ್ಥಸೂತ್ರಕರ್ತಾರಂ ಗೃದ್ಧಪಿಚ್ಛೋಪಲಕ್ಷಿತಂ ।
ವಂದೇ ಗಣೇಂದ್ರ ಸಂಜಾತಮುಮಾಸ್ವಾಮಿಮುನೀಶ್ವರಂ

ಇತಿ ತತ್ವಾರ್ಥಸೂತ್ರಂ ಸಮಾಪ್ತಂ

